

## ನೃತ್ಯಸರಸ್ವತಿ

ಪೂರ್ಣಮೆನಿಪುದು ಹೃದಯಭಾಷಿಕೆ ವರ್ಣಪದವಚನಂಗಳೊಳ್ |
ಕರ್ಣದೃಶೆಗಳ ಕುತುಕವಾಗಿಪ ಗಾನನಟನಗಳೊಂದಿರಲ್ ||
ತೂರ್ಣದವಿರಳ ಮತಿಮನಂಗಳ ಪಾಕಮದೆನುವ ರೂಪಿವಳ್ |
ಅರ್ಣವಜೆ ಗಿರಿಜೆಯರ ಚಿದ್ದ್ಯುತಿ ಜೀವರಸಜೆ ಸರಸ್ವತೀ ||

ಕನ್ನಡ ಕಾವ್ಯಮಾಲೆ

# ಸಾಹಿತ್ಯಶಕ್ತಿ

## ಹನ್ನೆರಡು ಉಪನ್ಯಾಸಗಳು

**ಡಿ. ವಿ. ಜಿ.**

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ।
ಭೂಮಿಗದನೆಟುಕಿಸುವೆನೆಂಬೆಸಕ ರಾಷ್ಟ್ರಕತೆ॥





ಮೈಸೂರು
ಕಾವ್ಯಾಲಯ : : ಪ್ರಕಾಶಕರು



ಸಾಹಿತ್ಯಶಕ್ತಿಯ ಮೂಲಾದರ್ಶ

**ಮಹರ್ಷಿ ವಾಲ್ಮೀಕಿ : ಲವ ಕುಶರಿಗೆ ರಾಮಾಯಣ ಪಾಠ**

" ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ."—(ಪು. ೧೦)



ಸಾಹಿತ್ಯಶಕ್ತಿಯ ಮಹಾನಿಧಿ

**ಮಹರ್ಷಿ ವೇದವ್ಯಾಸ**

ರಾಜ್ಯಂ ಹಿ ಸುಮಹತ್ತನ್ತ್ರಂ ಧಾರ್ಯತೇ ನಾಕೃತಾತ್ಮಭಿಃ || —ಶಾಂತಿಪರ್ವ

"ಸಾಮಗ್ರ್ಯದಿಂ ಕಾಣಲ್ ಅದುವೆ ದಿವ್ಯಜ್ಞಾನ."— (ಪು. ೧೦)



ಸಾಹಿತ್ಯದಿಂದ ರಾಜ್ಯನಿರ್ವಾಹಕ್ಕೆ ಸ್ಫೂರ್ತಿಪಡೆದ

**ಗ್ಲ್ಯಾಡ್‌ಸ್ಟನ್**

**W. E. Gladstone (1809-1898)**

"ಭೂವಿಂಗಡನೆಟುಕಿಸುವೆನ್ ಎಂಬೆಸಕ ರಾಜ್ಯಕತೆ."—(ಪು. ೧೦)



ಪ್ರೊಫೆಸರ್ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು, ಎಂ.ಎ.

# ಸಮರ್ಪಣೆ

ನಾನು ಲೇಖನವೃತ್ತಿಗೆ ಹೊರಡುವೆನೆಂದಾಗ ಯಾವ ಹಿರಿಯರು ಮೊದಲು ಅದು ಮರಳ್ಗಾಡಿನ ಬೇಸಾಯವೆಂದು ಹೇಳಿದರೂ, ಬಳಿಕ ಅದಕ್ಕೆ ಪ್ರೀತ್ಯುತ್ಸಾಹಗಳಿಂದ ನೀರೆರೆದರೋ

ಯಾರು ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಅದು ಹುಟ್ಟಿದಂದಿನಿಂದ ತಮ್ಮ ಕಡೆಯ ದಿನದ ವರೆಗೂ ಆಧಾರಸ್ತಂಭದಂತಿದ್ದರೋ

ಯಾರು ಕನ್ನಡದಲ್ಲಿ ವಿಜ್ಞಾನವಿದ್ಯಾಪ್ರಚಾರಕ್ಕೆ ಮಾರ್ಗದರ್ಶಕರಾದವರ ಅಗ್ರಶ್ರೇಣಿಯಲ್ಲಿದ್ದರೋ

ಯಾರ ಸ್ನೇಹವು ಅದರ ಪ್ರಾಪ್ತಿಯಿದ್ದವರಿಗೆ ಪೋಷಕವಾದಂತೆ ಪಾವಕವೂ ಆಗಿದ್ದಿತೋ

ಆ ಸತ್ಯನಿಷ್ಠರಾದ

**ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರ**

ನಿರ್ಮಲ ಸ್ಮೃತಿಗೆ

---

ಯಥಾ ವೃಕ್ಷಸ್ಯ ಸಂಪುಷ್ಪಿತಸ್ಯ ದೂರಾದ್ಗಂಧೋ ವಾತಿ।
ಏವಂ ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತಿ॥—ಶ್ರುತಿ

**ಡಿ. ವಿ. ಜಿ.**

ವಾಙ್ ಮೇ ಮನಸಿ ಪ್ರತಿಷ್ಠಿತಾ |
ಮನೋ ಮೇ ವಾಚಿ ಪ್ರತಿಷ್ಠಿತಂ ||

—ಐತರೇಯ ಶ್ರುತಿ

("ಮಾತು ನನ್ನ ಮನಸ್ಸಿನಲ್ಲಿ ನೆಲಸಿರತಕ್ಕದ್ದು ; ಮನಸ್ಸು ನನ್ನ ಮಾತಿನಲ್ಲಿ ನೆಲಸಿರತಕ್ಕದ್ದು".)

ಚಿತ್ತಿಃ ಸ್ರುಕ್ | ಚಿತ್ತಮಾಜ್ಯಮ್ | ವಾಗ್ವೇದಿಃ | ಆಧೀತಂ ಬರ್ಹಿಃ | ಕೇತೋಽಗ್ನಿಃ | ವಿಜ್ಞಾನಮಗ್ನಿಃ | ವಾಕ್ಪತಿರ್ಹೋತಾ | ಮನ ಉಪವಕ್ತಾ | ಪ್ರಾಣೋ ಹವಿಃ | ಸಾಮಾಧ್ವರ್ಯುಃ ||

—ತೈತ್ತಿರೀಯ ಶ್ರುತಿ

["ವಿಕಾರವಿಲ್ಲದ ಅಂತಃಕರಣವೇ ಸವ್ರುಟು ; ಆಕಾರ ತಳೆದ ಅಂತಃಕರಣವೇ ಆಜ್ಯ ; ವಾಕ್ಕೇ ಯಜ್ಞವೇದಿಕೆ ; ಸುಡಿಯುವ ಮಾತೇ ದರ್ಭೆ ; ಕೇವಲ ಜ್ಞಾನವೇ ಅಗ್ನಿ (ಆಹವನೀಯ) ; ಉದ್ದೇಶಮಿಶ್ರಿತ ಜ್ಞಾನವೇ ಇನ್ನೊಂದಗ್ನಿ (ಗಾರ್ಹಪತ್ಯ) ; ವಾಕ್ಯಶಕ್ತಿಯುಳ್ಳವನೇ ಮಂತ್ರಹೇಳುವ ಹೋತೃ ; ಮನಸ್ಸೇ ಸರಿನೋಡುವ ಉಪವಕ್ತೃ ; ಪ್ರಾಣವೇ ಹವಿಸ್ಸು ; ಗಾನವೇ ಪುರೋಹಿತ"—ಈ ವಿಧವಾದದ್ದು ಸಾರಸ್ವತ ಯಜ್ಞ.]

---

"Who sighs for beauty is a poet;
Who strives for it is a statesman."

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ ;
ಭೂಮಿಗದನೆಟುಕಿಸುವೆನೆಂಬೆಸಕ ರಾಜ್ಯಕತೆ ;
ಆಮೂಲಮದರಿರವನ್ ಅರಸಲ್ ಅದು ವಿಜ್ಞಾನ ;
ಸಾಮಗ್ರ್ಯದಿಂ ಕಾಣಲ್ ಅದುವೆ ದಿವ್ಯಜ್ಞಾನ.

# ಮುನ್ನುಡಿ

## ಮೊದಲನೆಯ ಮುದ್ರಣದ್ದು

ನನ್ನ ಹಳೆಯ ಉಪನ್ಯಾಸಗಳಲ್ಲಿ ಕೆಲವನ್ನು ಸಂಗ್ರಹಮಾಡಿ ಪುಸ್ತಕವಾಗಿ ಪ್ರಕಟಿಸಬೇಕೆಂಬ ಯೋಚನೆ ಶ್ರೀ ಚಿದಂಬರಂ ಅವರದು. ಅವರು ಆ ಯೋಚನೆಯನ್ನು ಕೊಂಚಮಟ್ಟಿಗೆ ಕಾರ್ಯರೂಪಕ್ಕೆ ತಂದದ್ದಾದ ಬಳಿಕ ಈ ಅವಕಾಶದಲ್ಲಿ ಕಾವ್ಯತತ್ತ್ವವನ್ನು ಕುರಿತ ನನ್ನ ಆಲೋಚನೆಗಳಿಗೆ ಒಂದು ಸಮಗ್ರ ರೂಪವನ್ನು ಕೊಡೋಣ ಎಂಬ ಉದ್ದೇಶ ನನ್ನ ಮನಸ್ಸಿನಲ್ಲಿ ಮೂಡಿತು. ಅದರಂತೆ ಬಂದಿರುವವು ಈ ಪುಸ್ತಕದಲ್ಲಿಯ ಮೊದಲನೆಯ ಮತ್ತು ಕೊನೆಯ ಪ್ರಬಂಧಗಳು. ಹಿಂದೆ ಈ ವಿಷಯದಲ್ಲಿ ಯಾವ ಅಂಶಗಳನ್ನು ನಾನು ತಕ್ಕಷ್ಟು ಸ್ಪಷ್ಟಪಡಿಸಿಲ್ಲವೆಂದು ತಿಳಿದುಕೊಂಡಿದ್ದೇನೋ ಅಂಥ ಅಂಶಗಳನ್ನು ಇಲ್ಲಿ ತೆಗೆದುಕೊಂಡಿದ್ದೇನೆ. ಹಿಂದಿನ ಉಪನ್ಯಾಸಗಳನ್ನೂ ಈಗಿನವನ್ನೂ ಒಟ್ಟಿಗೆ ಏಕವಾಕ್ಯವೆಂಬಂತೆ ವಾಚಕರು ಭಾವಿಸಬೇಕೆಂದು ಬೇಡಿಕೊಳ್ಳುತ್ತೇನೆ.

ಕಾವ್ಯತತ್ತ್ವದ ಮೇಲೆ ಶಾಸ್ತ್ರಗ್ರಂಥ ಬರೆಯುವ ಯೋಚನೆ ನನಗೆ ಎಂದೂ ಬಂದಿಲ್ಲ. ಅದಕ್ಕೆ ಬೇಕಾದ ಪಾಂಡಿತ್ಯವನ್ನಾಗಲಿ ಪ್ರತಿಭೆಯನ್ನಾಗಲಿ ನಾನು ಸಂಪಾದಿಸಿಲ್ಲ. ಕೆಲಮಂದಿ ವಿದ್ವದ್ರಸಿಕರ ಸ್ನೇಹದ ಯೋಗ ನನಗೆ ದೊರೆತಿತ್ತು. ಅವರೊಡನೆ ಆಡಿದ ಮಾತುಕಥೆಗಳ ಮೂಲಕ ಉದಿಸಿದ ಆಲೋಚನೆಗಳನ್ನು ಇಲ್ಲಿ ಗುರುತುಮಾಡಿದ್ದೇನೆ. ಅದಕ್ಕಿಂತ ಹೆಚ್ಚಿನ ಮನ್ನಣೆ ನನ್ನ ಮಾತಿಗೆ ಸಲ್ಲದು.

ವಾಚಕರಿಗೆ ಈ ಪುಸ್ತಕದಲ್ಲಿ ಇಲ್ಲಲ್ಲಿ ಚರ್ವಿತಚರ್ವಣದ ಅನುಭವವಾಗಬಹುದು. ಈ ಉಪನ್ಯಾಸಗಳು ಅನೇಕ ಸಂದರ್ಭಗಳಲ್ಲಿ ಅನೇಕ ವಿಧದ ಗೋಷ್ಠಿಗಳಿಗೆ ಕೊಟ್ಟವಾದ ಕಾರಣ, ಮುಖ್ಯಾಭಿಪ್ರಾಯಗಳು ಆಗಾಗ ಪುನರುಕ್ತವಾಗಿರುವುದು ಸ್ವಾಭಾವಿಕ. ಪುನರುಕ್ತಿಗಳನ್ನೆಲ್ಲ ತೆಗೆದುಹಾಕುವ ಪ್ರಯತ್ನ ಮಾಡಿದ್ದಿದ್ದರೆ ಉಪನ್ಯಾಸಧೋರಣೆಯ ಸಹಜತೆಗೆ ಊನವಾಗುತ್ತಿತ್ತೇ ಹೊರತು ಗುಣವೇನೂ ಉಂಟಾಗುತ್ತಿರಲಿಲ್ಲ. ಅದಕ್ಕೆ ಬದಲಾಗಿ ಹೊಸದಾಗಿಯೇ ಬರವಣಿಗೆ ಆಗಬೇಕಾಗುತ್ತಿತ್ತು. ಅದಕ್ಕೆ ಬೇಕಾದ ಬಿಡುವು ನನಗಿಲ್ಲ; ಮತ್ತು ಹೊಸಗ್ರಂಥ ಉದ್ದಿಷ್ಟವಾದದ್ದೂ ಅಲ್ಲ. ವಾಚಕರು ನನ್ನ ಈ ಸಂದರ್ಭವನ್ನರಿತು, ಸಹನೆ ತೋರಬೇಕೆಂದು ಬೇಡುತ್ತೇನೆ.

ಇದರಲ್ಲಿರುವ ಉಪನ್ಯಾಸಗಳನ್ನು ಮೊದಲು ಪ್ರಕಟಮಾಡಿ ಉಪಕರಿಸಿದ ಪತ್ರಿಕೆಗಳ ಹೆಸರುಗಳನ್ನು (ಟಿಪ್ಪಣಿಗಳಲ್ಲಿ) ಸ್ಮರಿಸಿದೆ. ಆ ಪತ್ರಿಕೆಗಳ ಅಧಿಕಾರಿಗಳಿಗೆ ನನ್ನ ಮನಃಪೂರ್ವಕವಾದ ವಂದನೆ.

ಅಚ್ಚು ಕರಡನ್ನು ತಿದ್ದುವುದರಲ್ಲಿ ಮಾತ್ರವಲ್ಲದೆ ಮುಖ್ಯ ವಿಷಯ ಸೂಚಿಯಾದ ಪದಾನುಕ್ರಮಣಿಕೆಯನ್ನು ರಚಿಸಿಯೂ ಇತರ ವಿಧಗಳಲ್ಲಿಯೂ ಶ್ರೀ ಚಿದಂಬರಂ ಅವರು ನನಗೆ ಉಪಕಾರಮಾಡಿದ್ದಾರೆ.

ಬಸವನಗುಡಿ, ಬೆಂಗಳೂರು
ಶ್ರೀರಾಮನವಮಿ, ೨೭ ಮಾರ್ಚಿ ೧೯೫೦

ಡಿ. ವಿ. ಜಿ.

## ಎರಡನೆಯ ಮುದ್ರಣದ್ದು

ಇದು ಬಹುಮಟ್ಟಿಗೆ ಮೊದಲ ಮುದ್ರಣದ ಪಡಿಯಚ್ಚೇ ಆಗಿದೆ. ಅಕ್ಷರಸ್ಖಾಲಿತ್ಯಗಳನ್ನು ಕಂಡುಬಂದಷ್ಟು ತಿದ್ದಿದೆ. ಅರ್ಥದ ಸ್ಫುಟತೆಗಾಗಿ ಒಂದೆರಡು ಕಡೆ ಮಾತುಗಳನ್ನು ಹೊಸದಾಗಿ ಸೇರಿಸಿದೆ. ಹೊಸ ವಾಕ್ಯಗಳೂ ಒಂದೆರಡು ಕಡೆ ಇವೆ.

ಈ ಪುಸ್ತಕವನ್ನು ಮೈಸೂರು ವಿಶ್ವವಿದ್ಯಾನಿಲಯದವರು ಬಿ.ಎ., ಬಿ.ಎಸ್‌ಸಿ., ತರಗತಿಯ ವಿದ್ಯಾರ್ಥಿಗಳಿಗೆ ಪಠ್ಯಗ್ರಂಥವನ್ನಾಗಿ ಅಂಗೀಕರಿಸಿದ್ದರಿಂದ ಈ ಪುನರ್ಮುದ್ರಣಕ್ಕೆ ಅವಕಾಶ ದೊರೆಯಿತು. ಆ ಅಧಿಕಾರಿಗಳಿಗೆ ನನ್ನ ಕೃತಜ್ಞತೆ ಸಲ್ಲತಕ್ಕದ್ದು.

ಬೆಂಗಳೂರು
ಅಕ್ಟೋಬರ್ ೧೯೫೪

ಡಿ. ವಿ. ಜಿ.

## ಮೂರನೆಯ ಮುದ್ರಣದ್ದು

ಒಂದು ಗ್ರಂಥ ಪುನರ್ಮುದ್ರಣಕ್ಕೆ ಬಂದಾಗ ಅದರ ಲೇಖಕನಿಗೆ ಆಯುರ್ವೃದ್ಧಿ; ಅವನ ಆಲೋಚನೆಗಳೂ ತತ್ತ್ವಗಳೂ ಚರ್ಚೆಗಳೂ ಆಶಯಗಳೂ ಆ ಗ್ರಂಥದ ವಾಕ್ಯಗಳಲ್ಲಿ ಹೊರಹೊಮ್ಮುತ್ತವೆ. ಅವು ಜನದಲ್ಲಿ ಪ್ರಚಾರವಾಗುತ್ತಿದ್ದರೆ ಅವನ ಬಾಳು ಸಾರ್ಥಕವಾಗಿ ಸಾಗುತ್ತಿದೆ ಎಂದರ್ಥ. ಇಂಥ ಆಯುರ್ದಾನ ಈಗ ಈ ಗ್ರಂಥದ ಮೂಲಕ ನನಗೆ ಮಹಾಜನಾನುಗ್ರಹದಿಂದ ಬಂದಿದೆ. ಅವರಿಗೆ ಸಹಸ್ರ ನಮಸ್ಕಾರ.

ಈ ಮುದ್ರಣದಲ್ಲಿ ಗ್ರಂಥಭಾಗ ಹಿಂದೆ ಇದ್ದದ್ದೇ.

ಈ ಸಾರಿಯ ಶೋಧನಕಾರ್ಯವನ್ನು ಮೊದಲಿನಿಂದ ಕಡೆಯುವರೆಗೂ ನಿರ್ವಹಿಸಿ ಉಪಕರಿಸಿರುವವರು, ಮಿತ್ರರು ಶ್ರೀಮಾನ್ ಜಿ. ಪಿ. ರಾಜರತ್ನಂ. ಬಹು ಸಾಹಿತ್ಯ ಪಂಡಿತರೂ ರಸದರ್ಶಿಯಾದ ವಿಮರ್ಶಕರೂ ಕಾವ್ಯನಿರ್ಮಾಣ ಮರ್ಮಜ್ಞರೂ ಆದ ಅಂಥವರು ಒಪ್ಪಿಕೊಂಡರೆಂದರೆ ಲೇಖಕನಿಗೆ ಅದೇ ಒಂದು ಧೈರ್ಯವಲ್ಲವೆ? ಅವರನ್ನು ನಾನು ವಂದಿಸುವುದಾದರೂ ಹೇಗೆ? "ಉತ್ಪನ್ನಸೌಹೃದಾನಾಮ್ ಉಪಚಾರಃ ಕೈತವಂ ಭವತಿ ||"

ಸಾಹಿತ್ಯದ ಉಪಕಾರ ಮನೋರಂಜನೆ ಮಾತ್ರವಲ್ಲ; ಅದು ಜೀವನ ಪ್ರಯುಕ್ತವಾದ ಒಂದು ಶಕ್ತಿ—ಮಹಾಶಕ್ತಿ, ಎಂಬುದು ಈ ಗ್ರಂಥದ ಮುಖ್ಯಾಶಯ. ಸಾಹಿತ್ಯಶಕ್ತಿಗೆ ನಿದರ್ಶನಸ್ವರೂಪರಾದ ವಾಲ್ಮೀಕಿ ವ್ಯಾಸರ ಭಾವಚಿತ್ರಗಳ ಜೊತೆಗೆ ಸಾಹಿತ್ಯಶಕ್ತಿಯಿಂದ ಪ್ರೇರಿತನಾಗಿ ಇಂಗ್ಲೆಂಡಿನ ರಾಜ್ಯನಿರ್ವಾಹಮಾಡಿ ಜಗತ್ಪ್ರಸಿದ್ಧನಾದ ಗ್ಲ್ಯಾಡ್‌ಸ್ಟನ್ನಿನ ಭಾವಚಿತ್ರವನ್ನು ಈಗ ಹೊಸದಾಗಿ ಸೇರಿಸಿದೆ.

ಈ ನೂತನ ಮುದ್ರಣವನ್ನು ಮಹಾಜನರು ಅಂಗೀಕರಿಸಿ ಕೃಪೆತೋರ ಬೇಕೆಂದು ಬೇಡುತ್ತೇನೆ.

ಸರ್ವಂ ಶಿವಂ

ಆಗಸ್ಟ್ ೧೯೬೬ ಡಿ. ವಿ. ಜಿ.

---

## ನಾಲ್ಕನೆಯ ಮುದ್ರಣದ್ದು

ಮಹಾಜನರ ಔದಾರ್ಯದಿಂದಲೂ ವಾಚಕಮಹಾಶಯರ ಆದರಣೆಯಿಂದಲೂ 'ಸಾಹಿತ್ಯ ಶಕ್ತಿ'ಗೆ ಈಗ ನಾಲ್ಕನೆಯ ಮುದ್ರಣದ ಯೋಗ ದೊರೆತಿದೆ. ಈ ಸಂತೋಷದಲ್ಲಿ ಮಹಾಜನರಿಗೆ ಮನಃಪೂರ್ವಕವಾಗಿ ಕೃತಜ್ಞತೆಯ ವಂದನೆಗಳನ್ನರ್ಪಿಸುತ್ತೇನೆ.

'ಸಾಹಿತ್ಯ ಶಕ್ತಿ' ಎಂದರೆ 'ಶಾಸ್ತ್ರದ ಅಸಕ್ತಿ' ಎಂದು ಯಾರೂ ಅರ್ಥ ಮಾಡಲಾರರು. ವಿಜ್ಞಾನಾದಿಶಾಸ್ತ್ರಗಳು ನಮ್ಮ ದೇಶದಲ್ಲಿ ಅಭಿವೃದ್ಧಿ ಪಡೆಯಬೇಕೆಂದು ಆಶೆಪಟ್ಟುಕೊಂಡಿರುವವರಲ್ಲಿ ನಾನೂ ಒಬ್ಬ. ಆದರೆ ಶಾಸ್ತ್ರವು ಸಾಹಿತ್ಯವನ್ನು ಬಿಟ್ಟಾಗ ಒಣಗಿದ ಮರುಭೂಮಿಯಾದೀತು, ವಿತಂಡವಾದಕ್ಕೆ

ದಾರಿ ಮಾಡೀತು. ಮಹಾನುಭಾವರಾದ ರಾಜು ಶಾಸ್ತ್ರಿಗಳವರು ಹೇಳುತ್ತಿದ್ದರಂತೆ:

ಅಶಿಕ್ಷಿತಾನಾಂ ಕಾವ್ಯೇಷು
ಶಾಸ್ತ್ರಾಭ್ಯಾಸೋ ನಿರರ್ಥಕಃ ||

ಹಾಗೆಯೇ—

ಅಶಿಕ್ಷಿತಾನಾಂ ಶಾಸ್ತ್ರೇಷು
ಕಾವ್ಯಾಭ್ಯಾಸೋ ನಿರರ್ಥಕಃ ||

ಶಾಸ್ತ್ರ-ಕಾವ್ಯಗಳೆರಡೂ ಜೊತೆಜೊತೆಯಲ್ಲಿ ಇರಬೇಕಾದವು. ನಮ್ಮ ಎರಡು ಕಣ್ಣುಗಳಂತೆ, ಎರಡು ಕಾಲುಗಳಂತೆ, ಅವು ಅನ್ಯೋನ್ಯ ಸಹಕಾರಿಗಳು. ಎರಡೂ ಸ್ನೇಹದಿಂದ ಒಟ್ಟಿಗೆ ನಡೆದಾಗ ಮನುಷ್ಯನ ಜೀವನದ ಉತ್ಕರ್ಷ.

ನನ್ನ ಈಚಿನ ಬರವಣಿಗೆಗಳಲ್ಲಿ ಕೊಟ್ಟಿರುವಂತೆ ಈ ಪುಸ್ತಕದ ವಿಷಯದಲ್ಲಿಯೂ ನನ್ನ ಯುವಕ ಮಿತ್ರ ಚಿ|| ಎಸ್. ಆರ್. ರಾಮಸ್ವಾಮಿ ಸಹಾಯ ಕೊಟ್ಟಿದ್ದಾರೆ. ಈ ಪುಸ್ತಕದ ಅಚ್ಚಿನ ಪ್ರೂಫುಗಳನ್ನು ಶೋಧಿಸುವುದರಲ್ಲಿಯೂ ಇತರ ರೀತಿಗಳಲ್ಲಿಯೂ ಸಹಾಯ ಮಾಡಿದ್ದಾರೆ. ಇದು ಪರಿಶುದ್ಧವಾದ ಅಭಿಮಾನ. ಭಗವಂತನು ಚಿ|| ರಾಮಸ್ವಾಮಿ ಅವರಿಗೆ ಸಕಲ ಶುಭಸಂಪತ್ತುಗಳನ್ನೂ ಅನುಗ್ರಹಿಸಲಿ ಎಂದು ಬೇಡುತ್ತೇನೆ.

ಶ್ರೀ ಚಿದಂಬರಂ ಅವರ ಸ್ನೇಹ ಬಹುಕಾಲದಿಂದ ನಡೆದು ಬಂದಿರುವುದು ನನ್ನ ಭಾಗ್ಯ. ಅವರು ಮಾಡಿರುವ ಉಪಕಾರಗಳನ್ನು ಮರೆಯಲಾರೆ.

ಮೈಸೂರು ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ಶೀಘ್ರತೆ ಸೌಂದರ್ಯಗಳೆರಡೂ ಬಹುಕಾಲದಿಂದ ಅವರ ಕೆಲಸದ ಲಕ್ಷಣಗಳಾಗಿ ಬಂದಿವೆ.

ಮಹಾಜನರಲ್ಲಿ ಮತ್ತೊಮ್ಮೆ ವಿನಯ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಇಂತು ಸರ್ವಂ ಶಿವಂ

ಬೆಂಗಳೂರು-೪
೬-೪-೧೯೭೩

**ಡಿ. ವಿ. ಜಿ.**

# ಅನುಕ್ರಮಣಿಕೆ



## ಚಿತ್ರಗಳು

# ಸಾಹಿತ್ಯ ಶಕ್ತಿ

## ೧. ರಾಷ್ಟ್ರಕನಿಗೆ ಸಾಹಿತ್ಯ ಬೇಕೆ?

### ೧

ಜೇನುತುಪ್ಪ ಬಾಯಿಗೆ ಸಿಹಿಯಾದಂತೆ ರಕ್ತಕ್ಕೆ ಶುದ್ಧಿಕಾರಿ ಎಂದು ಹೇಳುವುದುಂಟಷ್ಟೆ? ಅದರಂತೆ ಸಾಹಿತ್ಯರಸ ಮನಸ್ಸಿಗೆ ಇಂಪಾದಂತೆ ಜೀವಕ್ಕೆ ಸಂಸ್ಕಾರಕಾರಿಯೂ ಆಗುತ್ತದೆ. ಭಕ್ಷ್ಯವೇ ಔಷಧವೂ ಆಗುವಂಥ ವಿಶೇಷ ಅದರದು. ನಾಲಗೆಗೆ ದೊರೆಯುವುದು ರುಚಿ; ಹಾಗೆ ಮೇಲಕ್ಕೆ ಕಾಣಿಸದೆ ಜೀವದೊಳಕ್ಕೆ ಇಳಿಯುವುದು ಸತ್ತ್ವ.

ನಮ್ಮ ಬಾಳಿನಲ್ಲಿ ನಿಜವಾದ ಒಳ್ಳೆಯದು ಯಾವುದು—ನಮಗೆ ಸೊಗಸೆಂದು ತೋರುವುದರಲ್ಲೆಲ್ಲ ಮೇಲಾದ ಸೊಗಸು ಎಂಥಾದ್ದು—ಎಂಬುದರ ಛಾಯೆಯನ್ನು ನಮ್ಮ ಜೀವದ ಕಣ್ಣಮುಂದೆ ಸುಳಿದಾಡಿಸಿ, ಮನಸ್ಸು ಆ ಕಡೆಗೆ ಓಲುವಂತೆ ಮಾಡುವುದು ಸಾಹಿತ್ಯದ ಉಪಕಾರ. ಅದು ಬೇಡವಾದವರು ಯಾರು?

ಸಾಹಿತ್ಯವೆಂದರೆ ಎದೆಯನ್ನು ಅಲುಗಿಸುವಂಥ ಮಾತು. ಯಾವ ವಾಕ್ಯವನ್ನು ಓದಿದರೆ, ಅಥವಾ ಕೇಳಿದರೆ, ನಮ್ಮ ಹೃದಯದಲ್ಲಿ ಒಂದಾನೊಂದು ಚಲನೆಯ ಅನುಭವವುಂಟಾಗುತ್ತದೆಯೋ ಆ ವಾಕ್ಯವೇ ಸಾಹಿತ್ಯ. ಸಾಹಿತ್ಯದ ಸಾರಭಾಗ ಕಾವ್ಯ. ಮನಸ್ಸಿಗೆ ಒಂದು ಹಿತರಮಣೀಯವಾದ ವಿಕಾರವನ್ನುಂಟಾಗಿಸಿ, ಆ ಮೂಲಕ ಬುದ್ಧಿಯನ್ನು ಅರಳಿಸಬಲ್ಲ ವಾಕ್ಯ ಸಮೂಹವೇ ಶ್ರೇಷ್ಠಕಾವ್ಯ.

ಈಗ ನಮ್ಮ ದೇಶ ಸ್ವತಂತ್ರವಾಗಿ ಪ್ರಜಾರಾಜ್ಯವನ್ನು ಗೆದ್ದುಕೊಂಡಿದೆಯಷ್ಟೆ? ಈ ಹೊಸ ಪರಿಸ್ಥಿತಿಯಲ್ಲಿ ನಮಗೆ ಸಾಹಿತ್ಯದಿಂದ ಆಗಬೇಕಾದ ಸಹಾಯವೇನಾದರೂ ಉಂಟೆ?

ರಾಜಕೀಯದ ಸ್ವಭಾವವನ್ನೂ ಸಾಹಿತ್ಯದ ಸ್ವಭಾವವನ್ನೂ ಎರಡನ್ನೂ ಬಲ್ಲವರು ರಾಜಕೀಯದ ಸಹಜ ವಿಷಕ್ಕೆ ಸತ್ಕಾವ್ಯದ ಸಹಜ ಅಮೃತವನ್ನು ಬಿಟ್ಟರೆ ಬೇರೆ ಪ್ರತಿಕ್ರಿಯೆ ಇಲ್ಲವೆಂದು ಹೇಳುತ್ತಾರೆ.

ರಾಜಕೀಯವೆಂಬುದು ಲಕ್ಷೋಪಲಕ್ಷ ಮಂದಿಯ ಇಷ್ಟಾನಿಷ್ಟಗಳ, ಹಿತಾಹಿತಗಳ ಸಂಘಾತ. ಅದರಲ್ಲಿ ಒಬ್ಬನ ಸಿಹಿ ಮತ್ತೊಬ್ಬನ ಕಹಿ; ಒಬ್ಬನಿಗಾದ ಹೂಮಾಲೆ ಇನ್ನೊಬ್ಬನಿಗೆ ನೇಣುಹಗ್ಗ. ಹೀಗೆ ಸಂತತವಾಗಿ ನಡೆಯುತ್ತಿರುವ ನಾನಾ ಪ್ರತಿಸ್ಪರ್ಧಿ ಶಕ್ತಿಗಳ ಸಂಘರ್ಷಣೆಯೇ ರಾಜ್ಯಜೀವನ. ಆ ಅನ್ಯೋನ್ಯಾಘಾತಗಳಲ್ಲಿ ಮನುಷ್ಯಸ್ವಭಾವದ ಕೊಳೆ ಕೆಸರುಗಳು ತಳದಿಂದ ಮೇಲಕ್ಕೇಳುವುದರಲ್ಲಿ ಆಶ್ಚರ್ಯವೇನು? ಸ್ವಾರ್ಥಗಳ ಧಾಳಿಯೇ ರಾಜಕೀಯದ ಸ್ವರೂಪಲಕ್ಷಣ.

ಆ ವಿಕಾರವು ಪ್ರಜಾರಾಜಕೀಯದಲ್ಲಿ ಇನ್ನೂ ಅತಿಯಾಗುತ್ತದೆ. ಪ್ರಜಾರಾಜ್ಯವೆಂದರೆ ಎಲ್ಲರೂ ಎಲ್ಲ ವಿಚಾರಗಳಿಗೂ ಕೈಯಿಕ್ಕುವುದು. ಅಲ್ಲಿ ಎಲ್ಲರೂ ಎಲ್ಲರಿಗೂ ಸಮವಷ್ಟೆ? ಯಾರು ಯಾವ ಅಧಿಕಾರವನ್ನಾದರೂ ಬೇಕೆನ್ನಬಹುದು. ಪ್ರತಿಯೊಬ್ಬನೂ ರಾಷ್ಟ್ರಕನೇ (Citizen). ಆದದ್ದರಿಂದ ಪ್ರತಿಯೊಬ್ಬನೂ ರಾಜ್ಯದಲ್ಲಿ ಅಧಿಕಾರಿ. ಆ ಅಧಿಕಾರದಿಂದ ಒಳ್ಳೆಯದಾಗಬೇಕಾದರೆ ಪ್ರತಿಯೊಬ್ಬನಿಗೂ ಹಿತಾಹಿತವಿವೇಕವಿರಬೇಕೆಂಬುದು ಸ್ವತಸ್ಸಿದ್ಧವಾದ ಸಂಗತಿ. ರಾಜ್ಯಕ್ಷೇಮದ ಉತ್ತರಭಾರವು ಪ್ರತಿಯೊಬ್ಬನ ಮೇಲೂ ಹೊತ್ತಿರುವಾಗ, ಆ ಜವಾಬ್ದಾರಿಗೆ ತಕ್ಕ ಸಾಮರ್ಥ್ಯವನ್ನು ಸಂಪಾದಿಸಿಕೊಳ್ಳುವುದು ಪ್ರತಿಯೊಬ್ಬ ರಾಷ್ಟ್ರಕನಿಗೂ ಇರುವ ಮೊದಲನೆಯ ಕರ್ತವ್ಯ. ನ್ಯಾಯವೆಂಬುದರ,—ಹಿತವೆಂಬುದರ,—ಸ್ವರೂಪಜ್ಞಾನವೇ ಸಾರ್ವಜನಿಕ ಮನುಷ್ಯನಲ್ಲಿರಬೇಕಾದ ಮೊದಲನೆಯ ಅರ್ಹತೆ. ಆ ಅರ್ಹತೆಗೆ ಸಾಧನ ಸಾಹಿತ್ಯ-ವ್ಯಾಸಂಗ.

ಪ್ರಜಾರಾಜ್ಯದಲ್ಲಿ ಮತ್ತೊಂದು ಅಪಾಯವುಂಟು. ಅದರಲ್ಲಿ ಜಯ ಬಯಸುವವನು ಜನಬಲಕ್ಕಾಗಿ ಸ್ಪರ್ಧಿಸಬೇಕು. ಬಹುಮಂದಿ ಅಧಿಕಾರಾಪೇಕ್ಷಿಗಳು ಜನರ ವರಣಾನುಗ್ರಹವನ್ನು ("ವೋಟ್") ಸಂಪಾದಿಸಲು ಮುಂದೆ ಬರುತ್ತಾರೆ. ಅವರ ಮೇಲ್ಪೋಟಿಯಲ್ಲಿ ಆತ್ಮಪ್ರಶಂಸೆಯೂ ಪರದೂಷಣೆಯೂ ಮಿತಿಯಿಲ್ಲದೆ ಹರಿದುಬರುತ್ತವೆ: ಹಾಗೆ ಅವರ ಒಳಗಡೆ ಅಡಗಿಕೊಂಡಿರುವ ಕಶ್ಮಲವೆಲ್ಲ ಕೆರಳಿ ಹೊರಕ್ಕೆ ಬರುತ್ತದೆ. ಪ್ರತಿಯೊಬ್ಬ ಸಾರ್ವಜನಿಕನೂ ವರಣಕರ್ತನ ಮುಂದೆ ನಿಂತು—

ನನ್ನ ವರಿಸಲು ನಿಮಗೆ ಸಕಲಸಂಪತ್ತು;
ಇನ್ನಾರು ಗೆದ್ದರೂ ತಪ್ಪದು ವಿಪತ್ತು.

—ಹೀಗೆ ಮಾತನಾಡಬೇಕಾಗುತ್ತದೆ. ಅದು ವಿನಯವೆ? ಘನತೆಯೆ? ಆದರೂ ಇಂಥ ಮಾತಿಲ್ಲದವನಿಗೆ ಪ್ರಜಾರಾಜಕೀಯದಲ್ಲಿ ಜಯ ದುರ್ಲಭ.

ಹೀಗೆ ಜನಾನುಗ್ರಹದ ಚಿಂತೆ ರಾಜಕೀಯಸ್ಥನ ಸ್ವಭಾವವನ್ನು ಒರಟಾಗಿ ಸುತ್ತದೆ; ಅವನ ಸಂಪರ್ಕವಿರುವವರ ಮರ್ಯಾದೆಯನ್ನು ಬಾಧಿಸುತ್ತದೆ. ಹೀಗೆ ರಾಷ್ಟ್ರಕನ ನಯನಾಣ್ಯಗಳಿಗೆ ಘಾತುಕವಾದ ಸ್ಪರ್ಧಾರಾಜಕೀಯವು ಈಗ ನಮಗೆ ಅನಿವಾರ್ಯವಾಗಿ ಬಂದಿದೆ. ಅದರ ಮುಸುರೆ ಮೈಲಿಗೆಗಳನ್ನು ನಾವು ತಪ್ಪಿಸಿಕೊಳ್ಳುವುದು, ಅಥವಾ ತೊಳೆದುಕೊಳ್ಳುವುದು, ಸಾಧ್ಯವೆ? ಅದು ಹೇಗಾದೀತು?

ಜೀವದ ಕೊಳೆ ಕಶ್ಮಲಗಳನ್ನು ತೊಳೆಯಬಲ್ಲ ತೀರ್ಥವೆಂದರೆ ಕಾವ್ಯತೀರ್ಥ. ಕಾವ್ಯವೆಂದರೆ ಕಥೆ, ಕಾದಂಬರಿ, ನಾಟಕ, ಹಾಡು, ಪದ್ಯ—ಇವೇ ಮೊದಲಾದ ಮನಃಪರಿವರ್ತಕಪ್ರಭಾವವುಳ್ಳ ಸಾಹಿತ್ಯ. ಅದನ್ನು 'ಕೇವಲ' ಸಾಹಿತ್ಯವೆಂದು ಕರೆಯಬಹುದು. ಅದರಿಂದ ಬೇರೆಯಾದದ್ದು ಶಾಸ್ತ್ರಸಾಹಿತ್ಯ ಅಥವಾ ವಿಜ್ಞಾನ ಸಾಹಿತ್ಯ. ಆ ಎರಡನೆಯ ಜಾತಿಯ ಸಾಹಿತ್ಯದಿಂದ ಆಗಬೇಕಾದ ಪ್ರಯೋಜನಗಳು ಬೇರೆ ಅಪಾರವಾಗಿ ಇರುತ್ತವೆ. ಅವೂ ಮಹತ್ತ್ವವುಳ್ಳವು. ಆದರೆ ಪ್ರಕೃತಕ್ಕೆ ಸಾಹಿತ್ಯದಲ್ಲಿ ರಸಭಾವಪ್ರಧಾನ ಭಾಗವಾದ ಕಾವ್ಯಪ್ರಬಂಧವು ಇಲ್ಲಿ ನಮ್ಮ ವಿಷಯ. ಕಾವ್ಯವೆಂದರೆ ಮನುಷ್ಯನ ಅಂತರಂಗಜೀವನದ ವಾಕ್ಯರೂಪದ ಪ್ರತಿಕೃತಿ.

೨

ಕಾವ್ಯದಿಂದ ನಮಗೆ ಆಗುವ ಉಪಕಾರಗಳು ಮುಖ್ಯವಾಗಿ ಮೂರು ತೆರದವು:—

(೧) ಅದು ನಮಗೆ ನಮ್ಮಗಳ ಅಂತಃಪ್ರಪಂಚವನ್ನು ತೋರಿಸಿಕೊಡುವ ಕಿಟಕಿ. ಮಾನುಷ್ಯವಿಜ್ಞಾನಶಾಸ್ತ್ರದ ಮೂಲಸಾಮಗ್ರಿ ಅದರಲ್ಲಿರುತ್ತದೆ. ಅದು ನಮ್ಮ ಒಳವೈಯನ್ನು ನಮ್ಮ ಕಣ್ಣ ಮುಂದೆ ಬಿಚ್ಚಿರಿಸುತ್ತದೆ.

(೨) ಅದು ಹೃದಯದ ನೀರ್ಗಲ್ಲನ್ನು ಹೊಳೆಯಾಗಿಸಿ ಹರಿಯಿಸುವ,—ಮತ್ತು ಅಲ್ಲಿಯ ಕೆಸರುಮಣ್ಣನ್ನು ಗಟ್ಟಿಮಾಡಿ ವಜ್ರವಾಗಿಸುವ,—ಸೂರ್ಯಪ್ರಭೆ.

(೩) ಅದು ಒಂದು ಮಹಾತತ್ತ್ವದ ಕಡೆಗೆ ಜೀವವನ್ನು ಕರೆದೆಳೆಯುವ ದಿವ್ಯಧ್ವನಿ. ಅದರಿಂದ ಶ್ರೇಯಸ್ಸ್ವರೂಪದ ದರ್ಶನ.

ಕಾವ್ಯವೆಂಬುದು ಕವಿ ಆಡಿದ ಮಾತು. ಕವಿಯಾದವನು ಕೆಲವು ಶಕ್ತಿಗಳನ್ನು ಇತರರಿಗಿಂತ ಹೆಚ್ಚಾಗಿ ಪಡೆದಿರುವ ಮನುಷ್ಯ. ಆದದ್ದರಿಂದಲೇ ಅವನ ಮಾತಿಗೆ ಅಷ್ಟು ದೊಡ್ಡ ಬೆಲೆ. (ಇನ್ನು ಕೆಲವು ಶಕ್ತಿಗಳು ಅವನಲ್ಲಿ

ಇತರರಲ್ಲಿರುವುದಕ್ಕಿಂತ ಕಡಮೆಯಿದ್ದರೂ ಇರಬಹುದು.) ಅವನ ಅತಿಶಯ ಶಕ್ತಿಗಳಲ್ಲಿ ಮುಖ್ಯವಾದವು ಮೂರು—

**(೧) ಸಂವೇದನಶಕ್ತಿ ಅಥವಾ ಪರಿಸರಪರಿಗ್ರಹಣಶಕ್ತಿ—** ತನಗೆ ಸಂಬಂಧವಿರುವ ಲೋಕಸನ್ನಿವೇಶಗಳ ಅಂತಸ್ಸೂಕ್ಷ್ಮಗಳನ್ನು ಕವಿಯ ಮನಸ್ಸು ವಿಶೇಷರೀತಿಯಲ್ಲಿ ಗ್ರಹಿಸುತ್ತದೆ. ಅವನ ಮನಸ್ಸು ನಿರ್ಮಲವಾದ ಕನ್ನಡಿ. ಸುತ್ತಮುತ್ತಣದೆಲ್ಲವನ್ನೂ ಅದು ತಪ್ಪದೆ ಪ್ರತಿಬಿಂಬಿಸುತ್ತದೆ. ಎಲ್ಲರೂ ನೋಡುವುದನ್ನೇ ಕವಿಯೂ ನೋಡಿದರೂ, ಇತರರ ಕಣ್ಣಿಗೆ ಕಾಣಿಸದ ಯಾವುದೋ ಒಂದು ವಿಶೇಷಾಂಶ ಅವನ ಕಣ್ಣಿಗೆ ಎದ್ದು ಕಾಣಿಸುತ್ತದೆ. ಅವರ ಕಿವಿಗೆ ಅರ್ಧಮರ್ಧವಾಗಿ ಕೇಳಬಂದದ್ದು ಅವನ ಕಿವಿಗೆ ಪೂರ್ಣವಾಕ್ಯ ವಾಗುತ್ತದೆ.

**(೨) ಪ್ರತ್ಯುದ್ಭಾವನಶಕ್ತಿ** ಅಥವಾ **ನವನಿರ್ಮಾಣಶಕ್ತಿ—** ಕವಿಯ ಮನಸ್ಸು "ಫೋಟೋ" ಯಂತ್ರದಂತೆ ಛಾಯಾಗ್ರಹಣಮಾಡುವಷ್ಟರಿಂದಲೇ ತೃಪ್ತವಾಗುವುದಿಲ್ಲ. ಅದು ತಾನು ಗ್ರಹಿಸಿದ ಆಕಾರಗಳನ್ನು ಪ್ರಕಾರಾಂತರಕ್ಕೆ ತಿರುಗಿಸಬಲ್ಲುದು. ನಾವು ಜಾಗ್ರದವಸ್ಥೆಯಲ್ಲಿರುವಾಗ ಕಂಡ ಆಕೃತಿ ಸಂದರ್ಭಗಳೇ ಸ್ವಪ್ನಾವಸ್ಥೆಯಲ್ಲಿ ಬೇರೆ ಬೇರೆ ವಿಕೃತಿ ವಿಚಿತ್ರಗಳಾಗಿ ಪರಿಣಮಿಸುವಂತೆ, ಅಥವಾ ನಾವು ಬಾಯಿಂದ ತೆಗೆದುಕೊಂಡ ಆಹಾರವಸ್ತು ಗಳು ಜೀರ್ಣಾಂಗಕ್ರಿಯೆಯಿಂದ ರಕ್ತಮಾಂಸಾದಿಗಳಾಗಿ ಮಾರ್ಪಡುವಂತೆ, ಕವಿಯ ಬಾಹ್ಯಾನುಭವಗಳು ಅವನ ಪ್ರತಿಭೆಯ ಮೂಸೆಯಲ್ಲಿ ಕರಗಿ, ಅದರ ಕಲ್ಪನಧಾತುಗಳೊಡನೆ ಬೆರೆತು, ಬೇರೆ ಬೇರೆ ರೂಪಗಳನ್ನು ತಾಳುತ್ತವೆ. ಆ ಸ್ವತಂತ್ರ ಕಲ್ಪನೆಯೇ ಸ್ಫೂರ್ತಿ. ಅದರಿಂದಲೇ ಸೌಂದರ್ಯಾನುಭವ,— ಶುಭಸಂದರ್ಶನ.

**(೩) ಆವೇದನಶಕ್ತಿ** ಅಥವಾ **ಉಚಿತವಚಶ್ಶಕ್ತಿ—** ಲೋಕಸಂದರ್ಭ ಗಳಿಂದ ತನಗೆ ಒದಗಿದ ಪ್ರಶ್ನೆಗಳೂ ಅದಕ್ಕೆ ತನ್ನ ಮನಸ್ಸು ಕೊಟ್ಟ ಪ್ರತ್ಯುತ್ತರ ಗಳೂ ಇತರರಿಗೆ ಗೋಚರವಾಗುವಂತೆ ವರದಿಮಾಡುವ ಶಕ್ತಿಯೂ ಕವಿಗಿರು ತ್ತದೆ. ತನ್ನ ಅಂತರನುಭವಗಳನ್ನು ಅವನು ಇತರರಿಗೆ ಅನುಭವ ಮಾಡಿಸ ಬಲ್ಲವನು—ತನ್ನ ವಾಕ್ಚಮತ್ಕಾರದಿಂದ. ಆ ಅನುಭವಗಳು ನಮ್ಮ ಆತ್ಮವನ್ನು ಚುಚ್ಚಿ ಎಬ್ಬಿಸಿ ಶ್ರೇಯೋಮಾರ್ಗವನ್ನು ಹುಡುಕಿಸಬಲ್ಲಂಥ ವಾಗ್ರೂಪದಲ್ಲಿ ಹೊರಹೊಮ್ಮಿರುತ್ತವೆ.

ಹೀಗೆ ಸೂಕ್ಷ್ಮಾನುಭವಘಟ್ಟ, ಧ್ಯಾನಕಲ್ಪನಘಟ್ಟ, ವಾಕ್ಪ್ರಭಾವಘಟ್ಟ

—ಎಂಬ ಮೂರು ಘಟ್ಟಗಳಲ್ಲಿ ನಡೆಯುತ್ತದೆ ಕವನಕರ್ಮ. ಅದರ ಫಲಿತಾಂಶ ಕಾವ್ಯ.

ಆ ಫಲಿತದ ವಿಧಾನವನ್ನು ಸ್ವಲ್ಪ ವಿಚಾರಿಸೋಣ. ಮಾತಲ್ಲವೆ ಕಾವ್ಯಕ್ಕೆ ಉಪಾದಾನಸಾಮಗ್ರಿ—ಮಡಕೆಗೆ ಜೇಡಿಮಣ್ಣು ಹೇಗೋ ಹಾಗೆ? ಮಾತೆಂಬುದು ಅಕ್ಷರಗಳ ಸಮೂಹ. ಅಕ್ಷರವೆಂಬುದು ಕಂಠಧ್ವನಿಯ ಒಂದು ಸ್ಫುಟರೂಪ. ಅದಕ್ಕೆ ಒಂದು ಸ್ವತಂತ್ರ ಶಕ್ತಿಯುಂಟು. ಅದು ಉಚ್ಚಾರಣೆಯಿಂದ ಕಿವಿಯನ್ನು ಮುಟ್ಟಬಲ್ಲದ್ದು. ಅಂಥಾ ಅಕ್ಷರಗಳ ಸಮೂಹವು ರೂಢಿಯ ಬಲದಿಂದ ಲೋಕದ ವಸ್ತುಗಳನ್ನೂ ಕ್ರಿಯೆಗಳನ್ನೂ ತಿಳಿಸಬಲ್ಲದ್ದಾದಾಗ ಅದು ಪದ, ಅಥವಾ ಮಾತು. ಅದು ಬುದ್ಧಿಯನ್ನು ಮುಟ್ಟಬಲ್ಲದ್ದು. ಹೀಗೆ ಎರಡು ವಿವಿಧ ಶಕ್ತಿಗಳು ಪ್ರತಿಯೊಂದು ಪದಕ್ಕೂ ಬಹುಕಾಲದಿಂದ ಬೆಳೆದುಕೊಂಡು ಬಂದಿರುತ್ತವೆ. ಕೆಲಕೆಲವಕ್ಷರಗಳು ನಮ್ಮ ಶ್ರವಣಾಭ್ಯಾಸದಂತೆ ಕೆಲಕೆಲವು ಪರಿಣಾಮಗಳನ್ನು ನಮ್ಮ ಮನಸ್ಸಿನಲ್ಲಿ ಉಂಟುಮಾಡುತ್ತವೆ. ಪದಗಳಂತೂ ಪೂರ್ವಪ್ರಯೋಗದಿಂದಲೂ ನಿಘಂಟುವ್ಯಾಕರಣಗಳಿಂದಲೂ ಗೊತ್ತಾದ ಅರ್ಥವನ್ನು ಪಡೆದುಕೊಂಡಿರುತ್ತವೆ. ಈ ಶ್ರಾವ್ಯಗುಣ ಬೋಧಗುಣಗಳೆರಡೂ ಸೇರಿರಲಾಗಿ ಪದವೆಂಬುದು ಒಂದು ಆಯುಧವಾಗುತ್ತದೆ. ಒಳ್ಳೆಯ ಕವಿತ್ವದಲ್ಲಿ ಆ ಎರಡು ಶಕ್ತಿಗಳೂ ಒಂದುಗೂಡಿ ಕೆಲಸಮಾಡುತ್ತವೆ—ಒಬ್ಬ ಮನುಷ್ಯನ ಎರಡು ಕೈಗಳಂತೆ. ಆ ಕೆಲಸ ಒಂದು ಹೊಸ ಅಂತರ್ಲೋಕದ ನಿರ್ಮಾಣ.

ಈ ಕೆಳಗಿನ ಪಟ್ಟಿಕೆಯ ಒಂದು ಪಕ್ಕದಲ್ಲಿ ಸ್ಪಷ್ಟಾರ್ಥವಿಲ್ಲದಿದ್ದರೂ ಸ್ವತಂತ್ರಭಾವಜನಕಶಕ್ತಿಯುಳ್ಳ ಅಕ್ಷರಪ್ರಯೋಗಗಳನ್ನೂ ಇನ್ನೊಂದು ಪಕ್ಕದಲ್ಲಿ ನಿಘಂಟುವಿನಿಂದ ಗೊತ್ತಾದ ಸ್ಪಷ್ಟಾರ್ಥವುಳ್ಳ ಮಾತುಗಳನ್ನೂ ನೋಡಬಹುದು—

| ಅಕ್ಷರಶಕ್ತಿ | ಪದಶಕ್ತಿ |
|---|---|
| ಫಕ್ಕನೆ | ನಕ್ಕನು. |
| ಗಳಗಳನೆ | ಅತ್ತನು. |
| ಸರ್ರೆಂದು | ಓಡಿದನು. |
| ಗಿರ್ರನೆ | ತಿರುಗಿದನು. |
| ಧಗಧಗನೆ | ಉರಿಯಿತು. |
| ಛೊಳ್ ಛೊಳ್ ಎಂದು | ಬಗುಳಿತು. |

ಈ ವಾಕ್ಯಗಳಲ್ಲಿ ಮೊದಲನೆಯ ಪಟ್ಟಿಯಲ್ಲಿರುವ ಅಕ್ಷರಗಳ ಉಚ್ಚಾರಣೆಯ ಮಾತ್ರದಿಂದಲೇ, ಎರಡನೆಯ ಪಟ್ಟಿಯಲ್ಲಿ ಅವಕ್ಕೆ ಸಂಬಂಧಪಟ್ಟಿರುವ ಮಾತಿನೊಳಗಣ ಭಾವ ನಮ್ಮ ಮನಸ್ಸಿಗೆ ಹೊಳೆದುಬಿಡುತ್ತದೆ. ಹೀಗೆ ಪ್ರಪಂಚದ ಪ್ರಸಿದ್ಧ ಧ್ವನಿಗಳ ಮತ್ತು ಪ್ರಸಿದ್ಧ ಶಬ್ದಗಳ ಅನುಭವದ ಆಧಾರದ ಮೇಲೆ ನಿಂತಿರುವ ಎರಡು ಶಕ್ತಿಗಳೂ ಬೆರೆತು ನಮ್ಮ ಮನಸ್ಸಿನೊಳಗೆ ನಾನಾ ಚಿತ್ರಗಳನ್ನು ಸೃಷ್ಟಿಮಾಡುತ್ತವೆ. ನಮ್ಮ ಕೋಣೆಯ ಮೊಡಕಿನಲ್ಲಿ ಕುಳಿತು ನಾವು ಉದ್ಯಾನವನದ ವರ್ಣನೆಯನ್ನು ಓದುತ್ತಿದ್ದರೆ ಮಲ್ಲಿಗೆ ಜಾಜಿಗಳ ವಾಸನೆ ಬೀಸಿ ಬಂದು ನಮ್ಮ ಮೂಗಿನಲ್ಲಿ ತುಂಬಿಕೊಳ್ಳುತ್ತದೆ; ಯುದ್ಧ ವರ್ಣನೆಯನ್ನೋದುವಾಗ ಅಲ್ಲಿಯ ಕಹಳೆಯು ನಮ್ಮ ಎದೆಯೊಳಗಡೆ ಗುಡುಗಿಡುತ್ತದೆ; ಪ್ರಣಯವರ್ಣನೆಯನ್ನೋದುವಾಗ ಅಲ್ಲಿಯ ಅಂಗಾಂಗವಿಲಾಸಗಳು ನಮ್ಮಲ್ಲಿ ಮೈತುಂಬಿಕೊಳ್ಳುತ್ತವೆ. ಹೀಗೆ ಅಪ್ರತ್ಯಕ್ಷವಾದದ್ದನ್ನು ಪ್ರತ್ಯಕ್ಷವಾಗಿಸುವುದು—ಪ್ರತ್ಯಕ್ಷದ ಭ್ರಾಂತಿಯನ್ನಾಗಿಸುವುದು—ಕವಿಯ ಪದಸಂಯೋಜನಮಹಿಮೆ. ವಾಸ್ತವತಾ ಭ್ರಾಂತಿಜನಕ ಯೋಗ್ಯತೆಯೇ ಕವಿಯ ಸಾಮರ್ಥ್ಯಕ್ಕೆ ಪ್ರಮಾಣ.

## ಔಚಿತ್ಯ ವಿವೇಕ

ಕವಿಯ ಸಾರ್ಥಕಪದಯೋಜನೆ ಯದ್ವಾತದ್ವಾ ಆಗುವುದಲ್ಲ. ಅದಕ್ಕೊಂದು ಕ್ರಮವುಂಟು; ಒಂದು ಮಿತಿಯುಂಟು. ಮಿತವರಿತ ಪದಪ್ರಯೋಗವೇ ಜಯಸಾಧಕವಾದದ್ದು. ಅದೇ ಔಚಿತ್ಯಪರಿಜ್ಞಾನ. ಕವಿಯ ಅಂತರಂಗದಲ್ಲಿ ಎಂಥ ಸುಂದರಚಿತ್ರಗಳಿದ್ದರೇನು, ಎಂಥ ಮಹಾಭಾವನೆಗಳಿದ್ದರೇನು? ಆ ಚಿತ್ರಗಳೂ ಆ ಭಾವನೆಗಳೂ ನಮ್ಮ ಮನಸ್ಸಿನಲ್ಲಿ ಏಳುವಂತೆ ಅವನು ಮಾಡಬೇಕು. ಹಾಗೆ ಮಾಡಿದಲ್ಲದೆ ಅವನ ಶ್ರಮ ಸಾರ್ಥಕವಾಗದು. ಆ ಶ್ರಮದಲ್ಲಿ ಒಂದು ಕ್ರಮನಿಯಮವಿಲ್ಲದೆಹೋದಲ್ಲಿ ಅವನ ಚಿತ್ರ ತೆನಾಲಿ ರಾಮನ ಚಿತ್ರವಾದೀತು. ಯಾವ ಸಂದರ್ಭದಲ್ಲಿ ಎಂಥ ಪದವನ್ನು ಹೇಗೆ ಉಪಯೋಗಿಸಿದರೆ ತನ್ನ ಕಲ್ಪನೆಯ ಲೋಕವು ವಾಚಕನ ಮನಸ್ಸಿನಲ್ಲಿ ವಾಸ್ತವವೆಂಬಂತೆ ರೂಪಗೊಂಡೀತು — ಎಂಬ ಯುಕ್ತಾಯುಕ್ತವಿವೇಚನೆ ಕವಿಯ ಕಾರ್ಯನೀತಿಯಲ್ಲಿರಬೇಕು. ಆ ವಿವೇಚನೆಯ ರಹಸ್ಯವು ಹಳೆಯದರಿಂದ ಹೊಸದನ್ನು ಕಟ್ಟುವುದರಲ್ಲಿ. ಕವಿಯು ವಾಚಕನಿಗೆ ಆಗಿರುವ ಲೋಕಾನುಭವಗಳ ಆಧಾರದ ಮೇಲೆ ಹೊಸ ಅನುಭವವೊಂದನ್ನು ಕಟ್ಟಿ ನಿಲ್ಲಿಸುತ್ತಾನೆ; ಚಿರಪರಿಚಿತ ಲೋಕದ ನಡುವೆ ಅಪರಿಚಿತ ಲೋಕವೊಂದಕ್ಕೆ

ದಾರಿ ಮಾಡುತ್ತಾನೆ. ಹೀಗೆ ಅವನ ಕೆಲಸದಲ್ಲಿ ಹಳದು ಹೊಸದುಗಳೆರಡೂ ಒಂದು ಸರಿಯಾದ ಅಳತೆಯಲ್ಲಿ ಹೊಂದಿಕೊಂಡಿರುತ್ತವೆ. ಅದೇ ಔಚಿತ್ಯ. ಅವನು ಉಪಯೋಗಿಸುವ ಭಾಷಾಸಾಮಗ್ರಿ ಪುರಾತನ; ಅದರಿಂದ ಅವನು ಹೊರಡಿಸುವ ಭಾವಸಂಪತ್ತು ನೂತನ. ಅವನು ನಮಗೆ ಉಂಟುಮಾಡುವ ಅನುಭವಗಳು—ಪ್ರತ್ಯೇಕ ಪ್ರತ್ಯೇಕವಾಗಿ, ಸ್ವಲ್ಪಸ್ವಲ್ಪವಾಗಿ ನೋಡಿದರೆ—ಪುರಾತನ; ಆದರೆ ಅವುಗಳ ಸಮುದಾಯ ಸನ್ನಿವೇಶಗಳಲ್ಲಿ ಅವು ನೂತನ. ಕವಿಯ ಶಬ್ದದಲ್ಲಿಯೂ ಭಾವದಲ್ಲಿಯೂ ಪುರಾತನಾಂಶ ಕೊಂಚವಿರುವುದರಿಂದಲೇ ಅದು ನಮಗೆ ಅರ್ಥವತ್ತಾಗುವುದು; ಅದರೊಡನೆ ನೂತನಾಂಶವಿರುವುದರಿಂದಲೇ ಅದು ನಮಗೆ ಸ್ವಾರಸ್ಯಕರವಾಗುವುದು. ಕಾವ್ಯದಲ್ಲಿ ಪರಿಚಿತಾಂಶವಿಲ್ಲದಿದ್ದರೆ ಅದರ ಭಾಷೆ ನಮ್ಮ ಪಾಲಿಗೆ ಅರ್ಥವಿಲ್ಲದ್ದಾಗುತ್ತದೆ; ಅಪರಿಚಿತಾಂಶವಿಲ್ಲದಿದ್ದರೆ ಅದು ಕುತೂಹಲ ಹುಟ್ಟಿಸಲಾರದ್ದಾಗುತ್ತದೆ. ಈ ಹಳದು ಹೊಸದುಗಳ ಸರಿಯಾದ ಜೋಡಣೆಯೇ ಕವಿಯ ಕೌಶಲರಹಸ್ಯ.

ಆ ಕೌಶಲದ ಸಾಧನೋಪಾಯಗಳೇ ಶಬ್ದಸಂಪತ್ತು, ಅಲಂಕಾರ, ಛಂದಸ್ಸು ಮೊದಲಾದ ಭಾಷಾಪರಿಕರಗಳು. ಸಂಗೀತ, ಅಭಿನಯ, ಚಿತ್ರ ಕಲೆಗಳು ಕವಿಗೆ ಇಲ್ಲಿ ಉಪಕಾರಕಗಳಾಗುತ್ತವೆ. ಪದಗಳ ಅಕ್ಷರಸಯ, ನಪಿರು, ಹೊಂದಿಕೆ; ಪದಗುಂಫನದ ನಡಿಗೆ, ಧಾಟಿ; ಪದದಲ್ಲಿಯ ಅರ್ಥಪುಷ್ಟಿ, ನಾನಾರ್ಥಚಾಕಚಕ್ಯ; ವರ್ಣನೆಯ ವಿಶದತೆ; ಉಪಮಾನಗಳ ಹೊಳಪು ಬೆಳಕುಗಳು; ಚಿತ್ರಣದ ವಾಸ್ತವಪ್ರಾಯತೆ; ವ್ಯಕ್ತಿಗಣಸಂಚಲನೆ; ಕಥಾಸಂಗತಿಯ ವೇಗ; ರಸಪ್ರವಾಹದ ಮೊರೆತದಲ್ಲಿ ಆಲೋಚನಾಚೋದನೆಯ ಗುಹಾಧ್ವನಿ—ಈ ತೆರದ ನಾನಾ ಗುಣಗಳಿಂದ ಶ್ರವಣಗ್ರಾಹಿಯೂ ಮನೋಗ್ರಾಹಿಯೂ ಆಗಿ, ಮಹಾತತ್ತ್ವದಿಗ್ದರ್ಶಕವಾಗಿರುವ ವಾಕ್ಪ್ರಬಂಧವೇ ಸತ್ಕಾವ್ಯ. ವೇದಾಂತದಲ್ಲಿ ಒಂದು ಮತದವರು ಹೇಳುತ್ತಾರಲ್ಲವೆ—ಬ್ರಹ್ಮವಸ್ತುವು ಸ್ವಾಂತಃಶಕ್ತಿಯಿಂದ ಜಗನ್ಮಾಯೆಯನ್ನು ರಚಿಸುತ್ತದೆ ಎಂದು? ಕವಿ ಅದರಂತೆಯೇ ಸ್ವಪ್ರತಿಭಾಶಕ್ತಿಯಿಂದ ನಮಗಾಗಿ ರಚಿಸುತ್ತಾನೆ ನೂತನ ಲೋಕಭ್ರಾಂತಿಯನ್ನು. ಅವನು ನಮ್ಮ ಮೇಲೆ ಕವಿಸುವ ಆ ದಿವ್ಯಭ್ರಾಂತಿ ಎಷ್ಟೆಷ್ಟು ಚೆನ್ನಾಗಿ ಕೆಲಸ ಮಾಡುತ್ತದೆಯೋ,—ಅದು ನಮ್ಮನ್ನು ಎಷ್ಟೆಷ್ಟು ಪೂರ್ತಿಯಾಗಿ ವಶಪಡಿಸಿಕೊಳ್ಳುತ್ತದೆಯೋ,—ಅಷ್ಟಷ್ಟು ದೊಡ್ಡದು ಆತನ ಮಹಿಮೆ; ಅಷ್ಟಷ್ಟು ಉಪಕಾರ ನಮ್ಮ ಜೀವಕ್ಕೆ. ನಮ್ಮ ಹೊರಗಡೆ ಕಾಣಲಾಗದ ಒಂದು ಲೋಕವು ಕವಿಯ ಭ್ರಾಂತಿಕಾರಕ ಶಕ್ತಿಯಿಂದ ಹುಟ್ಟುತ್ತದೆ ನಮ್ಮ ಒಳಗಡೆ. ಆ ಒಳಪ್ರಪಂಚದಲ್ಲಿ ನೋಡುತ್ತೇವೆ ನಮ್ಮ

ನೆರೆಹೊರೆಯಲ್ಲಿ ಅಪರೂಪವಾಗಿರುವ ಮನುಷ್ಯಚೇಷ್ಟೆಗಳನ್ನ. ಯಾವ ಯಾವ ಸಂದರ್ಭ ಎಂಥೆಂಥವರನ್ನು ಹೇಗೆ ಹೇಗೆ ಆಡಿಸುತ್ತದೆ, ಯಾರ ಯಾರ ಮನಸ್ಸಿನಲ್ಲಿ ಎಂಥೆಂಥ ಭೂತಗಳು ಅವಿತುಕೊಂಡಿರುತ್ತವೆ? ಯಾವ ಸನ್ನಿವೇಶದಿಂದ ಯಾವ ಆವೇಶ?—ಈ ಮರ್ಮ ಸೂಕ್ಷ್ಮಗಳು ನಮಗೆ ಮನದಟ್ಟಾಗುವುದು ಆ ಅಂತರ್ಲೋಕವೀಕ್ಷಣೆಯಿಂದ. ಆ ವೀಕ್ಷಾಭ್ಯಾಸದಿಂದ ಮಾನುಷ್ಯವಿಜ್ಞಾನ.

ಕಾವ್ಯಪ್ರಪಂಚದಲ್ಲಿ ನಮಗಾಗುವ ಅನುಭವ ಹೊರಗಣ ನೋಟಗಾರನದಲ್ಲ. ಕೆರೆಯ ಕಟ್ಟೆಯ ಮೇಲೆ ನಿಂತಿರುವವನು ಈಜುತ್ತಿರುವವರನ್ನು ಕಂಡಾಗ ಅವನಿಗಾಗುವುದು ಬಾಹ್ಯಾನುಭವ; ತಾನೂ ನೀರಿನೊಳಕ್ಕೆ ಇಳಿದಾಗ ಆಗುವುದು ಸ್ವಾನುಭವ; ತಾನೇ ಈಜುವಾಗ ಆಗುವುದು ಇನ್ನೂ ಹೆಚ್ಚಿನ ಅಂತರನುಭವ. ಅಂಥ ಅಂತರನುಭವವೇ ತತ್ತ್ವಸಾಕ್ಷಾತ್ಕಾರ. ಕವಿಯ ಲೋಕದಲ್ಲಿಯ ಜನರನ್ನು ನಾವು ಬಹುಕಾಲ ದೂರ ನಿಂತು ನೋಡುತ್ತಿರಲಾಗುವುದಿಲ್ಲ. ಅವರು ಬೇರೆ, ನಾವು ಬೇರೆ–ಎಂಬ ಭೇದಜ್ಞಾನ ಬೇಗ ಅಳಿಸಿಹೋಗುತ್ತದೆ. ನಾವೇ ಅವರೊಡನೆ ಬೆರೆತುಹೋಗುತ್ತೇವೆ. ಅವರಲ್ಲೊಬ್ಬನೊಡನೆ ಅಳುತ್ತೇವೆ, ಇನ್ನೊಬ್ಬನಲ್ಲಿ ಕನಲುತ್ತೇವೆ; ಒಬ್ಬನಲ್ಲಿ ಕನಿಕರಿಸುತ್ತೇವೆ, ಇನ್ನೊಬ್ಬನೊಡನೆ ಕಾದುತ್ತೇವೆ; ಒಬ್ಬನನ್ನು ಮೆಚ್ಚಿಕೊಳ್ಳುತ್ತೇವೆ, ಮತ್ತೊಬ್ಬನನ್ನು ಹೀಯಾಳಿಸುತ್ತೇವೆ. ಹೀಗೆ ನಾವೂ ಆ ಕಕ್ಷಿಗಳಲ್ಲೊಂದಾಗಿ–ಇವನ ಪರವಾಗಿ, ಅವನ ಪರವಾಗಿ ಮಾತನಾಡ ನಿಲ್ಲುತ್ತೇವೆ. ನಮ್ಮ ಹೃದಯದಲ್ಲಿ ನಾನಾ ರಸಗಳು ಉಕ್ಕಿ ತಳಮಳಗುಟ್ಟುತ್ತವೆ. ನಾವು ಕವಿಪ್ರಜೆಯಲ್ಲಿ ತನ್ಮಯರಾಗುತ್ತೇವೆ. ಅದೇ ಕಾವ್ಯಸೌಂದರ್ಯಾನುಭವ. ಅದೇ ಕಾವ್ಯಾನಂದವೈಭವ. ಆ ತಲ್ಲೀನತೆಯೇ ಮನಸ್ಸಿನ ಪರಿಪಾಕ. ಅದರಿಂದ ಆತ್ಮಶುದ್ಧಿಯಾಗುತ್ತದೆ; ಆತ್ಮದ ಮೇಲಣ ಕಶ್ಮಲ ಹರಿದು ಹೋಗುತ್ತದೆ; ಅದರ ಸಾರಭಾಗ ಗಟ್ಟಿಯಾಗುತ್ತದೆ.

ಮಹಾಕಾವ್ಯಕ್ರಿಯೆ ಅಷ್ಟಕ್ಕೆ ನಿಲ್ಲುವುದಿಲ್ಲ. ಬರಿಯ ಕಣ್ಣೀರು, ಅಥವಾ ಬರಿಯ ಸಂತೋಷ, ಬರಿಯ ರೋಷ, ಅಥವಾ ಬರಿಯ ಹಂಬಲ—ಅಷ್ಟರಲ್ಲೇ ಅದರ ಉಪಕಾರ ಮುಗಿಯುವುದಿಲ್ಲ. ಕವಿನಿರ್ಮಿತಲೋಕದಲ್ಲಿ ಕಂಡದ್ದನ್ನು ಮನಸ್ಸು ಮತ್ತೆ ಮತ್ತೆ ನೆನೆಯುತ್ತದೆ; ಅದನ್ನು ಕುರಿತು ಚಿಂತಿಸುತ್ತದೆ; "ಅದು ಸರಿಯೆ? ಇದು ಸರಿಯೆ?" "ಅಲ್ಲಿ ಹಾಗೇಕೆ, ಇಲ್ಲಿ ಹೀಗೇಕೆ?"—ಎಂದು ಪ್ರಶ್ನೆ ಮಾಡುತ್ತದೆ. ಈ ಆಂದೋಳನ ವಿಮರ್ಶನಗಳಿಂದ ಫಲಿಸುತ್ತದೆ ಒಂದು ಪ್ರಚೋದಕ ಧ್ವನಿ. ಆ ಮಹಾಧ್ವನಿಯ ಶುಶ್ರೂಷೆಯಿಂದ ಲಭಿಸುತ್ತದೆ

ಒಂದು ಶುಭಸೌಂದರ್ಯದರ್ಶನ—ಒಂದು ಒಳ್ಳೆಯದೆಂಬುದರ ತಿಳಿವಳಿಕೆ—ಒಂದು ಧರ್ಮಾನ್ವೇಷಣಪ್ರವೃತ್ತಿ. ಅದೇ ಕಾವ್ಯಸ್ಫೂರ್ತಿ. ಆದರಿಂದ ಜೀವಕ್ಕೆ ಬಂಧವಿಮೋಚನೆ, ಅದೇ ಆತ್ಮಕ್ಕೆ ಪುನರ್ಜನ್ಮ.

ಹೀಗೆ ಪರ್ಯವಸಾನದಲ್ಲಿ ತತ್ತ್ವವಿಚಾರಪ್ರೇರಕವಾದದ್ದು ಮಹಾಕಾವ್ಯ. ಅಂಥಾ ತಾರಕಪ್ರೇರಣೆಯನ್ನು ಉಂಟುಮಾಡಿದ ಕವಿ ಕೃತಕೃತ್ಯನಾದವನು. ಆ ಪ್ರೇರಣೆ ರಾಷ್ಟ್ರಕನಿಗೆ ಬೇಡವೇನು? ಸಾರ್ವಜನಿಕ ಕಾರ್ಯನಿಷ್ಠನಿಗೆ ಒಳ್ಳೆಯದೆಂದರೆ ಏನೆಂಬುದರ ಅರಿವು ಬೇಡವೇನು? ಅವನಿಗೆ ರಸಾನುಭವದ ಅಂತರಂಗಶೋಧನೆ ಬೇಡವೇನು?

ಅಂತರಂಗ ಚಲನವಲನಗಳ ವಾಗ್ರೂಪವೇ ಕಾವ್ಯ; ಅಥವಾ ನಮ್ಮ ಅಂತರ್ಜೀವನದ ವಾಕ್ಯಶರೀರವೇ ಕಾವ್ಯ—ಎಂದು ಮೇಲೆ ಹೇಳಿದೆಯಲ್ಲವೆ? ಇಲ್ಲಿ ಅಂತರಂಗವೆಂಬುದಕ್ಕೆ ಈ ಒಬ್ಬನ ಅಂತರಂಗ, ಅಥವಾ ಆ ಇನ್ನೊಬ್ಬನ ಅಂತರಂಗ, ಎಂದು ಅರ್ಥವಲ್ಲ. ನಾವು ಸಾಮಾನ್ಯವಾಗಿ ಒಂದು ಜೀವ ಎಂದು ಎಣಿಕೆಮಾಡುವ ಪ್ರತಿಯೊಂದು ಜೀವದೊಳಗಡೆಯೂ ಇನ್ನೆಷ್ಟೋ ಜೀವಗಳು—ಇನ್ನೆಷ್ಟೋ ಅಂತರಂಗಗಳು—ಅವಿತುಕೊಂಡಿರುತ್ತವೆ. ಇದು ಲೋಕಾನುಭವದ ಮಾತು. ವಿವೇಕಿ, ಅವಿವೇಕಿ; ಉದಾರಿ, ಕೃಪಣ; ಉತ್ತಮ, ನೀಚ; ಸಾಧು, ಕಟುಕ; ವಿರಕ್ತ, ಅನುರಕ್ತ—ಇವರೆಲ್ಲ ಒಬ್ಬನಲ್ಲೇ ಅಡಗಿಕೊಂಡಿರುತ್ತಾರೆ; ಆ ಒಬ್ಬೊಬ್ಬನೂ ಒಂದೊಂದು ವೇಳೆ ಹೊರಕ್ಕೆ ಕಾಣಿಸಿಕೊಳ್ಳುತ್ತಾನೆ. ಯಾವ ಹೊತ್ತಿನಲ್ಲಿ ಯಾವನು ಹೊರಕ್ಕೆ ಬರುತ್ತಾನೋ, ಯಾವ ಸನ್ನಿವೇಶ ಯಾರನ್ನು ಹೇಗೆ ಆಡಿಸುತ್ತದೆಯೋ—ಅದನ್ನು ನಮ್ಮ ಮನಸ್ಸಿಗೆ ಹೊಳೆಯಿಸುವುದು ಕಾವ್ಯ. ಪ್ರಪಂಚದಲ್ಲಿ ನಮಗಿರುವ ಸಂಬಂಧ ಸಂದರ್ಭಗಳೆಷ್ಟೆಷ್ಟೋ ನಮ್ಮ ಜೀವಚೇಷ್ಟಿತಗಳು ಅಷ್ಟಷ್ಟು. ಆ ಚೇಷ್ಟಾಪ್ರಕಾರಗಳಷ್ಟೂ ಕಾವ್ಯದಲ್ಲಿ ಕಾಣಬಹುದಾದವು. ನಾನಾ ಜಾತಿಯ, ನಾನಾ ಸಂಸ್ಕಾರದ, ನಾನಾ ಅವಸ್ಥಾವಿಶೇಷಗಳ, ನಾನಾ ಗುಣಪ್ರಭೇದಗಳ ಜೀವಾವತಾರಗಳೆಲ್ಲ ಕಾವ್ಯಭೂಮಿಯಲ್ಲಿ ಸುಳಿಯಬಹುದಾದವು. ಹೀಗೆ ಕಾವ್ಯದಿಂದ ನಮಗೆ ಲಭ್ಯವಾಗುವುದು ಈ ಒಂದು ಜೀವದ, ಅಥವಾ ಆ ಒಂದು ಜೀವದ, ಪ್ರತಿಬಿಂಬವಲ್ಲ; ಅದು ವಿಶ್ವಜೀವದ ಪ್ರತಿಬಿಂಬ. ಆ ವಿಶ್ವಜೀವದರ್ಶನದ ಧ್ಯಾನಾನುಚಿಂತನೆಗಳಿಂದ ಉಂಟಾಗುವುದು ವಿಶ್ವಧರ್ಮದರ್ಶನ. ನಮ್ಮ ಬಾಳಿನ ಒರಟಾಟಗಳು ಕಡಮೆಯಾಗಬೇಕಾದರೆ, ನಮ್ಮಲ್ಲಿ ಸ್ವೈಜವಾಗಿರುವ ಅಲ್ಪತನಗಳು ತೊಲಗಬೇಕಾದರೆ, ನಮಗೆ ಒಂದು ವಿಶಾಲಮನೋಭಾವವೂ ಒಂದು ಉದಾರನೀತಿಯೂ ಅಭ್ಯಾಸವಾಗಬೇಕಾ

ದರೆ, ಕವಿಪ್ರಸಾದವಾಗಿ ಬರುವ ವಿಶ್ವಜೀವಸಂದರ್ಶನವೂ ವಿಶ್ವಧರ್ಮ ಚೋದನೆಯೂ ನಮಗೆ ಅತ್ಯವಶ್ಯ ಸಾಧನಗಳು.

೩

ಕವಿಗಿರುವ ವರಗಳಲ್ಲಿ ಮುಖ್ಯವಾದವು ಲೋಕಾನುಭವಶಕ್ತಿ, ಹೃದಯ ಮರ್ಮವಿವೇಚನಶಕ್ತಿ, ನೂತನಸಂದರ್ಭಸಂಘಟನಶಕ್ತಿ—ಎಂದು ನೋಡಿದೆ ವಲ್ಲವೆ? ಈ ಶಕ್ತಿಗಳು ರಾಜ್ಯಸಮರ್ಥನಿಗೂ ಅಷ್ಟು ಮುಖ್ಯವಾಗಿ ಅವಶ್ಯ ವಾದವು. ಜನತಾಸಮಾಜದೊಡನೆ ಅವನು ಸಹಾನುಭೂತಿಯುಳ್ಳವನಾಗ ಬೇಕು; ಸಮಾಜದ-ಮನಸ್ಸಿನ ಗೂಢಪ್ರವೃತ್ತಿಗಳನ್ನು ಊಹಿಸಲರಿತವನಾಗ ಬೇಕು; ಲೋಕದ ಉತ್ತಮ ಪರಿಸ್ಥಿತಿಯನ್ನು ಮೊದಲು ತನ್ನ ಮನಸ್ಸಿನಲ್ಲಿ ಭಾವಿಸಿಕೊಳ್ಳಬಲ್ಲವನಾಗಬೇಕು. ಕವಿಗಿರುವ ಕಾರ್ಯಕ್ಷೇತ್ರ ಶಬ್ದಪ್ರಪಂಚ; ರಾಜ್ಯಕರ್ತನಿಗಿರುವ ಕಾರ್ಯಕ್ಷೇತ್ರ ಪ್ರತ್ಯಕ್ಷವಾದ ಮಹಾಜನಲೋಕ. ಈ ಒಂದು ವ್ಯತ್ಯಾಸವನ್ನು ಬಿಟ್ಟರೆ, ಅವರಿಬ್ಬರ ಮಿಕ್ಕ ವ್ಯಾಪಾರಗಳಲ್ಲಿ ಬಹುಮಟ್ಟಿಗೆ ಇಬ್ಬರೂ ಸಮಾನಧರ್ಮಿಗಳೆಂದು ಹೇಳಬಹುದು. ಜನತಾ ಸಹಾನುಭವ, ಹೃದಯೇಂಗಿತವಿಜ್ಞಾನ, ನೂತನಹಿತದರ್ಶನ—ಈ ಮೂರೂ ಇಬ್ಬರಿಗೂ ಇರಬೇಕಾದ ಯೋಗ್ಯತಾಸಿದ್ಧಿ. ಅವೇ ಸೂಕ್ಷ್ಮಗ್ರಹಣಶಕ್ತಿ ಊಹನಶಕ್ತಿ ಕಲ್ಪನಶಕ್ತಿಗಳು. ಇವನ್ನು ರಾಜ್ಯಕರ್ತನು ಕವಿಯಿಂದ ಸಂಪಾದಿಸಿ ಕೊಳ್ಳಬೇಕು. ಅವುಗಳಿಂದಲೇ ಕಾರ್ಯೌದಾರ್ಯ, ದೂರಾಲೋಚನೆ, ನೀತಿವಿಚಕ್ಷಣೆ.

ಈ ಕಾರಣದಿಂದ, ಕಾವ್ಯವ್ಯಾಸಂಗವು ಸಾರ್ವಜನಿಕನಿಗೆ ಪೀಠಿಕಾರೂಪ ವಾಗಿ ಇರಬೇಕಾದ ಸಿದ್ಧತೆ ಎಂದು ಎಲ್ಲರೂ ಒಪ್ಪಿಕೊಳ್ಳಬೇಕಷ್ಟೆ? ನಳ ಚರಿತ್ರೆಯನ್ನೋದದವನು, ನಳನ ವಿರಹವನ್ನನುಭವಿಸದವನು, ದಮಯಂತಿ ಯೊಡನೆ ಮರುಗದವನು; ರಾಮಾಯಣವನ್ನೋದದವನು, ಭರತನ ತ್ಯಾಗ ವನ್ನು ಧ್ಯಾನಿಸದವನು; ಭಾರತವನ್ನೋದದವನು, ಭೀಷ್ಮನ ಸತ್ತ್ವಶುದ್ಧಿಗೆ ತಲೆಬಾಗದವನು, ಧರ್ಮರಾಯನ ಸಂಕಟವನ್ನು ಅನುಭವಿಸದವನು; ರನ್ನನ ದುರ್ಯೋಧನನ ವೀರಪತನದಲ್ಲಿ ಕನಿಕರಿಸದವನು; ಕುಮಾರವ್ಯಾಸನ ಉತ್ತರ ಪ್ರತಾಪಘೋರಣೆಯಿಂದ ನಗದವನು—ಇಂಥವರಿಗೆ ಎಷ್ಟರ ಹೃದಯವೈಶಾಲ್ಯ ವಿದ್ದೀತು? ಅವರು ಯಾವ ನೀತಿಸೂಕ್ಷ್ಮವನ್ನು ತಳಮುಟ್ಟ ಕಾಣಬಲ್ಲರು? ಮನುಷ್ಯಾಂತರಂಗದ ಮರ್ಮ ಅವರಿಗೆ ಎಷ್ಟುಮಾತ್ರ ತಿಳಿದಿದ್ದೀತು? ಕಾವ್ಯಾಗ್ನಿಯಿಂದ ಬೇಯದ ಜೀವ,—ಕಾವ್ಯರಸದಲ್ಲಿ ಈಜಾಡದ ಜೀವ—

ಹೇಗೆ ಪರಿಶುದ್ಧವಾದೀತು? ಅದು ಹೇಗೆ ದೊಡ್ಡದನ್ನು ಕಾಣಲಾದೀತು? ಅಂಥ ಜೀವವು ಪ್ರಕೃತಿಯ ಸೆರೆಮನೆಯೇ ತನ್ನ ಅರಮನೆಯೆಂದು ಭ್ರಮಿಸಿರುವಂಥಾದ್ದು. ಅದರ ಕಣ್ಣು ನಿದ್ದೆಗಣ್ಣು; ಅದರ ಕಿವಿ ಮರಗಿವಿ; ಅದರ ನುಡಿ ತೊದಲ್ನುಡಿ. ಅಂಥ ಜನ ಮಾಡುವ ರಾಜ್ಯಶಾಸನ ದೊಂಬಿಯ ದಬಾದುಬಿ. ರಾಜಕೀಯವು ಹಿತವಾಗಬೇಕಾದರೆ ರಾಷ್ಟ್ರಕನು ಕಾವ್ಯಸಂಸ್ಕೃತಿ ಪಡೆದವನಾಗಿರಬೇಕು. ಆ ಸಂಸ್ಕಾರದಿಂದ ಬರುವ ನಯ ಔದಾರ್ಯಗಳೇ ರಾಜಕೀಯದ ನಿಷ್ಠುರಗಳಿಗೆ ಚಿಕಿತ್ಸೆ. ಆ ನಯ ಔದಾರ್ಯಗಳ ಅಭ್ಯಾಸಕ್ಕೆ ರಾಷ್ಟ್ರಕಜೀವನವು ಅಭ್ಯಾಸರಂಗವೆಂಬ ಕಾರಣದಿಂದಲೇ ರಾಜಕೀಯವು ಎಲ್ಲರಿಗೂ ಒಂದು ಪವಿತ್ರ ಕರ್ತವ್ಯ. ಕವಿಯ ಆಶೀರ್ವಾದಬಲದಿಂದ ರಾಷ್ಟ್ರಜೀವನದಲ್ಲಿ ಮಂಗಳ.

೪

ಮನುಷ್ಯಜೀವನದ ಒಂದು ರೂಪ ಕಾವ್ಯ, ಇನ್ನೊಂದು ರೂಪ ರಾಜ್ಯ. ಜೀವನಸ್ವಾರಸ್ಯವನ್ನು ವಾಕ್ಯರೂಪದಲ್ಲಿ ತೋರಿಸುವುದು ಕವಿಯ ಕಲ್ಪನೆ. ಆ ಸ್ವಾರಸ್ಯವನ್ನು ಲೋಕವ್ಯವಸ್ಥೆಯಲ್ಲಿ ಪ್ರತ್ಯಕ್ಷಪಡಿಸುವುದು ರಾಜ್ಯಕರ್ಮಿಯ ಸಂಕಲ್ಪ.

ಯಾವ ವಸ್ತುಸೌಂದರ್ಯ ಗುಣಸೌಂದರ್ಯಗಳಿಂದ ಕವಿಯ ನಿರ್ಮಿತಿ ನಮಗೆ ಆನಂದದಾಯಕವಾಗಿರುತ್ತದೆಯೋ,—ಯಾವ ಭಾವಸೌಂದರ್ಯ ಶೀಲಸೌಂದರ್ಯಗಳನ್ನು ತೋರಿಸಿ ಕವಿ ನಮ್ಮನ್ನು ಪರವಶಗೊಳಿಸುತ್ತಾನೆಯೋ,—ಆ ದಿವ್ಯಸೌಂದರ್ಯಗಳನ್ನು, ಆ ತೇಜಸ್ಸುಗಳನ್ನು, ಆ ಔದಾರ್ಯಗಳನ್ನು ಜನತೆಯ ನಿತ್ಯಜೀವನದಲ್ಲಿ ಯತ್ಕಿಂಚಿತ್ತಾದರೂ ಘನರೂಪಕ್ಕೆ ತರುವುದು ರಾಜ್ಯಕರ್ಮಿಯ ಪ್ರಯತ್ನ.

ಪ್ರಪಂಚದ ಮಹಾರಾಜ್ಯಕರ್ಮಿಗಳ ಚರಿತ್ರೆ ಇದಕ್ಕೆ ಸಾಕ್ಷಿ. ಇಂಗ್ಲೆಂಡಿನ ಗ್ಲಾಡ್‌ಸ್ಟನ್ನನು (Gladstone) ತನ್ನ ರಾಜ್ಯಸೇವೆಗೆ ಸ್ಫೂರ್ತಿಯನ್ನು ಹೋಮರ್, ಷೇಕ್ಸ್‌ಪಿಯರ್, ಮಿಲ್ಟನ್ ಮೊದಲಾದ ಕವಿಗಳಿಂದ ಪಡೆದಿದ್ದವನು. ಅಮೆರಿಕದ ಲಿಂಕನ್ನನು (Lincoln) ತನ್ನ ರಾಷ್ಟ್ರಪೋಷಣವ್ರತಕ್ಕೆ ತಕ್ಕ ಸತ್ತ್ವಶುದ್ಧಿಯನ್ನು 'ಬೈಬಲ್' ಪವಿತ್ರಪುರಾಣದಿಂದಲೂ ಷೇಕ್ಸ್‌ಪಿಯರನ ನಾಟಕಗಳಿಂದಲೂ ಇತರ ಧರ್ಮಕಾವ್ಯಗಳಿಂದಲೂ ಸಂಪಾದಿಸಿಕೊಂಡಿದ್ದವನು. ಇಟಲಿಯ ಮಟ್ಸಿನಿಯು (Mazzini) ತನ್ನ ದೇಶೋಜ್ಜೀವನಸಂರಂಭಕ್ಕೆ ಮಹಾಕವಿ ಡ್ಯಾಂಟೆಯಿಂದ (Dante) ಬೆಳಕು ಕಂಡಿದ್ದವನು.

ನಮ್ಮ ಗಾಂಧಿಯವರು ವಾಲ್ಮೀಕಿಯ ವರಪ್ರಸಾದದಿಂದ ರಾಮರಾಜ್ಯದ ಆದರ್ಶವನ್ನು ಕಂಡಿದ್ದವರು. ಇಂಥ ದೃಷ್ಟಾಂತಗಳನ್ನು ಇನ್ನೂ ಅನೇಕ ಕೊಡ ಬಹುದು. ಉತ್ತಮಕಾವ್ಯದ ಕಾರ್ಯಪರಿಣಾಮವು ಉತ್ತಮ ರಾಜಕೀಯ.

ಸಾಹಿತ್ಯಕ್ಕಿರುವ ಮುಖ್ಯ ವಿಷಯಗಳು ಮೂರು—ಶೃಂಗಾರ, ರಾಜ ಕೀಯ, ಜೀವಧರ್ಮ. ಇವುಗಳಲ್ಲಿ ರಾಜ್ಯವಿಚಾರವನ್ನು ಬಿಟ್ಟ ಸಾಹಿತ್ಯ ಬರಿಯ ಗೊಣಗಾಟ ಪೇಚಾಟಗಳಾಗಿ ಬಡವಾದೀತು. ರಾಜಕೀಯವೇ ಪೌರುಷಪ್ರಕಾಶದ ಭೂಮಿ. ಅದೇ ವೀರರಂಗ. ರಾಜ್ಯವೆಂಬುದು ಜನತಾ ಜೀವನಭೂಮಿ ತಾನೆ? ಸಾಹಿತ್ಯವೂ ಜನಜೀವನವಲ್ಲದೆ ಮತ್ತೇನು?

ಪ್ರಪಂಚದ ಮಹಾಸಾಹಿತ್ಯದಲ್ಲಿ ಬಹುಭಾಗದ ಮುಖ್ಯ ವಿಷಯ ರಾಜಕೀಯವೆಂಬುದನ್ನು ನಾವು ಮರೆಯಬಾರದು. ವೇದವೂ ರಾಜರಾಜರ್ಷಿ ಗಳನ್ನು ಬಿಟ್ಟಿಲ್ಲ. ಪೌಷ್ಯ, ಹರಿಶ್ಚಂದ್ರ, ದಿವೋದಾಸ, ಜನಕ, ವಿಶ್ವಾಮಿತ್ರ —ಇಂಥಾ ಕ್ಷತ್ರಿಯವೀರರ ಪ್ರಶಂಸೆಗೂ, ರಾಜಸೂಯ, ವಿಶ್ವಜಿತ್ತು ಮೊದಲಾದ ಜನತಾಸಂಗ್ರಹಣಸಾಧಕಗಳಾದ ಯಜ್ಞಯಾಗಗಳ ಮಹಿಮಾ ಖ್ಯಾನಕ್ಕೂ ವೇದವು ಅವಕಾಶ ಕೊಟ್ಟಿದೆ. ರಾಮಾಯಣ ಮಹಾಭಾರತ ಗಳ ಮುಖ್ಯವಸ್ತು ರಾಜಧರ್ಮ; ರಾಜರುಗಳ ಕಥೆ ಅವೆರಡರಲ್ಲಿಯೂ ತುಂಬಿದೆ. ಪ್ರಖ್ಯಾತ ಗ್ರೀಕ್ ತಾತ್ತ್ವಿಕನಾದ ಪ್ಲೇಟೋವಿನ ಮುಖ್ಯಗ್ರಂಥ "ರಿಪಬ್ಲಿಕ್" (ಜನರಾಜ್ಯ). ಆತನೂ ಆತನ ಶಿಷ್ಯ ಅರಿಸ್ಟೋಟಲನೂ ರಾಜ್ಯಶಾಸ್ತ್ರಕ್ಕೆ ಆದಿ ಗುರುಗಳು. ಬೈಬಲ್ಲಿನ ಬಹುಭಾಗ ರಾಜವೃತ್ತಾಂತಗಳು. ಷೇಕ್ಸ್‌ಪಿಯರನ ನಾಟಕಗಳಲ್ಲಿ ನಾಲ್ಕಾರು ರಾಜಕೀಯದವು. ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ, ಬೈರನ್, ಬರ್ನ್ಸ್ ಮೊದಲಾದ ಇಂಗ್ಲಿಷ್ ಕವಿಗಳ ಕಾವ್ಯವಸ್ತು ರಾಜಕೀಯಕ್ಕೆ —ಪ್ರಜಾರಾಜಕೀಯಕ್ಕೆ—ಸಂಬಂಧಪಟ್ಟದ್ದು. ದೇಶಚರಿತ್ರೆ ಜೀವನಚರಿತ್ರೆಗಳ ರೂಪದ ವಿಸ್ತಾರಸಾಹಿತ್ಯದಲ್ಲಿ ಬಹು ದೊಡ್ಡ ಭಾಗ ರಾಜಕೀಯಸಾಹಿತ್ಯ. ಬರ್ಕ್, ಕಾರ್ಲೈಲ್, ಮಿಲ್, ಮೆಕಾಲೆ—ಈ ಗ್ರಂಥಕರ್ತರ ರಾಜಕೀಯ ಭಾಷಣ ಲೇಖನಗಳು ಇಂಗ್ಲಿಷ್ ಸಾಹಿತ್ಯಭಂಡಾರದಲ್ಲಿಯ ರತ್ನಾಭರಣ ಗಳು. ಹೀಗೆ ರಾಜಕೀಯ ತಮ್ಮ ಸ್ವತ್ತೆಂದು ಕವಿಗಳೇ ಅಂಗೀಕರಿಸಿಕೊಂಡಿ ದ್ದಾರೆ. ಅವರೇ ಅಂತೆ ಮಾನವಲೋಕದ ನಿಜವಾದ ಶಾಸನಕರ್ತರು.

"Poets are the unacknowledged legislators of the world."

—Shelley

ಜೀವನೋತ್ಕರ್ಷವನ್ನು ಕಾಲ್ಪನಿಕಪ್ರಪಂಚದಲ್ಲಿ ತೋರುವವನು ಕವಿ, ವಾಸ್ತವಿಕಪ್ರಪಂಚದಲ್ಲಿ ತೋರಬಲ್ಲವನು ರಾಜ್ಯಕರ್ಮಿ. ಕಾವ್ಯ ರಾಜ್ಯ

ಗಳೆರಡೂ ಪರಸ್ಪರ ಸಹಕಾರಿಗಳು; ಎರಡೂ ಜೀವಸಂಸ್ಕಾರಕಾರಿಗಳು. ಕಾವ್ಯವು ನಮಗೆ ಅಂತರನುಭವಗಳನ್ನೊದಗಿಸಿ ಆ ಮೂಲಕ ಆತ್ಮವನ್ನು ತಿದ್ದಯತ್ನಿಸುತ್ತದೆ. ರಾಜ್ಯವು ಬಹಿರ್ನಿಬಂಧನೆಗಳನ್ನು ವಿಧಿಸಿ ಆ ಮೂಲಕ ಆತ್ಮವನ್ನು ಶಿಕ್ಷಿಸುವೆನೆನ್ನುತ್ತದೆ.

ರಾಜಕೀಯವು ದುರ್ವಿಕಾರಕಾರಕವಾದದ್ದೆಂದೂ ಘರ್ಷಣಭೂಯಿಷ್ಠವಾದದ್ದೆಂದೂ ಮೇಲೆ ಹೇಳಿದೆ. ಹಾಗಿದ್ದರೂ ಅದು ಆತ್ಮಸಂಸ್ಕಾರಕ್ಕೆ ಸಾಧಕವೇ; ಅಥವಾ ಹಾಗಿರುವ ಕಾರಣದಿಂದಲೇ ಅದು ಆತ್ಮಸಂಸ್ಕಾರಕ್ಕೆ ಸಾಧಕ. ಅದು ನಮ್ಮನ್ನು ನಾನಾಸಂಕಟಗಳಲ್ಲಿ ಸಿಕ್ಕಿಸಿ, ನೀತಿಪರೀಕ್ಷೆ ನಡಸುತ್ತದೆ. ಆ ಪರೀಕ್ಷೆಯಲ್ಲಿ ಉತ್ತೀರ್ಣನಾದವನೇ ಸುಸಂಸ್ಕೃತನು. ಕಾವ್ಯಪ್ರಪಂಚದಲ್ಲಿ ಹೇಗೋ ರಾಜ್ಯಪ್ರಪಂಚದಲ್ಲಿಯೂ ಹಾಗೆ ನಮಗೊದಗುವ ವಿಷಮಾವಸ್ಥೆಗಳೂ ಕ್ಲೇಶಸನ್ನಿವೇಶಗಳೂ ಘೋರದೃಶ್ಯಗಳೂ ವ್ಯರ್ಥಗಳಾಗತಕ್ಕವಲ್ಲ. ಅವು ಹೃದಯಶೋಧಕಗಳು. ಅವುಗಳ ಅನುಭವವೇ ಚಿತ್ತಪಾವಕ. ಹಾಗೆ ಆತ್ಮವು ಲೋಕಸಂಪರ್ಕದಿಂದ,—ಆ ಸಂಪರ್ಕದಿಂದುದಿಸುವ ಭೂತಾನುಕಂಪನೆಯಿಂದ,—ಪರಿಪಕ್ವವಾಗುತ್ತದೆ. ರಾಜ್ಯವ್ಯವಸ್ಥೆಯು —ಅದರ ಹತ್ತಾರು ಶಾಸನಗಳ, ಹತ್ತಾರು ಅಧಿಕಾರಸಂಸ್ಥೆಗಳ—ದ್ವಾರಾ ಪ್ರತಿಯೊಬ್ಬ ಮನುಷ್ಯನಿಗೂ ಮಿಕ್ಕೆಲ್ಲ ದೇಶಜನತೆಯೊಡನೆ ಜೀವನಸಮ್ಮೇಳನವಾಗುತ್ತದೆ; ಹಾಗೆ ಲೋಕದ ಕಷ್ಟಸುಖಗಳಲ್ಲಿ ಸಹಭಾಗಿತೆಯುಂಟಾಗುತ್ತದೆ. ಆ ರೀತಿ ಅವನ ಜೀವನರಂಗ ವಿಸ್ತರಿಸುತ್ತದೆ. ಅವನು ತನ್ನೂರಿನೊಡನೆ, ತನ್ನ ಸಮಾಜದೊಡನೆ, ತನ್ನ ರಾಷ್ಟ್ರದೊಡನೆ ಒಂದುಗೂಡ ಕಲಿಯುತ್ತಾನೆ. ಅದೇ ಆತ್ಮವಿಕಾಸ; ಅದೇ ಮಮತಾನಿರಾಸ; ಅದೇ ಜೀವಸಂಸ್ಕಾರ; ಆ ಸಂಸ್ಕಾರದ ಪರಿಪೂರ್ಣದಶೆಯ ಫಲವೇ ಉಪನಿಷತ್ತು, ಭಗವದ್ಗೀತೆಗಳಲ್ಲಿ ಹೇಳಿರುವ ವಿಶ್ವಾತ್ಮೈಕ್ಯದ ಪರಮೋತ್ಕೃಷ್ಟ ಪದವಿ—

ಸರ್ವಭೂತಸ್ಥಮಾತ್ಮಾನಂ
ಸರ್ವಭೂತಾನಿ ಚಾತ್ಮನಿ

ಹೀಗೆ ಲೋಕಾನುಕಂಪನ, ಲೋಕಕಾರುಣ್ಯ, ಜೀವಹಿತಾನ್ವೇಷಣೆ, ಜೀವನೌದಾರ್ಯ, ಅಲ್ಪಾಭಿಮಾನವಿಸರ್ಜನೆ, ಅಂತರಾತ್ಮವಿಸ್ತರಣೆ—ಇಂಥಾ ಸಂಸ್ಕಾರಾಭ್ಯಾಸಕ್ಕೆ ಅವಕಾಶ ಕಲ್ಪಿಸುವುದರಲ್ಲಿ ಕಾವ್ಯ ರಾಜ್ಯಗಳೆರಡೂ ಸಮಾನಧರ್ಮಿಗಳು. ಹಾಗೆ ಎರಡೂ ನಮಗೆ ಉಪಕಾರಿಗಳು. ಇದನ್ನು

ನೋಡಿದ ಮೇಲೆ ಕಾವ್ಯಸಾಹಿತ್ಯವು ರಾಜ್ಯಕರ್ಮಿಗೆ ಪ್ರಿಯವಾಗಬೇಕಾದದ್ದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೆ?

ಕವಿಯ ಪ್ರತಿಭೆ ಸಾಮರ್ಥ್ಯಗಳು ಎಷ್ಟು ಮಹತ್ತ್ವವುಳ್ಳವಾದರೂ ವಾಚಕನ ಶ್ರದ್ಧೆ ವ್ಯವಸಾಯಗಳಿಲ್ಲದಿದ್ದರೆ ಕವಿ ಪಟ್ಟ ಶ್ರಮ ಸಾರ್ಥಕವಾಗದು. ಕಾಮಾಲೆ ಕವಿದಿರುವ ಕಣ್ಣಿಗೆ,—ರೆಪ್ಪೆ ಮೆತ್ತಿಕೊಂಡಿರುವ ಕಣ್ಣಿಗೆ,—ಎಷ್ಟು ಒಳ್ಳೆಯ ಕನ್ನಡಕವನ್ನು ತೊಡಿಸಿದರೆ ಏನು? ವಾಚಕನು ತನ್ನ ಮನೋಬುದ್ಧಿಗಳನ್ನು ನಿರ್ಮಲಮಾಡಿಕೊಂಡು ಆಮೇಲೆ ಭಕ್ತಿಯಿಂದ ಕಾವ್ಯವನ್ನು ಮುಟ್ಟಬೇಕು. ಸುಶಿಕ್ಷಿತನಾದ ವಾಚಕನಿಗೇ ಕಾವ್ಯದ ಪ್ರಯೋಜನ.

ಸಾಹಿತ್ಯವ್ಯಾಸಂಗವು ರಾಷ್ಟ್ರಕಧರ್ಮಕ್ಕೆ ಅವಶ್ಯವಾದ ಪೂರ್ವಸಿದ್ಧತೆ. ಲೌಕಿಕ ರಾಜಕೀಯಗಳ ಪ್ರಕ್ಷೋಭೆಗಳ ನಡುವೆ ಅದೇ ನಮಗೆ ವಿಶ್ರಾಮಸ್ಥಾನ. ಸ್ಪರ್ಧಾವೈಪರೀತ್ಯದ ನಂಜಿಗೆ ಸಾಹಿತ್ಯರಸವೇ ಸಿದ್ಧ ಚಿಕಿತ್ಸೆ. ಬೀದಿಯ ಭಾಷಣ ಘೋಷಣಗಳು ಹಿಡಿಸುವ ದಿಗ್ಭ್ರಾಂತಿಯಲ್ಲಿ ಮಹಾಕಾವ್ಯವೇ ಶ್ರೇಯಸ್ಸಿನ ಗಿರಿಶಿಖರ; ಲೋಕಯಾತ್ರಾವಸರದಲ್ಲಿ ನಾವು ಅದನ್ನು ನೋಡಿ ನೋಡಿ ಸರಿಯಾದ ದಾರಿಯನ್ನು ಕಂಡುಕೊಳ್ಳಬೇಕಾದದ್ದು. ಕಾವ್ಯಸಂಸ್ಕಾರವಿಲ್ಲದವನು ಮಾಡುವ ರಾಜ್ಯಶಾಸನವು ಕುರುಡನು ಹಿಡಿದ ತುಪಾಕಿ. ಸಾಹಿತ್ಯವಿಲ್ಲದ ಸಾರ್ವಜನಿಕನ ಸೇವೆ ಕತ್ತಲುಕೋಣೆಯಲ್ಲಿ ಮೂಗನು ಬಡಿಸಿದ ಭೋಜನ.

# ೨. ಆಧುನಿಕ ವಿಚಾರೋಪನ್ಯಾಸಗಳು*

ಈ ಪರಿಷತ್ತು ಸ್ಥಾಪನೆಯಾಗಿ ಇಂದಿಗೆ ೧೯ ವರ್ಷಗಳಾಗಿವೆ. ಕನ್ನಡ ಭಾಷೆಯ ವ್ಯಾಪನೆಯನ್ನೂ ಪ್ರಾಶಸ್ತ್ಯವನ್ನೂ ಬೆಳಸುವುದು, ಕನ್ನಡ ಸಾಹಿತ್ಯದ ಸಂಪತ್ತನ್ನೂ ಶಕ್ತಿಯನ್ನೂ ಅಭಿವೃದ್ಧಿಗೊಳಿಸುವುದು, ಆ ಮೂಲಕ ಕನ್ನಡಿಗರ ಜೀವನದಲ್ಲಿ ಚೈತನ್ಯವೂ ತೇಜಸ್ಸೂ ತುಂಬುವಂತೆ ಮಾಡುವುದು—ಇವು ಈ ಪರಿಷತ್ತಿನ ಉದ್ದೇಶಗಳು. ಈ ಉದ್ದೇಶಗಳನ್ನು ಸಾಧಿಸುವುದಕ್ಕಾಗಿ ಪರಿಷತ್ತು ಮಾಡುತ್ತಿರುವ ಕೆಲಸಗಳು ಬಹುಶಃ ತಮ್ಮಲ್ಲಿ ಎಲ್ಲರಿಗೂ ತಿಳಿದೇ ಇರುತ್ತವೆ . . . ಪರಿಷತ್ತಿನ ಪ್ರಯೋಜನವನ್ನು ವಿಸ್ತಾರ ಪಡಿಸುವ ಉದ್ದೇಶದಿಂದ ಈಚೆಗೆ ಇಲ್ಲಿ ಉಪನ್ಯಾಸಗಳು, ಕಾವ್ಯವಾಚನ, ನಾಟಕಪ್ರದರ್ಶನ ಮುಂತಾದ ಸಾಹಿತ್ಯಕಾರ್ಯಗಳು ಹೆಚ್ಚುಹೆಚ್ಚಾಗಿ ನಡೆಯಬೇಕೆಂದು ಸಂಕಲ್ಪಮಾಡಿದೆ. ಈ ಸಂಕಲ್ಪದ ಒಂದು ರೂಪವೇ ಇಂದು ಉಪಕ್ರಮವಾಗಬೇಕಾಗಿರುವ ಸಮಾರಂಭ.

ಈ ಸಮಾರಂಭವು ಎರಡು ಪ್ರಕಾರವಾಗಿದೆ—ಒಂದು ಉಪನ್ಯಾಸಗಳದು, ಇನ್ನೊಂದು ಗ್ರಂಥಪ್ರದರ್ಶನದ್ದು.

ಈ ಉಪನ್ಯಾಸಗಳ ಆಶಯವೇನೆಂಬುದನ್ನು ಈಗಾಗಲೇ ಪ್ರಸಿದ್ಧ ಪತ್ರಿಕೆಗಳ ಮೂಲಕ ಮಹಾಜನರಿಗೆ ಶ್ರುತಪಡಿಸಿರುವುದಾಗಿದೆ. ಈ ಆಶಯಗಳು ಮುಖ್ಯವಾಗಿ ಎರಡು. ಆಧುನಿಕ ಪ್ರಪಂಚದ ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಚಾರಗಳನ್ನೂ ಕುರಿತು ಕನ್ನಡದಲ್ಲಿ ಭಾಷಣಮಾಡುವುದೂ ಚರ್ಚೆ ನಡಸುವುದೂ ಸಾಧ್ಯವೆಂಬುದನ್ನು ಮಹಾಜನರಿಗೆ ತೋರಿಸಿಕೊಡಬೇಕೆಂಬುದು ಒಂದು. ಇಂಥ ವಿಚಾರಗಳನ್ನು ಕುರಿತ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಲು ದೇಶವಿಚಾರನಿಷ್ಠರಾದವರಿಗೆ,—ವಿಶೇಷವಾಗಿ ಉಪಾಧ್ಯಾಯಮಂಡಲಿಗೆ,—ಅವಕಾಶ ಕಲ್ಪಿಸಿಕೊಡಬೇಕೆಂಬುದು ಇನ್ನೊಂದು.

ದೇಶವಿದೇಶಗಳ ಜೀವನವು ಈಗ ಒಂದಾಗುತ್ತಿದೆ. ಪ್ರತಿಯೊಂದು ದೇಶವೂ ಬೇರೆಬೇರೆಯಾಗಿದ್ದುಕೊಂಡು ತನ್ನಷ್ಟಕ್ಕೆ ತಾನು ಬದುಕುತ್ತಿದ್ದ ಕಾಲವು

---

*ಕರ್ಣಾಟಕ ಸಾಹಿತ್ಯ ಪರಿಷತ್ತು ಬೆಂಗಳೂರಿನಲ್ಲಿ ಏರ್ಪಡಿಸಿದ ಮೊದಲನೆಯ ವಿಶೇಷ ಸಾಹಿತ್ಯೋತ್ಸವದ (ತಾ|| ೬-೫-೧೯೩೪ ರಿಂದ ೧೨-೫-೧೯೩೪) ಸಂದರ್ಭದಲ್ಲಿ ಉಪಾಧ್ಯಕ್ಷಸ್ಥಾನದಿಂದ (ತಾ|| ೬-೫-೧೯೩೪ ರಲ್ಲಿ) ಮಾಡಿದ ಸ್ವಾಗತ ಭಾಷಣದ ಭಾಗಗಳು. (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೧೯-೨, ಜುಲೈ ೧೯೩೪).

ಕಳೆದುಹೋಯಿತು. ಜನಜನಾಂಗಗಳ ಜೀವನಪ್ರವಾಹಗಳು ಈಗ ಬೆರೆತು, ಕಲೆತು, ಸಮುದ್ರದಂತಾಗಿವೆ. ಹೀಗೆ ಲೋಕಜೀವನವು ಒಂದು ಕಡೆ ಏಕಾಕಾರವಾಗುತ್ತಿರುವಂತೆಯೇ ಮತ್ತೊಂದು ಕಡೆ ವಿವಿಧವಿಚಾರವಿಶ್ರಿತ ವಾಗುತ್ತಿದೆ. ಜನರು ಹೊಸದಾಗಿ ತಿಳಿದುಕೊಳ್ಳಬೇಕಾದ ಸಂಗತಿಗಳೂ ಹೊಸದಾಗಿ ವಿಮರ್ಶಿಸಬೇಕಾದ ಸೂಕ್ಷ್ಮಗಳೂ, ಹೊಸದಾಗಿ ಪರಿಹರಿಸ ಬೇಕಾದ ಸಮಸ್ಯೆಗಳೂ ದಿನೇ ದಿನೇ ಹೆಚ್ಚಾಗುತ್ತಿವೆ. ಹೀಗೆ ನವನವೀನವಾಗಿ ಒದಗುತ್ತಿರುವ ಜೀವಿತಕರ್ತವ್ಯಗಳಿಗೆ ನಮ್ಮ ಜನರು ಸಿದ್ಧರಾಗಬೇಕಾದರೆ ಅವರ ಮನಸ್ಸಿನಲ್ಲಿ ಈ ಆಧುನಿಕ ವಿಚಾರಗಳ ಜ್ಞಾನವು ವಿಶದವಾಗಿ ತುಂಬಿರ ಬೇಕು. ಈಚೆಗೆ ನಮ್ಮ ದೇಶದಲ್ಲಿ ಈ ಕೆಲಸವನ್ನು ನೆರವೇರಿಸಲು ವೃತ್ತಪತ್ರಿಕೆ ಗಳು ಹೆಚ್ಚುಹೆಚ್ಚಾಗಿ ಅನುವಾಗುತ್ತಿವೆ. ಯಾವ ವರ್ತಮಾನ ಪತ್ರಿಕೆಯನ್ನು ಕೈಗೆ ತೆಗೆದುಕೊಂಡರೂ ಅದರಲ್ಲಿ ತಾತ್ಕಾಲಿಕ ಪ್ರಪಂಚದ ಸಿಕ್ಕುಗಳನ್ನೂ ತೊಡಕುಗಳನ್ನೂ ತೋರಿಸುವ ವರ್ತಮಾನಗಳು ಪ್ರತಿದಿನವೂ ದೊರೆಯುತ್ತವೆ. ಇಂಥ ವರ್ತಮಾನಗಳ ಅರ್ಥವನ್ನೂ ವ್ಯಾಪ್ತಿಯನ್ನೂ ಸರಿಯಾಗಿ ಗ್ರಹಿಸ ಬೇಕಾದರೆ ಅದಕ್ಕೆ ಯಾವ ಪೀಠಿಕಾರೂಪಜ್ಞಾನವು ಆವಶ್ಯಕವಾಗಿರಬೇಕೋ ಅಂಥ ಜ್ಞಾನವನ್ನು ತಕ್ಕಮಟ್ಟಿಗಾದರೂ ಜನರಿಗೆ ದೊರಕಿಸಿಕೊಡಬೇಕೆಂಬುದು ಈ ಉಪನ್ಯಾಸಗಳ ತಾತ್ಪರ್ಯ.

## ನೂತನ ಪ್ರಪಂಚ

ಪ್ರಪಂಚದ ಜೀವನರೀತಿ ಬದಲಾಯಿಸಿದಂತೆಲ್ಲ ದೇಶದ ವಿದ್ಯಾಭ್ಯಾಸರೀತಿ ಬದಲಾಯಿಸುವುದು ಸಹಜವಾಗಿದೆ. ಈ ಬದಲಾವಣೆಯನ್ನನುಸರಿಸಿ ನಮ್ಮ ಪಾಠಶಾಲೆಗಳಲ್ಲಿ ಉಪಯುಕ್ತವಾಗುವ ಪಠ್ಯಪುಸ್ತಕಗಳ ಸ್ವರೂಪವೂ ಮಾರ್ಪಡುತ್ತಿದೆ. ಈಗ ನಮ್ಮ ಮಾಧ್ಯಮಿಕ ಪಾಠಶಾಲೆಗಳಲ್ಲಿಯೂ ಹೈಸ್ಕೂಲು ಗಳಲ್ಲಿಯೂ ನಾರ್ಮಲ್ ಸ್ಕೂಲುಗಳಲ್ಲಿಯೂ ಉಪಾಧ್ಯಾಯರು ಅನೇಕ ಹೊಸ ವಿಷಯಗಳನ್ನು ಬೋಧಿಸಬೇಕಾಗಿದೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಖಗೋಳಶಾಸ್ತ್ರ, ಸಸ್ಯಶಾಸ್ತ್ರ, ಭೂಮಿಶಾಸ್ತ್ರ—ಇವೇ ಮೊದಲಾದ ಪ್ರಕೃತಿ ವಿಜ್ಞಾನಶಾಸ್ತ್ರ ಪಾಠಗಳು ಈಗಿನ ಪಾಠಪಟ್ಟಿಕೆಯಲ್ಲಿ ಪ್ರಮುಖವಾಗಿ ಕಾಣುತ್ತಿವೆ. ಇದರಂತೆಯೇ ಪ್ರಜಾಧರ್ಮ, ರಾಜ್ಯಾಂಗರಚನೆ, ಅರ್ಥಶಾಸ್ತ್ರ, ಜಾತಿಕುಲಾಚಾರ ಸುಧಾರಣೆ—ಇವೇ ಮೊದಲಾದ ಸಮಾಜವಿಜ್ಞಾನದ ಅಂಶಗಳೂ ಈಗಣ ಪಠ್ಯಪುಸ್ತಕಗಳಲ್ಲಿ ಪ್ರಬಲಿಸುತ್ತಿವೆ. ಈಗಿನ ಕವಿತೆಗಳಲ್ಲಿ ಸಹ ಒಂದು ಹೊಸ ಶೈಲಿ, ಹೊಸ ವಸ್ತು, ಹೊಸ ಧಾಟಿ ಇವು ಕಾಣಬರುತ್ತಿವೆ.

ಇಂಥಾ ಆಧುನಿಕ ಸಾಹಿತ್ಯದ ಗ್ರಂಥಗಳನ್ನು ವಿದ್ಯಾರ್ಥಿಗಳ ಮನಸ್ಸಿಗೆ ತೃಪ್ತಿಯುಂಟಾಗುವಂತೆ ಪಾಠ ಹೇಳಬೇಕಾದರೆ ಅಧ್ಯಾಪಕರಿಗೆ ಈ ವಿಷಯ ಗಳ ತಿಳಿವಳಿಕೆಯು ವಿಶದವಾಗಿ ಇರಬೇಕು. ಈ ಪೀಠಿಕಾರೂಪವಾದ ಜ್ಞಾನವು ಸಾಲದೆಹೋದರೆ, ಉಪಾಧ್ಯಾಯರು ಹೇಳುವ ಪಾಠವು ಬರಿಯ ಶಬ್ದಮಾತ್ರವಾಗಿ, ಒಣ ಕಗ್ಗವಾಗಿ ವಿದ್ಯಾರ್ಥಿಗಳ ಅಂತರಂಗವನ್ನು ಬೆಳಗಿಸಲಾರದಾಗುವುದು. ಈಗಿನ ಗ್ರಂಥವನ್ನು ಸರಿಯಾಗಿ ಅರ್ಥಮಾಡಿ ಕೊಳ್ಳುವುದಕ್ಕೆ ಈಗಿನ ಲೋಕಪರಿಸ್ಥಿತಿಯ ಜ್ಞಾನವು ಎಷ್ಟು ಅವಶ್ಯವಾದ ಆಧಾರವೆಂಬುದನ್ನು ನಮ್ಮ ಸಂಸ್ಥಾನದ ವಿದ್ಯಾಪ್ರಚಾರದ ಇಲಾಖೆಯ ಕೆಲವು ಅಧಿಕಾರಮಂಡಲಗಳು ಕಂಡುಕೊಂಡಿವೆಯೆಂದು ನನಗೆ ತಿಳಿದು ಬಂದಿದೆ. ಬಹುಶಃ ಈ ಅಭಿಪ್ರಾಯವನ್ನು ಅನುಸರಿಸಿಯೇ ನಮ್ಮ ವಿದ್ಯಾ ಪ್ರಚಾರದ ಇಲಾಖೆಯ ಅಧಿಕಾರಿಗಳು ಈ ಉಪನ್ಯಾಸ ಸಮಾರಂಭಕ್ಕೆ ಪ್ರೋತ್ಸಾಹಕೊಟ್ಟಿರುವರೆಂದು ನಾನು ನಂಬಿಕೊಂಡಿದ್ದೇನೆ.

ನಮ್ಮ ಅಂತರಂಗಜೀವಿತದ ಮೂಲವಿಚಾರಗಳು ಸಾರ್ವಕಾಲಿಕವಾದವು. ಅವು ಎಷ್ಟು ಪುರಾತನವೋ ಅಷ್ಟು ನೂತನವೂ ಹೌದು. ಅವನ್ನು ಕುರಿತ ಪ್ರಾಚೀನ ದೃಷ್ಟಿಯನ್ನು ಆಧುನಿಕ ದೃಷ್ಟಿಯೊಡನೆ ಸಮನ್ವಯಗೊಳಿಸುವುದೇ ಜ್ಞಾನವಂತರಿಗೆ ಇರುವ ಕೆಲಸ. ಈ ಕಾರಣದಿಂದ ನಮ್ಮ ದೇಶದ ಪ್ರಾಚೀನ ತತ್ತ್ವದರ್ಶನಗಳಿಗೂ ಕಾವ್ಯಕ್ಕೂ ಕಲೆಗೂ ಸಂಬಂಧಪಟ್ಟ ಪ್ರಸಂಗಗಳನ್ನು ಸ್ವಲ್ಪವಾಗಿಯಾದರೂ ಈ ಆಧುನಿಕ ವಿಚಾರೋಪನ್ಯಾಸಮಾಲೆಯಲ್ಲಿ ಸೇರಿಸಲು ಪ್ರಯತ್ನಿಸಿದೆ.

ಆಧುನಿಕ ಪ್ರಪಂಚದ ಜಟಿಲ ವಿಚಾರಗಳನ್ನು ಕುರಿತು ಉಪನ್ಯಾಸ ಮಾಡುವುದೂ ಆಧುನಿಕ ವಿಜ್ಞಾನದ ಸೂಕ್ಷ್ಮಮಾರ್ಗಗಳನ್ನೂ ಗಹನ ತತ್ತ್ವಗಳನ್ನೂ ವಿವರಿಸುವುದೂ ಕನ್ನಡಕ್ಕೆ ಅಸಾಧ್ಯವೆಂದು ಹೇಳುವವರು ನಮ್ಮ ದೇಶದಲ್ಲಿ ಸ್ವಲ್ಪ ಕಾಲದ ಹಿಂದೆ ಅಪರೂಪವಾಗಿರಲಿಲ್ಲ. ಇಂದಿನಿಂದ ಇಲ್ಲಿ ನಡೆಯುವ ಉಪನ್ಯಾಸಗಳನ್ನು ಕೇಳಿದ ಮೇಲೆ ಅಂಥಾ ಶಂಕೆಗೆ ಕಾರಣ ವಿರಲಾರದೆಂದು ನಾನು ನಂಬಿಕೊಂಡಿದ್ದೇನೆ. ಉಪನ್ಯಾಸಕನಿಗೆ ವಿಷಯವು ಸ್ವಾಧೀನವಾಗಿದ್ದರೆ ತಕ್ಕ ಮಾತು ಅವನಿಗೆ ಕನ್ನಡದಲ್ಲಿಯೂ ಸಹ ಸ್ವಾಭಾವಿಕವಾಗಿ ಒದಗಿಬರುತ್ತದೆ ಎಂದು ನನ್ನ ತಿಳಿವಳಿಕೆ. ಭಾಷೆ ಯಾವಾಗಲೂ ವಿಚಾರಕ್ಕೆ ಅಧೀನವಾಗಿರುತ್ತದೆ. ಸರಿಯಾದ ಮಾತು ದೊರೆಯುವುದು ಮೊದಮೊದಲು ಸ್ವಲ್ಪ ಕಷ್ಟವಾಗಬಹುದು. ಈ ಸ್ವಲ್ಪ ಕಷ್ಟವು ಕನ್ನಡಕ್ಕೆ ಮಾತ್ರ ವಿಶೇಷವಾದದ್ದೇನೂ ಅಲ್ಲ; ಅದು ಎಲ್ಲ ಭಾಷೆ

ಗಳಿಗೂ ಸಹಜವಾದದ್ದು. ಹೊಸ ಭಾವ, ಹೊಸ ಅಭಿಪ್ರಾಯ, ಹೊಸ ತತ್ತ್ವ—ಇವಕ್ಕೆ ಹೊಸ ಶರೀರ, ಹೊಸ ಕವಚ, ಹೊಸ ವಾಹನ—ಇವು ಸೃಷ್ಟಿಯಾಗಬೇಕಾಗುವುದು ಸಹಜ. ಎಷ್ಟು ದಿವಸ ಅವು ಹೊಸದಾಗಿರುವುವೋ ಅಷ್ಟು ದಿವಸ ಅವು ಜನರಿಗೆ ಕಷ್ಟವೆಂದು ತೋರಬಹುದು. ನಮಗೆ ಯಾವುದು ಪರಿಚಿತವೋ ಅದು ಸುಲಭ; ಯಾವುದರ ಪರಿಚಯ ಸಾಲದೋ ಅದು ಕಷ್ಟ. ಇದು ಸಮಸ್ತ ಮನುಷ್ಯಸ್ವಭಾವಕ್ಕೂ ಸೇರಿದ ಲಕ್ಷಣ. ಭಾಷೆಯ ವಿಷಯದಲ್ಲಿಯೂ ಇದು ನಿಜ. ಅನ್ಯದೇಶಗಳ ಅಭಿಪ್ರಾಯಗಳನ್ನೂ ಜ್ಞಾನವನ್ನೂ ನಮ್ಮ ಜನರಿಗೆ ಪರಿಚಯ ಮಾಡಿಸಿಕೊಡಬೇಕಾದರೆ, ಕೆಲವು ಅಪರಿಚಿತ ಪದಗಳನ್ನು ಉಪಯೋಗಿಸಲೇ ಬೇಕಾಗುತ್ತದೆ. ಈ ನೂತನಪದಸೃಷ್ಟಿಯ ಕಾರ್ಯವು ಕಷ್ಟದ ಕೆಲಸವೇ ಹೌದು. ಆ ಕೆಲಸವನ್ನು ಮಾಡಿದ ಮೇಲೆ, ಅದು ಜನರಲ್ಲಿ ರೂಢಿಗೆ ಬರುವವರೆಗೂ ಅವರಿಗೆ ಅದು ಕಷ್ಟವಾಗಿ ತೋರುವುದೂ ನಿಜ. ಆದರೆ ಒಂದು ಭಾಷೆಯನ್ನು ಬೆಳಸಿ, ಅದರ ಜನವನ್ನು ಮೇಲಕ್ಕೆತ್ತಬೇಕೆಂದು ಆಶೆಪಡುವವರು ಇಂಥಾ ಕಷ್ಟಕ್ಕೆ ಸಿದ್ಧರಾಗಿರಬೇಕು. ಇಷ್ಟುಮಟ್ಟಿನ ಕಷ್ಟವನ್ನು ಕನ್ನಡ ಭಾಷಣಕರ್ತರೂ ಲೇಖಕರೂ ಸಹಿಸಲು ಸಿದ್ಧರಾದರೆ, ಕನ್ನಡದಲ್ಲಿ ಒಂದು ಹೊಸ ಸಾಹಿತ್ಯವೂ ಕನ್ನಡಿಗರ ಜೀವನದಲ್ಲಿ ಒಂದು ಹೊಸ ಕಾಂತಿಯೂ ಉಂಟಾಗುವುದು ಅಸಾಧ್ಯವಾಗದು. ಇಲ್ಲಿ ನೆರೆದಿರತಕ್ಕ ಮಹಾಜನರು—ಅವರಲ್ಲಿ ವಿಶೇಷವಾಗಿ ಉಪಾಧ್ಯಾಯರು—ಈ ಆಧುನಿಕ ವಿಚಾರೋಪನ್ಯಾಸಗಳನ್ನು ಆದರದಿಂದ ಕೇಳಿ, ಅದರ ಫಲವನ್ನು ತಮ್ಮಿಂದ ಜ್ಞಾನ ಪಡೆದುಕೊಳ್ಳಬೇಕಾಗಿರುವ ಇತರರಲ್ಲಿ ಬಿತ್ತರಿಸಿಯಾರೆಂದು ನಾವು ನಂಬಿದ್ದೇವೆ.

## ಗ್ರಂಥಾಭಿವೃದ್ಧಿ

ಗ್ರಂಥಪ್ರದರ್ಶನವನ್ನು ಕುರಿತು ಹೇಳಬೇಕಾದ ಮಾತುಗಳು ಒಂದೆರಡಿವೆ. ಕನ್ನಡ ಸಾಹಿತ್ಯಪ್ರಪಂಚದ ಮಹಾಮಹೋಪಾಧ್ಯಾಯರಾದ ಶ್ರೀಮಾನ್ ನರಸಿಂಹಾಚಾರ್ಯರವರು ಕನ್ನಡ ಗ್ರಂಥಲೇಖಕರ ಚರಿತ್ರೆಯನ್ನು ಕ್ರಿ.ಶ. ೧೯ನೆಯ ಶತಮಾನದ ಅಂತ್ಯದವರೆಗೆ ಸಂಗ್ರಹಿಸಿ ಕೊಟ್ಟಿರುತ್ತಾರಷ್ಟೆ? ಅಲ್ಲಿಂದೀಚಿನ ೩೩ ವರ್ಷಗಳಲ್ಲಿ—ಎಂದರೆ, ಒಂದು ಶತಮಾನದ ಮೂರನೆಯೊಂದಂಶದಲ್ಲಿ—ಕನ್ನಡ ಸಾಹಿತ್ಯವು ಹೇಗೆ ಅಭಿವೃದ್ಧಿಹೊಂದಿದೆಯೆಂಬುದನ್ನು ಪ್ರತ್ಯಕ್ಷಪಡಿಸುವುದೇ ಈ ಪ್ರದರ್ಶನದ ತಾತ್ಪರ್ಯ. ದೇಶದ ಜನತೆಯ ವೃದ್ಧಿಕ್ಷಯಗಳ ರೀತಿಯನ್ನು ಅರಿತುಕೊಳ್ಳಲು ಸಾಧನವಾಗು

ವಂತೆ ಹತ್ತು ವರ್ಷಗಳಲ್ಲೊಂದು ಬಾರಿ ಪ್ರಜಾಗಣನೆ ಮಾಡಬೇಕೆಂದು ಸರ್ಕಾರವು ವಿಧಾಯಕಮಾಡುವುದುಂಟಲ್ಲವೆ? ಅದೇ ರೀತಿಯಾಗಿ ಆಗಿಂದಾಗ್ಗೆ ಸರಸ್ವತೀರಾಜ್ಯದ ಪ್ರಜಾಗಣನೆಯನ್ನು ಮಾಡುವುದು ಭಾಷಾಭಿಮಾನಿಗಳ ಕರ್ತವ್ಯವಾಗಿರುತ್ತದೆ. ನಮ್ಮ ಈಗಿನ ಗ್ರಂಥಗಣನೆಯಿಂದ ತೋರಿಬರುವ ಸಿದ್ಧಾಂತಗಳನ್ನೆಲ್ಲ ವಿಮರ್ಶನಪೂರ್ವಕವಾಗಿ ತಿಳಿಯಪಡಿಸಲು ಈಗ ನಾನು ಪ್ರಯತ್ನಪಡಲಾರೆ. ಆ ವಿಮರ್ಶನಕ್ಕೆ ತಕ್ಕ ಸಾಮಗ್ರಿ ಸಿದ್ಧವಾಗಲು ಇನ್ನು ಸ್ವಲ್ಪಕಾಲ ಬೇಕಾಗುತ್ತದೆ. ಒಟ್ಟಿನಮೇಲೆ ಇಷ್ಟು ಹೇಳಬಹುದು—ಕಳೆದ ೩೩ ವರ್ಷಗಳಲ್ಲಿ ಆಗಿರುವ ಗ್ರಂಥಾಭಿವೃದ್ಧಿಯು ಉತ್ಸಾಹಕ್ಕೆ ಕಾರಣವನ್ನು ಉಂಟುಮಾಡುವಂಥಾದ್ದಾಗಿದೆ. ಅದರಲ್ಲಿಯೂ ಪರಿಷತ್ತು ಹುಟ್ಟಿದಂದಿನಿಂದೀಚೆಗೆ ಗ್ರಂಥಸಂಖ್ಯೆಯು ಹೆಚ್ಚಾಗಿ ಬೆಳೆದಿದೆ. ಗ್ರಂಥಗಳ ಸಂಖ್ಯೆ ಮಾತ್ರವೇ ಅಲ್ಲ, ಅವುಗಳ ಬಾಹ್ಯರೂಪವೂ ಕ್ರಮೇಣ ಉತ್ತಮವಾಗುತ್ತಿದೆ. ಪುಸ್ತಕಗಳು ನೋಟಕ್ಕೆ ಅಂದವಾಗಿ, ಓದುವುದಕ್ಕೆ ಹಿತವಾಗಿ, ಕೈಗೆ ಪ್ರಿಯವಾಗಿ ಆಗುತ್ತಿವೆ. ಅವುಗಳ ಒಳತಿರುಳು ಹೊಸ ಹೊಸ ರಸಗಳಿಂದಲೂ ಹೊಸ ಹೊಸ ರುಚಿಗಳಿಂದಲೂ ಇಂಪಾಗುತ್ತಿದೆ. ಪ್ರದರ್ಶಿತ ಗ್ರಂಥರಾಶಿಯಲ್ಲಿ ೧೨ ಜಾತಿ ೬೦ ಉಪಜಾತಿಗಳಿರುವುದನ್ನು ನೋಡಿದರೆ ಗ್ರಂಥವಿಷಯಗಳು ವಿವಿಧವಾಗಿ, ಸಾಹಿತ್ಯವು ನಾನಾ ಮುಖಗಳನ್ನು ತಾಳುತ್ತಿದೆಯೆಂಬುದು ಗೋಚರವಾಗುತ್ತದೆ. ಈ ಆಧುನಿಕ ಸಾಹಿತ್ಯದಲ್ಲಿ ಕೆಲವು ಭಾಗ ಪ್ರಯೋಗಪರೀಕ್ಷಾರೂಪದ್ದು (Experiment) ಆಗಿರಬಹುದು. ಕೆಲವು ಗ್ರಂಥಗಳು ಬೆಳವಣಿಗೆಯ ಒಂದು ಬಾಲ್ಯದಶೆಯಲ್ಲಿರಬಹುದು. ಇಂಥಾ ಪರೀಕ್ಷಾಪ್ರಯೋಗವೂ ಮಧ್ಯಮಸ್ಥಿತಿಯೂ ಬೆಳವಣಿಗೆಯಲ್ಲಿ ಒಂದು ಅನಿವಾರ್ಯವಾದ ಅವಸ್ಥೆ,—ಅವು ಬೆಳವಣಿಗೆಯ ಒಂದು ಅವಶ್ಯಭಾಗ,—ಎಂಬುದನ್ನು ನಾವು ಮರೆಯಬಾರದು. ಮನುಷ್ಯನ ಜೀವನವು ದಿನೇ ದಿನೇ ಆಗುವ ಅನುಭವದಿಂದ ಉತ್ತಮವಾಗುವಂತೆಯೇ, ಸಾಹಿತ್ಯವು ಕೂಡ ಅನುಭವದಿಂದ ಉತ್ತಮಗೊಳ್ಳುವುದು ಸ್ವಾಭಾವಿಕವಾಗಿದೆ. ಆದಕಾರಣ ಈಚಿನ ಪ್ರಯತ್ನಗಳಲ್ಲಿ ಕೆಲವು ಸಂಪ್ರದಾಯಾನುಸಾರವಾಗಿ ಇಲ್ಲವೆಂಬ ಒಂದು ಕಾರಣದಿಂದ ಅವನ್ನು ಯಾರೂ ಅಲ್ಲಗಳೆಯತಕ್ಕದ್ದಲ್ಲ. ಆಗಲೇ ನಾನು ಅರಿಕೆಮಾಡಿದಂತೆ, ಹೊಸದಾದದ್ದು "ಹೊಸದು" ಎಂಬ ಒಂದು ಕಾರಣದಿಂದಲೇ ನಮಗೆ ಸ್ವಲ್ಪಕಾಲ ಅಗ್ರಾಹ್ಯವಾಗಬಹುದು. ಅಭ್ಯಾಸದಿಂದ ಅದು ನಮಗೆ ಗ್ರಾಹ್ಯವಾಗುತ್ತ ಬಂದೀತು. ಸಾಹಿತ್ಯದ ಬೆಳವಣಿಗೆಗೆ ಮುಖ್ಯವಾಗಿ ಬೇಕಾದದ್ದು ವಾಚಕರ ಸಹೃದಯತೆ, ಅವರ

ಸಹಾನುಭೂತಿ, ಅವರ ವಿಶ್ವಾಸ. ನಮ್ಮ ಮಹಾಜನರೂ ಪಂಡಿತರೂ ಸಹ ಈಗಿನ ಲೇಖನಪ್ರಯತ್ನವನ್ನು ಸ್ನೇಹದೃಷ್ಟಿಯಿಂದ ನೋಡಬೇಕು. ಹಾಗೆ ಸ್ನೇಹದೃಷ್ಟಿ ಎಲ್ಲಿ ಸಿದ್ಧವಾಗಿರುವುದೋ ಅಲ್ಲಿ ಕನ್ನಡದ ಭವಿಷ್ಯತ್ತಿನ ವಿಷಯದಲ್ಲಿ ಭರವಸೆಗೆ ಕಾಣರವಿರುವುದು ಖಂಡಿತ.

ಗ್ರಂಥಸಂಖ್ಯೆಯ ಅಭಿವೃದ್ಧಿಯು ಎಲ್ಲ ಸಾಹಿತ್ಯಶಾಖೆಗಳಲ್ಲಿಯೂ ಒಂದೇ ಬಗೆಯಾಗಿ ನಡೆದುಕೊಂಡುಬಂದಿಲ್ಲ. ಮತಾಚಾರಗಳ ಶಾಖೆಯಲ್ಲಿ ಗ್ರಂಥಗಳ ಬೆಳವಣಿಗೆ ಯಥೇಷ್ಟವಾಗಿದೆ. ಇದು ಪೂರ್ವದಿಂದಲೂ ನಮಗೆ ಆಗಿಬಂದಿರುವ ಸಾಹಿತ್ಯ. ನಮ್ಮ ದೇಶದಲ್ಲಿ ಮತಮತಾಂತರಗಳ ಆಧಿಪತ್ಯವು ಪುರಾತನ ಕಾಲದಿಂದ ಬಂದದ್ದಾಗಿದೆ; ಮತ್ತು ಮತಧರ್ಮವು ಸಾಹಿತ್ಯರಚನೆಗೆ ಮೂಲಕಾರಣವಾಗಿ ನಿಂತಿದೆ. ಮತಾಚಾರಗ್ರಂಥಗಳ ಜೊತೆಗೆ ಉಪಾಂಗವಾದ ಜ್ಯೋತಿಷ ಶಕುನ ಸಾಮುದ್ರಿಕಾದಿ ಅದೃಷ್ಟರಹಸ್ಯಗಳ ಸಾಹಿತ್ಯವೂ ನಮ್ಮಲ್ಲಿ ಹೇರಳವಾಗಿದೆ. ಈ ಮತರಹಸ್ಯವು ಇನ್ನು ಮುಂದೆಯೂ ಹೀಗೆಯೇ ಮಹಾರಣ್ಯವಾಗಿ ಹಬ್ಬಿಕೊಂಡು ಹೋಗುವುದೋ, ಅಥವಾ ವಿಜ್ಞಾನವಿದ್ಯೆಯ ಪ್ರಭಾವದಿಂದ ಇನ್ನು ಅದರ ಹಬ್ಬಿಕೆ ಕಡಮೆಯಾದೀತೋ— ಎಂಬುದು ತರ್ಕಮಾಡಬಹುದಾದ ಸಂಗತಿ. ಮತಧರ್ಮಸಾಹಿತ್ಯವು ಪ್ರದರ್ಶನದ ಇತರ ಕೆಲವು ಶಾಖೆಗಳೊಳಕ್ಕೂ ಹರಡಿಕೊಂಡಿದೆ.

ಬಹುಶಃ ಎಲ್ಲಕ್ಕಿಂತ ಹೆಚ್ಚಾಗಿ ಸಂಖ್ಯಾಭಿವೃದ್ಧಿ ತೋರಿಸುತ್ತಿರುವ ಪ್ರದರ್ಶನಶಾಖೆ ಪದ್ಯಕಾವ್ಯದ್ದು. ಇದರ ಜೊತೆಗೆ ನಾಟಕಗಳನ್ನೂ ಕಾದಂಬರಿ ಸಣ್ಣಕಥೆಗಳನ್ನೂ ಸೇರಿಸಿಕೊಳ್ಳಬಹುದು. ಒಟ್ಟಿನ ಮೇಲೆ ಇವೆಲ್ಲವೂ ಭಾವರಸಪ್ರಧಾನವಾದ ಸಾಹಿತ್ಯ. ಇವು ಹೃದಯದಿಂದ ಹುಟ್ಟಿ ಹೃದಯವನ್ನು ಮುಟ್ಟತಕ್ಕವು. ಇವು ದೇಶದಲ್ಲಿ ಹೆಚ್ಚಿದಂತೆಲ್ಲಾ ಜನರಲ್ಲಿ ಭಾವೋತ್ಕರ್ಷವು ಹೆಚ್ಚುತ್ತಿದೆಯೆಂದು ನಾವು ಸಾಮಾನ್ಯವಾಗಿ ಊಹಿಸಬಹುದು. ಕನ್ನಡ ಕವಿತೆಯಲ್ಲಿ ಹೊಸದೇನೂ ಹುಟ್ಟಿಲ್ಲವೆಂದು ಈಗ ಯಾರೂ ಕೊರತೆಪಟ್ಟುಕೊಳ್ಳುವಹಾಗಿಲ್ಲ.

ನೂತನಕಾವ್ಯರಚನೆಯ ಜೊತೆಗೆ ಪ್ರಾಚೀನಕಾವ್ಯವ್ಯಾಸಂಗವೂ ಬೆಳೆಯುತ್ತಿರುವುದರ ಚಿಹ್ನೆಗಳು ತೋರುತ್ತಿವೆ. ಮಹಾಕವಿಗಳಾದ ಪಂಪ ಅಭಿನವಪಂಪರ ಕೃತಿಗಳನ್ನು ಸಾಹಿತ್ಯಪರಿಷತ್ತೇ ಪರಿಷ್ಕೃತರೂಪದಲ್ಲಿ ಅಚ್ಚುಮಾಡಿಸಿದೆ. "ಕಾವ್ಯಮಂಜರೀ" ಪ್ರಕಾಶಕರು ಮಾಡಿರುವ ಅಮೋಘವಾದ ಕೆಲಸದ ಜೊತೆಗೆ ಮೈಸೂರು ವಿಶ್ವವಿದ್ಯಾನಿಲಯವೂ ಅದರ ಪ್ರಾಚ್ಯಕೋಶಾಗಾರವೂ ಮದ್ರಾಸು ವಿಶ್ವವಿದ್ಯಾನಿಲಯವೂ ಇತರ ಕೆಲವು ಸಂಸ್ಥೆ

ಗಳೂ ಪ್ರಾಚೀನಕಾವ್ಯಗಳನ್ನು ಶೋಧಿಸಿ ಪ್ರಕಟಪಡಿಸುವ ಕೆಲಸವನ್ನು ಕೈಕೊಂಡಿವೆ. ಪುರಾತನ ಕಾವ್ಯಗಳಲ್ಲಿ ಜನರ ಅಭಿರುಚಿಯನ್ನು ಹೆಚ್ಚಿಸಲು ಈ ಪ್ರಯತ್ನಗಳು ಸಾಧಕವಾದಾವೆಂದು ನಾವು ನಂಬಬಹುದು. ಸಾಹಿತ್ಯ ದಲ್ಲಿಯೂ ಸಾಹಿತ್ಯಾಭಿರುಚಿಯಲ್ಲಿಯೂ ಹಳದೂ ಹೊಸತೂ ಧಾರಾರೂಪ ವಾಗಿ, ಪರಂಪರೆಯಾಗಿ, ಅಖಂಡಾಕಾರವಾಗಿ ಸಾಗುತ್ತಿರಬೇಕು. ಆಧುನಿಕ ಸಾಹಿತ್ಯವನ್ನು ಮಾತ್ರ ಆದರಿಸುವೆವೆನ್ನುವವರಿಗೆ ಸಾಹಿತ್ಯದ ಸಂಪೂರ್ಣ ಸ್ವರೂಪವು ತಿಳಿಯಲಾರದು. ಹಾಗೆಯೇ ಪ್ರಾಚೀನಕಾವ್ಯಗಳನ್ನು ಮಾತ್ರವೇ ಪುರಸ್ಕರಿಸುವೆವೆನ್ನುವವರಿಗೂ ಸಾಹಿತ್ಯದ ಸಮಗ್ರಸ್ವರೂಪವು ತಿಳಿಯಲಾರದು. ರಸತತ್ತ್ವಾನ್ವೇಷಿಗಳು ಎರಡನ್ನೂ ನೋಡಬೇಕು.

## ಶಕ್ತಿಪ್ರದ ಸಾಹಿತ್ಯ

ಕಾವ್ಯಶಾಖೆಯಲ್ಲಿ ಬೆಳವಣಿಗೆ ತೋರಿರುವಷ್ಟುಮಟ್ಟಿಗೆ ದೇಶಚರಿತ್ರೆ ಮೊದಲಾದ ಸ್ಥೂಲಲೋಕವಿಚಾರದ ಶಾಖೆಗಳಲ್ಲಿ ಬೆಳವಣಿಗೆ ಕಾಣಬರುವು ದಿಲ್ಲ. ಈ ಶಾಖೆಗಳು ವಿಜ್ಞಾನಶಾಖೆಗೆ ಹತ್ತಿರ ಹತ್ತಿರ ಇರತಕ್ಕವು. ವಿಜ್ಞಾನ ಶಾಖೆಯಲ್ಲಂತೂ ಬೆಳವಣಿಗೆ ಬಹು ಸ್ವಲ್ಪವಾಗಿದೆ. ಪ್ರಕೃತಿವಿಜ್ಞಾನವನ್ನು ನೋಡಿದರೂ ಸರಿಯೆ, ಸಮಾಜವಿಜ್ಞಾನವನ್ನು ನೋಡಿದರೂ ಸರಿಯೆ, ನಮ್ಮಲ್ಲಿ ಗ್ರಂಥಾಭಿವೃದ್ಧಿ ತಕ್ಕಷ್ಟು ನಡೆದಿಲ್ಲವೆಂದು ಸ್ಪಷ್ಟವಾಗಿ ಗೊತ್ತಾಗು ತ್ತದೆ. ಸಾಹಿತ್ಯಾಭಿವೃದ್ಧಿಯ ಆಧಾರದಿಂದ ನಮ್ಮ ಜೀವಿತರೀತಿಯನ್ನು ಊಹಿಸಬಹುದಾದರೆ, ನಾವು ಭಾವಪ್ರಪಂಚ ಊಹಾಪ್ರಪಂಚಗಳಲ್ಲಿ ಬಾಳುತ್ತಿರುವಷ್ಟು ಚೆನ್ನಾಗಿ ಕಾರ್ಯಪ್ರಪಂಚ ಸಾಧನಪ್ರಪಂಚಗಳಲ್ಲಿ ಬಾಳುತ್ತಿಲ್ಲವೆಂದು ಹೇಳಬೇಕಾಗುತ್ತದೆ. ನಮ್ಮ ಜನದ ದೃಷ್ಟಿ ಆಕಾಶದ ಮೇಲಿರುವಷ್ಟುಮಟ್ಟಿಗೆ ಭೂಮಿಯ ಮೇಲೆ ಇರುವಂತೆ ಕಾಣುವುದಿಲ್ಲ. ಚೆನ್ನಾಗಿ ಬಾಳಬೇಕೆನ್ನುವ ರೈತನು ಆಕಾಶದ ಕಡೆ ಮುಖ ತಿರುಗಿಸಿ ಕೈಮುಗಿದು ಹಾಡುತ್ತ ನಿಂತರೆ ಸಾಲದು; ನೇಗಲಿಗೆ ಕೈಹಾಕಿ ಶಕ್ತಿಯಿಂದ ಅದನ್ನು ನೆಲದಲ್ಲಿ ನಡಸಬೇಕು. ಇಂಥಾ ನೆಲದ ಮೇಲಿನ ಕೈಕೆಲಸವೇ ವಿಜ್ಞಾನ. ಕವಿಯು "ಸಾಯಂಕಾಲೇ ವನಾಂತೇ ಕುಸುಮಿತಸಮಯೇ ಸೈಕತೇ ಚಂದ್ರಿಕಾಯಾಂ" ಎಂಬ ಒಂದು ಸುಂದರಚಿತ್ರವನ್ನು ಮನಸ್ಸಿಗೆ ಕಲ್ಪನೆಮಾಡಿಕೊಡಬಹುದು. ಆದರೆ ಅದರಿಂದ ಆನಂದಿಸಿದ ಬಳಿಕ, ತಮ್ಮ ಊರಿನಲ್ಲಿರುವ ಕೊಳವನ್ನು ಶುಚಿಪಡಿಸಿ, ಅದರ ಬಳಿ ನಾಲ್ಕು ಹೂವಿನ ಗಿಡ ಗಳನ್ನು ಹಾಕಿ, ಅವುಗಳ ನಡುವೆ ಒಂದೆರಡು ಪೀಠಗಳನ್ನು ನಿರ್ಮಿಸಿಕೊಳ್ಳಲು

ಬೇಕಾದ ಕಾರ್ಯಯೋಗ್ಯತೆಯಿಲ್ಲದ ಜನರ ಬಾಳು ತೀರಾ ಬಡತನದ ಬಾಳೆಂದು ಹೇಳಬೇಕು. ನಮಗೆ ಬೇಕಾದದ್ದು ಭಾವೋತ್ಕರ್ಷವೊಂದು ಮಾತ್ರವೇ ಅಲ್ಲ; ಆ ಭಾವವನ್ನು ಮೂರ್ತಿವತ್ತಾಗಿ ಮಾಡುವ ಕಾರ್ಯ ಸಾಮರ್ಥ್ಯವೂ ನಮಗೆ ಬೇಕು. ಕಾರ್ಯಯೋಗ್ಯತೆಯು ಜನದಲ್ಲಿ ಬೆಳೆಯ ಬೇಕಾದರೆ ಅವರ ಊಹಾಶಕ್ತಿ ಭಾವನಾಶಕ್ತಿಗಳನ್ನು ಕೆಣಕಿ ಎಬ್ಬಿಸಿದರೆ ಸಾಲದು. ಬುದ್ಧಿಗೆ ವಿಷಯವನ್ನು ವಿಶದಪಡಿಸಿ, ವಿವೇಚನಶಕ್ತಿಯನ್ನು ತೀವ್ರಗೊಳಿಸಿ, ಮನೋನಿಶ್ಚಯವನ್ನು ದೃಢಪಡಿಸಬೇಕು. ಇದೂ ಸಾಹಿತ್ಯಕ್ಕೆ ಸೇರಿದ ಕೆಲಸವೇ. ಈ ಬುದ್ಧಿಶಿಕ್ಷಣದ ಕೆಲಸವು ವಿಜ್ಞಾನಸಾಹಿತ್ಯದಿಂದ ಆಗಬೇಕಾದದ್ದು. ವಿಜ್ಞಾನಸಾಹಿತ್ಯದ ಅಭಿವೃದ್ಧಿಗೆ ನಮ್ಮಲ್ಲಿ ಇನ್ನೂ ಹೆಚ್ಚಾದ ಅವಕಾಶವೂ ಆವಶ್ಯಕತೆಯೂ ಉಂಟೆಂಬುದನ್ನು ಈಗಿನ ಗ್ರಂಥ ಗಣನೆಯು ತೋರಿಸುತ್ತದೆ.

ಈ ಗ್ರಂಥಪ್ರದರ್ಶನದಲ್ಲಿ ಕಳೆದ ೩೩ ವರ್ಷಗಳಲ್ಲಿ ಪ್ರಕಟವಾಗಿರುವ ಎಲ್ಲ ಗ್ರಂಥಗಳೂ ಇವೆಯೆಂದು ಹೇಳಲಾಗುವುದಿಲ್ಲ. ಎಷ್ಟೋ ಒಳ್ಳೊಳ್ಳೆಯ ಗ್ರಂಥಗಳು ಇಲ್ಲಿಗೆ ಬಾರದೆ ನಿಂತುಹೋಗಿವೆ. ಕನ್ನಡದಲ್ಲಿ ಗ್ರಂಥಲೇಖಕರ ಹೆಸರನ್ನಾಗಲಿ, ಪ್ರಕಟನಕರ್ತರ ಹೆಸರನ್ನಾಗಲಿ ತಿಳಿಸುವ ಪ್ರಮಾಣಭೂತ ವಾದ ಪಟ್ಟಿಯೊಂದು ಸಿದ್ಧವಾಗಿಲ್ಲ. ಆದಕಾರಣ ಪ್ರತಿಯೊಬ್ಬ ಗ್ರಂಥಕರ್ತ ರನ್ನೂ ಪ್ರತಿಯೊಬ್ಬ ಪ್ರಕಟನಕರ್ತರನ್ನೂ ಬೇರೆಬೇರೆಯಾಗಿ ಬೇಡಿಕೊಳ್ಳು ವುದು ನಮಗೆ ಸಾಧ್ಯವಾಗದೆಹೋಯಿತು. ಈ ಪ್ರದರ್ಶನದ ಉದ್ದೇಶ ವಿವರ ಗಳನ್ನು ವರ್ತಮಾನಪತ್ರಿಕೆಗಳಲ್ಲಿ ಹಲವು ಬಾರಿ ಪ್ರಕಟಗೊಳಿಸಿದ್ದಲ್ಲದೆ ನಮಗೆ ತಿಳಿದುಬಂದ ಮಟ್ಟಿಗೆ ಪ್ರತಿ ಲೇಖಕರಿಗೂ ಪ್ರಕಟನಕರ್ತರಿಗೂ ಬೇರೆ ಬೇರೆ ಯಾಗಿ ಬರೆದು, ಗ್ರಂಥಗಳನ್ನು ಕಳುಹಿಸಬೇಕೆಂದು ಕೇಳಿಕೊಂಡದ್ದಾಯಿತು. ಅಂಥವರಲ್ಲಿ ನಮ್ಮ ಕೋರಿಕೆಗೆ ಉತ್ತರ ಕೊಡದೆ ಇರುವವರೂ ಕೆಲವರುಂಟು. ಹೀಗಿದ್ದರೂ ಒಟ್ಟಿನ ಮೇಲೆ ಈ ಪ್ರದರ್ಶನವು ಕನ್ನಡಗ್ರಂಥ ಪ್ರಕಟನ ಕಾರ್ಯದ ಸಮಗ್ರಪ್ರತಿಬಿಂಬವಾಗಿದೆಯೆಂದು ಹೇಳಬಹುದಾಗಿ ನನಗೆ ತೋರುತ್ತದೆ. ಇಲ್ಲಿರುವ ಗ್ರಂಥಗಳ ಒಟ್ಟುಸಂಖ್ಯೆ ಸುಮಾರು ೨,೫೦೦. ಇವುಗಳ ಜೊತೆಗೆ ಇಲ್ಲಿಗೆ ಬರತಕ್ಕದ್ದಾಗಿದ್ದು ಬಾರದೆ ನಿಂತುಹೋಗಿರುವ ಗ್ರಂಥಗಳನ್ನು ಸೇರಿಸಿಕೊಂಡು ನೋಡಿದರೆ, ಕಳೆದ ೩೩ ವರ್ಷಗಳಲ್ಲಿ ಪ್ರಕಟ ವಾಗಿರುವ ಗ್ರಂಥಗಳ ಸಂಖ್ಯೆ ಸುಮಾರು ಮೂರು ಸಾವಿರಕ್ಕೆ ಕಡಮೆಯಿಲ್ಲ ವೆಂದು ಹೇಳಬಹುದು. ಸರಾಸರಿ ವರ್ಷಕ್ಕೆ ೧೦೦ ಗ್ರಂಥಗಳು,—ವಾರ ಒಂದಕ್ಕೆ ಎರಡು ಪುಸ್ತಕ,—ಪ್ರಕಟವಾಗಿರುವಂತೆ ತೋರುತ್ತದೆ. ಇದು

ಅಲಕ್ಷ್ಯಕ್ಕೆ ತಕ್ಕ ಸಂಖ್ಯೆಯಲ್ಲ. ನಮ್ಮ ಸಾಹಿತ್ಯದಲ್ಲಿ ಒಂದು ಜೀವಕಳೆ ಇದೆ, ಅದು ಮುಂದಕ್ಕೂ ವೃದ್ಧಿಹೊಂದುವಷ್ಟರದು--ಎಂಬ ಭರವಸೆ ಇದರಿಂದ ಚೆನ್ನಾಗಿ ತೋರಿಬರುತ್ತದೆ.

ಗ್ರಂಥಪ್ರದರ್ಶನದ ಜೊತೆಗೆ ವೃತ್ತಪತ್ರಿಕಾ ಪ್ರದರ್ಶನವನ್ನು ಏರ್ಪಡಿಸ ಬೇಕೆಂಬ ಸೂಚನೆಯನ್ನು ಕೆಲವರು ಕೊಟ್ಟಿದ್ದಾರೆ. ಈ ಸೂಚನೆಯು ಪರಿಷತ್ತಿಗೆ ಅಭಿಮತವಾದದ್ದೇ . . . . ಇನ್ನೊಂದು ಸಲ ಗ್ರಂಥಪ್ರದರ್ಶನ ವನ್ನು ನಡಸುವ ಯೋಗವು ಪರಿಷತ್ತಿಗೆ ಒದಗಿಬಂದಾಗ, ವೃತ್ತಪತ್ರಿಕಾ ಪ್ರದರ್ಶನವನ್ನು ಮಾತ್ರವೇ ಅಲ್ಲದೆ, ಕನ್ನಡಸಾಹಿತ್ಯಕ್ಕೆ ಸಂಬಂಧಪಟ್ಟ ತಾಳೆಯೋಲೆಯ ಪುಸ್ತಕಗಳು, ಶಾಸನಗಳು, ಕಡತಗಳು, ಅಪರೂಪ ಗ್ರಂಥಗಳು, ಪೂರ್ವಿಕರ ಕೈಬರಹಗಳು, ಪೂರ್ವಕಾಲದ ಕಂಠಪತ್ರ ಮಶೀಪಾತ್ರೆ ಲೇಖಣಿಗಳು—ಈ ತೆರದ ಎಲ್ಲ ಸಾಹಿತ್ಯ ಸಾಮಗ್ರಿಗಳ ಪ್ರದರ್ಶನವನ್ನೂ ಕೈಕೊಳ್ಳುವುದು ಸಾಧ್ಯವಾಗಬಹುದು.

ಈ ಗ್ರಂಥಪ್ರದರ್ಶನದಲ್ಲಿ ಸುಮಾರು ೧೦೦೦ ಮಂದಿ ಗ್ರಂಥಕರ್ತರೂ ಪ್ರಕಟನಕರ್ತರೂ ಸಹಕರಿಸಿದ್ದಾರೆ . . . . ಈ ಪ್ರದರ್ಶನದ ಮೂಲಕ ಗ್ರಂಥಕರ್ತ ಪ್ರಕಟನಕರ್ತರಿಗೂ ಮಹಾಜನರಿಗೂ ಪರಸ್ಪರ ಪರಿಚಯ ಸಹಾನುಭೂತಿಗಳು ಬೆಳೆಯುವಂತಾಗಿ, ನಮ್ಮ ದೇಶದಲ್ಲಿ ಗ್ರಂಥವ್ಯಾಸಂಗದ ಅಭ್ಯಾಸವು ಹರಡಲು ಇದು ಸಾಧಕವಾಗಲೆಂದು ಹಾರೈಸುತ್ತೇನೆ.

## ಮುಸಲ್ಮಾನ್ ಕ್ರೈಸ್ತ ಲೇಖಕರು

ಈ ಸಂದರ್ಭದಲ್ಲಿ ಒಂದೆರಡು ವಿಶೇಷ ಸಂಗತಿಗಳನ್ನು ಸೂಚಿಸಬಹುದು. ಕನ್ನಡ ಗ್ರಂಥಲೇಖಕರು ಹಿಂದೂ ಜನರು ಮಾತ್ರವೇ ಅಲ್ಲ. ನಮ್ಮ ಲೇಖಕ ರಲ್ಲಿ ಮುಸಲ್ಮಾನರು ಕೆಲಮಂದಿಯಾದರೂ ಇದ್ದಾರೆ. ಅವರ ಗ್ರಂಥಗಳನ್ನು ಈ ಪ್ರದರ್ಶನದಲ್ಲಿ ಕಾಣಬಹುದು. ಇವರ ಸಂಖ್ಯೆ ಬೆಳೆಯಬೇಕೆಂಬುದು ನಮ್ಮ ಆಶೆ. ನಮ್ಮ ಲೇಖಕರಲ್ಲಿ ಕ್ರೈಸ್ತರೂ ಇದ್ದಾರೆ ಅವರ ಸಂಖ್ಯೆ ಮುಸಲ್ಮಾನರ ಸಂಖ್ಯೆಗಿಂತ ಸ್ವಲ್ಪ ಹೆಚ್ಚಾಗಿದೆ. ಅವರ ಗ್ರಂಥಗಳನ್ನೂ ನಮ್ಮ ಪ್ರದರ್ಶನದಲ್ಲಿ ಕಾಣಬಹುದು. ವಾಸ್ತವವಾಗಿ ಕನ್ನಡದ ಪುನರು ಜ್ಜೀವನಕ್ಕೆ ಕ್ರೈಸ್ತಜನರು ಮಾಡಿರತಕ್ಕ ಸಹಾಯವು ಪ್ರಶಂಸಾರ್ಹವಾದ ದ್ದಾಗಿದೆ. ಪ್ರಾಚೀನ ಕನ್ನಡ ಗ್ರಂಥಗಳನ್ನು ಪ್ರಕಟಗೊಳಿಸುವುದರಲ್ಲಿಯೂ ಪುಸ್ತಕದ ಮುದ್ರಣಸೌಷ್ಠವದ ವಿಷಯದಲ್ಲಿಯೂ ಮೊದಮೊದಲು ಮಾರ್ಗ ದರ್ಶಕರಾದವರು ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್ಸಿನವರು ಮತ್ತು

ಮೈಸೂರಿನ ವೆಸ್ಲಿಯನ್ ಮಿಷನ್ ಪ್ರೆಸ್ಸಿನವರು. ವಿದ್ಯಾಸೌಕರ್ಯಗಳ ಶಾಖೆಯಲ್ಲಿ ಬಾಸೆಲ್ ಮಿಷನ್ ಪ್ರೆಸ್ಸಿನವರು ಒದಗಿಸಿರುವ ಸಾಧನಗಳು ಎಲ್ಲರಿಗೂ ಗಮನಾರ್ಹವಾಗಿವೆ. ನಮ್ಮ ಗ್ರಂಥಲೇಖಕರಲ್ಲಿ ಕೆಲಮಂದಿ ಮಹಿಳೆಯರೂ ಇದ್ದಾರೆ. ಅವರ ಗ್ರಂಥಗಳಿಗೆ ಪ್ರೇಕ್ಷಕರ ವಿಶೇಷ ಗಮನವು ದೊರೆಯತಕ್ಕದ್ದು ನ್ಯಾಯವಾಗಿದೆ.

ಈ ಪ್ರದರ್ಶನದಲ್ಲಿರುವ ೨,೫೦೦ ಕ್ಕೆ ಮೇಲ್ಪಟ್ಟ ಗ್ರಂಥಗಳಿಂದ ಪ್ರಯೋಜನ ಪಡೆಯಬಹುದಾದವರು ಹೆಂಗಸರೂ ಮಕ್ಕಳೂ ಹಳ್ಳಿಯ ಜನರೂ ಮಾತ್ರವೇ ಅಲ್ಲ. ಇಂಗ್ಲಿಷ್ ವಿದ್ವಾಂಸರೂ ನವನಾಗರಿಕರೂ ಹುದ್ದೇದಾರರೂ ಸಹ ಓದಿ ಸಂತೋಷಿಸಬಹುದಾದ ಗ್ರಂಥಗಳು ಕನ್ನಡದಲ್ಲಿ ಕೆಲವಾದರೂ ಇವೆಯೆಂದು ಹೇಳುವ ಧೈರ್ಯವು ನನಗಿದೆ.

ಕನ್ನಡದಲ್ಲಾಗುವ ಗ್ರಂಥಪ್ರಕಟನೆಯ ಲೆಕ್ಕಪಕ್ಕಗಳನ್ನು ತಪ್ಪಿಲ್ಲದೆ ಕೂಡಿಸಿಡುವ ಏರ್ಪಾಟಿಗೆ ಕನ್ನಡನಾಡಿನ ಸರಕಾರಗಳು ಇನ್ನೂ ಹೆಚ್ಚಾಗಿ ಗಮನ ಕೊಡಬೇಕಾಗಿದೆ. ಈಗ ಎಷ್ಟೋ ಸಣ್ಣ ಪುಟ್ಟ ಗ್ರಂಥಗಳು ಸರಕಾರದ ರೆಜಿಸ್ಟ್ರೇಷನ್ ಅಧಿಕಾರಿಗಳ ಗಮನಕ್ಕೆ ಬಾರದೆಯೇ ಹೋಗುತ್ತಿವೆ. ಪ್ರಕಟವಾಗುವ ಪ್ರತಿಯೊಂದು ಗ್ರಂಥದ ಒಂದೊಂದು ಪ್ರತಿ—ಅದು ದೊಡ್ಡದಾಗಲಿ, ಸಣ್ಣದಾಗಲಿ—ರೆಜಿಸ್ಟ್ರಾರರ ಕೈಸೇರಿ, ಅವರ ಗಮನವನ್ನು ಪಡೆದು ಲೆಕ್ಕಕ್ಕೆ ಬರುವಂತೆಯೂ, ಆಮೇಲೆ ಆ ಪ್ರತಿ ಈ ಪರಿಷತ್ತಿನ ಸರಸ್ವತೀ ಭಂಡಾರವನ್ನು ಸೇರುವಂತೆಯೂ ಏರ್ಪಾಟು ಮಾಡಬೇಕೆಂದು ಕನ್ನಡ ನಾಡಿನ ಸರಕಾರಗಳನ್ನು ಬೇಡುತ್ತೇನೆ. ನಮ್ಮ ಸರಸ್ವತೀಭಂಡಾರಕ್ಕೆ ಇಂಥಾ ಉಪಕಾರವು ಅವಶ್ಯವಾಗಿ ಬೇಕಾಗಿದೆ; ಮತ್ತು ಸಾಹಿತ್ಯಚರಿತ್ರೆಗೆ ಅಂಥಾ ಲೆಕ್ಕಪತ್ರಗಳು ಮೂಲಾಧಾರವಾಗಿರುತ್ತವೆ.

ಸಾಹಿತ್ಯಾಭಿವೃದ್ಧಿಯಲ್ಲಿ ಗ್ರಂಥಗಳ ಸಂಖ್ಯೆಯೂ ಅವುಗಳ ಬಹಿರಂಗವೂ ಅವುಗಳ ಅಂತರಂಗವೂ ಹೇಗೆ ಹೇಗೆ ಸಾಗುತ್ತಿವೆಯೆಂಬುದನ್ನು ವರ್ಷೇ ವರ್ಷೇ ಸಮಾಲೋಚಿಸಿ, ವಿಮರ್ಶಿಸಿ, ಮುಂದಿನ ಉತ್ತಮತೆಯ ಬಗ್ಗೆ ತಕ್ಕ ಸೂಚನೆಗಳನ್ನೊದಗಿಸುವುದು ಒಂದು ಅವಶ್ಯವಾಗಿ ನಡೆಯಬೇಕಾದ ಕರ್ತವ್ಯ. ಇಂಗ್ಲಿಷ್ ಅಸೋಸಿಯೇಷನ್ ಮೊದಲಾದ ವಿದ್ವತ್ಸಂಸ್ಥೆಗಳಲ್ಲಿ ಇಂಥಾ ಕಾರ್ಯವು ದಕ್ಷರಾದ ಪಂಡಿತರಿಂದ ನಡೆಯುತ್ತಿದೆ. ಕನ್ನಡದಲ್ಲಿಯೂ ಅದಾಗಬೇಕು. ಅದಕ್ಕೆ ಸಾಧನಸಾಮಗ್ರಿಯನ್ನು ನಮ್ಮ ಗ್ರಂಥಕರ್ತರುಗಳೂ ಪ್ರಕಟನಕರ್ತರುಗಳೂ ಸರಕಾರಗಳೂ ಸಹ ಒದಗಿಸಿಕೊಡಬೇಕು.

ಉಪನ್ಯಾಸಮಾಲೆ ಗ್ರಂಥಪ್ರದರ್ಶನಗಳೆರಡರಿಂದಲೂ ಒಂದು ದೊಡ್ಡ ತತ್ತ್ವವು ಪ್ರಕಾಶಪಡುತ್ತದೆ. ಅದು ಕನ್ನಡವು ಉತ್ತಮವ್ಯವಹಾರಯೋಗ್ಯವಾದ ಭಾಷೆ,—ಸಾಂಪ್ರತಲೋಕಯೋಗ್ಯವಾದ ಭಾಷೆ,—ಎಂಬುದು. ಕನ್ನಡವು ಮನೆಮಾತಿಗೆ ಮಾತ್ರ ತಕ್ಕ ಮಾತು,—ಪಾಮರಗೋಷ್ಠಿಗೆ ಮಾತ್ರ ತಕ್ಕ ಮಾತು—ಎಂಬ ನೈಚ್ಯಾರೋಪವು ಅದಕ್ಕೆ ಸಲ್ಲದೆಂಬುದು ಈಗ ಸಿದ್ಧಾಂತವಾಗಿದೆ. ನೈಚ್ಯಾಪವಾದವು ಮನುಷ್ಯನನ್ನು ಕುಗ್ಗಿಸುವಂತೆಯೇ ಭಾಷೆಯನ್ನೂ ಕುಗ್ಗಿಸಬಲ್ಲದು. ಭಾಷೆಗಾದ ನೈಚ್ಯಾರೋಪಣೆಯು ಮೊದಲು ಭಾಷೆಯನ್ನು ಕುಗ್ಗಿಸಿ ಆಮೇಲೆ ಅದನ್ನಾಡುವ ಜನರನ್ನು ಕುಗ್ಗಿಸುತ್ತದೆ. ಈ ತತ್ತ್ವವೇ ನಾವು ಅನ್ಯಭಾಷೆಗೆ ದಾಸರಾಗಕೂಡದೆಂಬ ವಾದಕ್ಕೆ ಇರುವ ಮುಖ್ಯ ಕಾರಣ. ನಮ್ಮ ಭಾಷೆ ಅಸಮರ್ಥವಾದದ್ದು, ನಮ್ಮ ಲೇಖನಯೋಗ್ಯತೆ ಅಲ್ಪವಾದದ್ದು, ನಮ್ಮ ಭಾಷೆಗೆ ಯಾವ ದೊಡ್ಡ ವಿಚಾರವೂ ಸಾಧ್ಯವಲ್ಲ—ಎಂದು ಎದುವರೆಗೆ ನಾವು ತಿಳಿದುಕೊಂಡಿರುತ್ತೇವೋ ಅದುವರೆಗೆ ನಮ್ಮಿಂದ ಲೋಕದಲ್ಲಿ ಯಾವ ದೊಡ್ಡ ಕೆಲಸವೂ ಆಗಲಾರದು. ಈ ಅಲ್ಪತಾಭ್ರಾಂತಿಯ ಕಟ್ಟುಗಳಿಂದ ನಾವು ಬಿಡುಗಡೆ ಹೊಂದಬೇಕು. ಆಗ ನಮ್ಮ ಬುದ್ಧಿಗೆ ಸ್ವಾತಂತ್ರ್ಯವುಂಟಾಗುತ್ತದೆ. ಬುದ್ಧಿಸ್ವಾತಂತ್ರ್ಯವು ಇತರ ಸ್ವಾತಂತ್ರ್ಯಕ್ಕೆ ಪೂರ್ವಭಾವಿಯಾಗಿರಬೇಕಾದ ಸಿದ್ಧತೆ. ಅದಕ್ಕೆ ತಕ್ಕ ದಾರಿಯನ್ನು ನಮ್ಮ ಈ ವಾದದ ಪ್ರಯತ್ನಗಳು ಸ್ವಲ್ಪಮಾತ್ರವಾದರೂ ಬಿಡಿಸಿಕೊಟ್ಟಾವೆಂದು ನಾನು ನಂಬಿದ್ದೇನೆ.

## ವಿದ್ಯಾಭ್ಯಾಸದಲ್ಲಿ ಕನ್ನಡ

ಈ ಸಂದರ್ಭದಲ್ಲಿ ನಾನು ಇನ್ನೊಂದು ವಿಚಾರವನ್ನು ವಿಜ್ಞಾಪನೆ ಮಾಡಬಹುದೆಂದು ತೋರುತ್ತದೆ. ನಮ್ಮ ದೇಶದಲ್ಲಿ ಈಗ ರೂಢಿಯಲ್ಲಿರುವ ವಿದ್ಯಾಭ್ಯಾಸಕ್ರಮದಲ್ಲಿ ಇಂಗ್ಲಿಷ್ ಭಾಷೆಗಿರುವ ಪ್ರಾಧಾನ್ಯದ ಕಾರಣದಿಂದ ವಿದ್ಯಾರ್ಥಿಗಳಿಗೆ ಆಯುಸ್ಸಿನ ವ್ಯರ್ಥವ್ಯಯವೂ ಶಕ್ತಿಯ ವ್ಯರ್ಥವ್ಯಯವೂ ಅತಿಯಾಗಿ ಆಗುತ್ತಿವೆ. ನಮ್ಮ ವಿದ್ಯಾರ್ಥಿಗಳಿಗೆ ಈಗ ಇರುವ ಕಷ್ಟವು ಎರಡು ಬಗೆಯದು—ಒಂದು ವಿಷಯನವೀನತೆಯಿಂದ ಆಗಿರುವುದು; ಇನ್ನೊಂದು ಭಾಷಾನವೀನತೆಯಿಂದ ಆಗಿರುವುದು. ಅವರು ಹೊಸ ವಿಷಯವನ್ನು ತಿಳಿದುಕೊಳ್ಳುವುದಕ್ಕಾಗಿ ಹೊಸ ಭಾಷೆಯನ್ನು ಕಲಿತುಕೊಳ್ಳಬೇಕಾಗಿದೆ. ಆದರೆ ಈ ಹೊಸ "ಭಾಷೆ"ಯನ್ನು ಕಲಿತುಕೊಳ್ಳುವುದಕ್ಕೆ ಬೇಕಾಗಿರುವ ಕಾಲವ್ಯಯ ಶಕ್ತಿವ್ಯಯಗಳಲ್ಲಿ, "ವಿಷಯ"ವನ್ನು ತಿಳಿದುಕೊಳ್ಳುವು

ದಕ್ಕೆ ಬೇಕಾದ ಕಾಲವೂ ಶಕ್ತಿಯೂ ಅವರಿಗೆ ಉಳಿಯದಂತಾಗಿದೆ. ಜ್ಞಾನಕ್ಕೆ ಕೊಡಬೇಕಾದ ಗಮನವನ್ನು ಈಗ ಅವರು ಜ್ಞಾನದ ಹೊದಿಕೆಗೆ ಕೊಡಬೇಕಾಗಿ ಬಂದಿದೆ; ಕೊಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ. ಇದುವರೆಗೂ ನಮ್ಮ ದೇಶದಲ್ಲಿ ಈ ಕಷ್ಟವು ಅನಿವಾರ್ಯವಾಗಿತ್ತು. ಈಗ ಲಾದರೋ ಇಂಗ್ಲಿಷ್ ಭಾಷೆಯೊಳಗಿನ ತಿರುಳು ನಮ್ಮ ಭಾಷೆಯಲ್ಲಿಯೇ ದೊರೆಯುವಂತಾಗಿದೆ. ಐರೋಪ್ಯ ಭಾಷೆಗಳಲ್ಲಿಯ ಸಾರಭೂತವಾದ ವಿಷಯ ಗಳನ್ನೂ ಶ್ರೇಷ್ಠಗ್ರಂಥಗಳನ್ನೂ ಕನ್ನಡದಲ್ಲಿ ರೂಪಾಂತರಗೊಳಿಸಿಕೊಡಲು ವಿದ್ವಾಂಸರು ಈಗ ಸಿದ್ಧರಾಗುತ್ತಲಿದ್ದಾರೆ. ಆಧುನಿಕ ವಿಜ್ಞಾನಶಾಸ್ತ್ರ ಗಳನ್ನೂ ಸಮಾಜಶಾಸ್ತ್ರಗಳನ್ನೂ ಕನ್ನಡದಲ್ಲಿ ಪ್ರತಿಪಾದಿಸಿ ಹೇಳುವುದು ಈಗ ಸಾಧ್ಯವೆಂದು ಸಾಕ್ಷಾತ್ತಾಗಿ ತೋರುತ್ತಿದೆ. ನಮ್ಮ ವಿದ್ಯಾರ್ಥಿಗಳ ಮೇಲಿರುವ ಇಂಗ್ಲಿಷಿನ ಹೊರೆಯನ್ನು ಇಳಿಸಲು ಈಗ ಸಕಾಲವಾಗಿದೆ. ಇಂಗ್ಲಿಷೆಲ್ಲವನ್ನೂ ಒಂದೇ ಬಾರಿ ಸ್ಥಾನಭ್ರಷ್ಟಮಾಡಿ ತೊಲಗಿಸಬೇಕೆಂದು ನಾನು ಸೂಚಿಸತಕ್ಕವನಲ್ಲ. ಇಂಗ್ಲಿಷಿನಿಂದ ನಮಗೆ ಇನ್ನೂ ಆಗಬೇಕಾ ಗಿರುವ ಉಪಕಾರಗಳು ಅಪರಿಮಿತವಾಗಿವೆ. ಇಂಗ್ಲಿಷನ್ನು ನಮ್ಮ ವಿದ್ಯಾರ್ಥಿಗಳು ಓದುವುದು—ಚೆನ್ನಾಗಿ ಓದುವುದೂ, ಹೆಚ್ಚು ಹೆಚ್ಚು ಮಂದಿ ಓದುವುದೂ—ನಮ್ಮ ದೇಶದ ಏಳಿಗೆಗೂ ಯಶಸ್ಸಿಗೂ ಅವಶ್ಯವಾಗಿದೆ. ಹೀಗಿ ದ್ದರೂ ನಮ್ಮ ವಿದ್ಯಾಜೀವನದಲ್ಲಿ ಅಗ್ರಸ್ಥಾನವನ್ನು ಪಡೆಯಬೇಕಾದದ್ದು ಕನ್ನಡವೇ ಹೊರತು ಮತ್ತೊಂದು ಭಾಷೆಯಲ್ಲ. ಎಷ್ಟೆಷ್ಟು ವಿಷಯಗಳನ್ನು ನಾವು ಕನ್ನಡದಲ್ಲಿ ಬೋಧಿಸುತ್ತಾ ಹೋಗುವೆವೋ ಅಷ್ಟಷ್ಟು ವಿಧಗಳಲ್ಲಿ ನಮ್ಮ ಭಾಷೆಯು ಬೆಳೆಯುವುದು; ಮತ್ತು ನಮ್ಮ ಭಾಷೆಯ ಉಪಯೋಗವು ಎಷ್ಟೆಷ್ಟು ಸ್ವತಂತ್ರವಾಗಿ ನಮ್ಮ ಜನದಲ್ಲಿ ಹರಡುವುದೋ ಜ್ಞಾನಪ್ರಕಾಶವು ಅವರಲ್ಲಿ ಅಷ್ಟಷ್ಟು ವಿಸ್ತಾರಪಡುವುದು. ನಮ್ಮ ಜನರು ಆಧುನಿಕ ಪ್ರಪಂಚದ ವಿಷಯಗಳನ್ನು ತಿಳಿದುಕೊಳ್ಳುವುದು ಸುಲಭವಾಗಿ, ಅವರು ಅಭ್ಯುದಯ ಮಾರ್ಗದಲ್ಲಿ ಬೇಗಬೇಗ ಹೆಜ್ಜೆಯಿಡುವಂತಾಗಬೇಕಾದರೆ ಅವರಿಗೆ ವಿಷಯ ಬೋಧನೆಮಾಡುವ ಭಾಷೆಯು ಅವರ ಸ್ವಂತ ಭಾಷೆಯೇ ಆಗಿರಬೇಕು. ಇದು ಸ್ವಯಂವ್ಯಕ್ತವಾಗಿರುವ ಸಿದ್ಧಾಂತ. ಹೀಗಿದ್ದರೂ ಇದನ್ನು ಅನುಸರಿಸಿ ನಮ್ಮ ವಿದ್ಯಾಭ್ಯಾಸಕ್ರಮವನ್ನು ಒದಲಾಯಿಸತಕ್ಕ ಯೋಚನೆ ಮಾತ್ರ ಏಕೋ ಕಷ್ಟಕರವಾಗಿ ಕಾಣುತ್ತಿದೆ. ಈ ಕಷ್ಟಕ್ಕೆ ಕನ್ನಡವು ಅಶಕ್ತಭಾಷೆ ಯೆಂಬ ಸಾಮಾನ್ಯ ಭ್ರಾಂತಿಯೇ ಮುಖ್ಯ ಕಾರಣವಾಗಿರಬಹುದೆಂದು ನಾನು ತಿಳಿದುಕೊಂಡಿದ್ದೇನೆ. ಈ ಭ್ರಾಂತಿಯನ್ನು ತೊರೆದು — ಕನ್ನಡದಲ್ಲಿಯೂ

ಜೀವಶಕ್ತಿ ಅಡಗಿದೆ, ಈ ಗೂಢವಾಗಿರುವ ಶಕ್ತಿಯನ್ನು ಪ್ರಕಾಶಪಡಿಸತಕ್ಕ ಜನರು ಸಿದ್ಧರಾಗಿದ್ದಾರೆ—ಎಂದು ನಂಬಲು ಈಗ ಕಾರಣಗಳು ಸಾಕ್ಷಾತ್ತಾಗಿವೆ. ನಮ್ಮ ಸರಕಾರದವರೂ ವಿಶ್ವವಿದ್ಯಾನಿಲಯದವರೂ ವಿದ್ಯಾಪ್ರಚಾರದ ಇಲಾಖೆಯವರೂ ಮತ್ತು ಮಹಾಜನರೂ ಸಹ ಕನ್ನಡದ ಈಗಿನ ನವಶಕ್ತಿಯನ್ನು ಕಟಾಕ್ಷಿಸಿ ನೋಡಿ, ಅದರಿಂದ ನಮ್ಮ ಜನರಿಗೆ ಉಂಟಾಗಬಹುದಾದ ಶುಭಪರಂಪರೆಗಳನ್ನು ಮನಸಾರ ಅಂಗೀಕರಿಸಿ, ನಮ್ಮ ವಿದ್ಯಾಭ್ಯಾಸ ಕ್ರಮದಲ್ಲೂ ಸಾರ್ವಜನಿಕ ವ್ಯವಹಾರಗಳಲ್ಲೂ ಇಂಗ್ಲಿಷಿನ ದಬ್ಬಾಳಿಕೆಯನ್ನು ಕಡಮೆಯಾಗಿಸಿ, ಕನ್ನಡಕ್ಕೆ ಸಹಜವಾಗಿ ಸಲ್ಲಬೇಕಾದ ಗಣನೆ ಗೌರವಗಳು ಅದಕ್ಕೆ ದೊರೆಯುವಂತೆ ಮಾಡಲು ಇದು ತಕ್ಕ ಕಾಲವೆಂದು ನಾನು ನಂಬಿಕೊಂಡಿದ್ದೇನೆ.

ಈ ವಿಚಾರದಲ್ಲಿ ಹೈದರಾಬಾದು ಸಂಸ್ಥಾನವು ನಮಗೆ ಮಾರ್ಗದರ್ಶಕವಾಗಿದೆ. ಅಲ್ಲಿಯ ಉಸ್ಮಾನಿಯಾ ವಿಶ್ವವಿದ್ಯಾಪೀಠದ ವಾರ್ಷಿಕಾಧಿವೇಶನದಲ್ಲಿ ನವಾಬ್ ಮಹದಿಯಾರ್ ಜಂಗ್ ಬಹದ್ದೂರ್ ಅವರು ಈ ರೀತಿಯಾಗಿ ಹೇಳಿದರು:—

"At last we had confidence in our own language—one of the first requisites of becoming a unified people. By contrast, the weakness became apparent of the old system which relegated our language to a position of undeserved inferiority and accepted as axiomatic what was really a slur on us Indians, that no modern knowledge could be acquired or imparted by us except through the medium of a foreign tongue. The conviction thus grew on one that, apart from the difficulty of acquiring a foreign language which was added to the difficulty of the subject to be learnt, the 'inferiority complex' thus acquired by our men was largely responsible for the absence of original thought among us, as well as for the tendency to learn text-books by rote, and for the paucity of our contributions to the sum total of human knowledge.

The Osmania University today is not only capable of teaching all the subjects including modern sciences with ease, but has also earned recognition from several Indian

and British Universities, showing that the standards attained do not fall short of those of other similar institutions. Not only this, but the impetus given to original thought has manifested itself in various ways. Examiners from other Universities have, in their reports, borne testimony to the originality of our students as compared with the *alumni* of other Indian Universities; while in some other cases graduates of the Osmania University have taken the highest honours in English and European Universities, notably in Science, Mathematics and Philosophy, in which subjects they have also done some original work. A spirit of authorship has been awakened in these men and much intellectual activity has been shown by them."

ಇವು ನಮ್ಮ ತೀವ್ರ ಗಮನಕ್ಕೆ ಅರ್ಹವಾದ ವಾಕ್ಯಗಳು.

# ೩. ನೂತನ ಸಾಹಿತ್ಯ ರಚನೆ*

(ಉಪಸಂಹಾರ ಭಾಷಣ : ತಾ || ೧೨-೫-೧೯೩೪)

ಈಗ ಒಂದು ವಾರದಿಂದ ಇಲ್ಲಿ ನಡೆದಿರತಕ್ಕ ವಿಶೇಷ ಸಾಹಿತ್ಯೋತ್ಸವದ ವಿವರಗಳನ್ನು ಈಗ ಸಂಗ್ರಹವಾಗಿ ಜ್ಞಾಪಕಕ್ಕೆ ತೆಗೆದುಕೊಂಡು ಪುನರ್ವೀಕ್ಷೆ ಮಾಡುವುದು ಯುಕ್ತವಾಗಿದೆ. ಈ ಆಧುನಿಕ ವಿಚಾರೋಪನ್ಯಾಸಗಳನ್ನು ಏರ್ಪಡಿಸುವುದರಲ್ಲಿ—ಆ ಸಂಬಂಧವಾದ ಪ್ರಕಟನಪತ್ರಿಕೆಗಳಲ್ಲಿ ತಿಳಿಸಿದಂತೆ ಎರಡು ತೆರದ ಮಹಾಜನರನ್ನು ಗುರಿಯಲ್ಲಿಟ್ಟುಕೊಂಡು, ಅವು ಅವರಿಬ್ಬರಿಗೂ ಉಪಯೋಗವಾಗಬೇಕೆಂದು ಉದ್ದೇಶಿಸಿತ್ತು. ಅವರಲ್ಲಿ ಮೊದಲನೆಯವರು ಉಪಾಧ್ಯಾಯರು. ಎರಡನೆಯವರು ದೇಶವಿಚಾರನಿಷ್ಠರಾದವರು—ಎಂದರೆ ನಮ್ಮ ರಾಜಕೀಯ ಸಾಮಾಜಿಕ ಕಾರ್ಯಗಳಲ್ಲಿ ಪ್ರವೃತ್ತರಾಗಿರುವವರು—ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕ ಸಭೆ ಮುಂತಾದ ಸಂಸ್ಥೆಗಳಲ್ಲಿ 'ಮೆಂಬರು' ಗಳಾಗಿರುವವರು ಮತ್ತು ಹಾಗೆ ಸದಸ್ಯರುಗಳಾಗಲು ಬಯಸು ವವರು. ಪಾಠಶಾಲೆಗಳಲ್ಲಿ ಹುಡುಗರಿಗೆ ವಿದ್ಯೆ ಕಲಿಸುವವರು ಮಾತ್ರವೇ ಅಲ್ಲದೆ ಸಾರ್ವಜನಿಕ ಸಭೆಗಳಲ್ಲಿ ಕುಳಿತು ದೇಶಹಿತವನ್ನು ಸಾಧಿಸಹೊರಡು ವವರೂ ಆಧುನಿಕ ಪ್ರಪಂಚದ ಗಹನವಿಚಾರಗಳನ್ನು ತಿಳಿದುಕೊಳ್ಳುವುದು ಅವಶ್ಯವೆಂದು ನಾವು ಭಾವಿಸಿಕೊಂಡಿದ್ದೆವು. ಆದರೆ ಆ ಮಹನೀಯರು ಹೇಗೆ ಭಾವಿಸಿರುವರೋ ಗೊತ್ತಿಲ್ಲ. ಇಲ್ಲಿ ಬಂದಿರುವವರಲ್ಲಿ ಅಂಥ ದೇಶಕಾರ್ಯ ಕರ್ತರು ಹೆಚ್ಚಾಗಿರುವಂತೆ ತೋರುವುದಿಲ್ಲ. ದೇಶದ ಸಾಹಿತ್ಯ, ದೇಶದ ಭವಿಷ್ಯಯೋಜನೆಗಳು, ಪ್ರಪಂಚಸ್ಥಿತಿಯಲ್ಲಿ ವಿಜ್ಞಾನವು ಮಾಡುತ್ತಿರುವ ವ್ಯತ್ಯಾಸಗಳು, ಜನಜನಾಂಗಗಳ ಸಾಮ್ಯವೈಷಮ್ಯಗಳು—ಈ ವಿಚಾರ ಗಳನ್ನೆಲ್ಲ, "ದೇಶಸೇವೆ ಮಾಡುತ್ತೇವೆ, ಜನರನ್ನು ಉದ್ಧಾರಮಾಡುತ್ತೇವೆ, ಸಮಾಜಸ್ಥಿತಿಯನ್ನು ಉತ್ತಮಪಡಿಸುತ್ತೇವೆ" ಎನ್ನುವವರೂ ತಿಳಿದುಕೊಳ್ಳು ವುದು ಅಗತ್ಯವೆಂದು ತೋರುತ್ತದೆ. ನಾನೂ ನನ್ನ ಸ್ನೇಹಿತರೂ ಹಾಗೆ ನಂಬಿಕೊಂಡಿದ್ದೇವೆ. ಆದರೆ ನಮ್ಮ ಪ್ರಜಾಪ್ರಮುಖರುಗಳು ಆ ರೀತಿ ಅಭಿಪ್ರಾಯ ಪಟ್ಟಿರುವಂತೆ ಕಾಣುವುದಿಲ್ಲ.

---

* ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೧೯-೨, ಜುಲೈ ೧೯೩೪ ರ ಸಂಚಿಕೆ ಯನ್ನು ನೋಡಿ.

# ಅಭಿರುಚಿಯ ವಿಸ್ತಾರ

ಈ ಉಪನ್ಯಾಸಗಳನ್ನು ಕುರಿತು ಒಂದು ವಿವರಣೆ ಮಾಡಬಹುದು. ಸಾಹಿತ್ಯ ಪರಿಷತ್ತಿನಲ್ಲಿ ಸಾಹಿತ್ಯಕ್ಕೆ ಸಂಬಂಧಪಡದೆ ಇರತಕ್ಕ ರಾಜ್ಯಾಂಗ ರಚನೆ ಮುಂತಾದ ವಿಚಾರಗಳನ್ನೂ ಆರ್ಥಿಕವಿಚಾರಗಳನ್ನೂ ಕುರಿತು ಇಲ್ಲಿ ಏಕೆ ಉಪನ್ಯಾಸಗಳನ್ನು ಏರ್ಪಾಡುಮಾಡಿದರೆಂದು ಕೇಳತಕ್ಕವರು ಯಾರಾದರೂ ಇದ್ದರೆ, ಅಂಥವರಿಗೆ ಆ ವಿವರಣೆಯನ್ನು ಹೇಳಬೇಕಾಗಿದೆ. ಇಲ್ಲಿ ನಾವು ಸಾಹಿತ್ಯ ಎಂಬ ಪದಕ್ಕೆ ವಿಶಾಲವಾಗಿ ಅರ್ಥಮಾಡತಕ್ಕವರು. ಯಾವ ಯಾವುದು ಜನರ ಜೀವನಕ್ಕೆ ಸಂಬಂಧಪಟ್ಟಿದೆಯೋ ಅದೆಲ್ಲ ಸಾಹಿತ್ಯದ ಒಳಗೆ ಅಡಗಿರಬೇಕಾದದ್ದು. ಯಾವ ಒಂದು ಜೀವನಪ್ರಸಂಗವೂ ಸಾಹಿತ್ಯಕ್ಕೆ ಹೊರಗಿನದಲ್ಲ. ಜನಜೀವನವೂ ಸಾಹಿತ್ಯವೂ ಬೇರೆಬೇರೆಯಲ್ಲ; ಅವೆರಡೂ ಒಂದಕ್ಕೊಂದು ಹೊಂದಿಕೊಂಡೇ ಇರುತ್ತವೆ; ಅಥವಾ ಹಾಗೆ ಇರಬೇಕಾದುವು. ಆದ್ದರಿಂದ ಜನಜೀವನದಲ್ಲಿ ಬರತಕ್ಕ ಸಮಸ್ಯೆಗಳೆಲ್ಲವೂ ಸಾಹಿತ್ಯಕ್ಕೆ ಸಂಬಂಧಪಟ್ಟವೇ ಆಗಿವೆ....

ನಮ್ಮ ಸಾಹಿತ್ಯ ಎನ್ನುವುದು ವಿಸ್ತಾರವಾಗಿ ಬೆಳೆಯುತ್ತಿದೆ. ಅದಕ್ಕೆ ತಕ್ಕಂತೆ ನಮ್ಮ ಅಭಿರುಚಿಯೂ ವಿಶಾಲವಾಗಿ ಬೆಳೆಯಬೇಕು. ಪರಿಷತ್ತಿಗೆ ಬೇಕಾದದ್ದು ಹೊಸದೊಂದೇ ಅಲ್ಲ ಅಥವಾ ಹಳೆಯದೊಂದೇ ಅಲ್ಲ; ಎಲ್ಲ ಜಾತಿ ಎಲ್ಲ ರೀತಿಗಳೂ ಅದಕ್ಕೆ ಬೇಕಾದುವೇ. ಸಾಹಿತ್ಯ ಪರಿಷತ್ತು ನಿಜವಾಗಿಯೂ ಸಾರ್ವಜನಿಕವಾದ ಸಂಸ್ಥೆ ಎನ್ನುವುದನ್ನು ಎಲ್ಲರೂ ಲಕ್ಷ್ಯದಲ್ಲಿರಿಸಿಕೊಳ್ಳಬೇಕು. ಸಾಹಿತ್ಯದ ಅಭಿವೃದ್ಧಿಗೆ ಯಾವಯಾವುದು ಸಾಧಕವೋ ಅದನ್ನೆಲ್ಲ ಅಂಗೀಕರಿಸಲು ಪರಿಷತ್ತು ಸಿದ್ಧವಾಗಿರುತ್ತದೆ.

ಸಾಹಿತ್ಯವೆಂದರೆ ಪದ್ಯ ನಾಟಕ ಕಾದಂಬರಿಗಳು ಮಾತ್ರವೇ ಅಲ್ಲ. ಜನರ ಮನಸ್ಸಿಗೆ ಬೇಕಾಗಿ, ಅವರ ಬುದ್ಧಿಗೆ ಹಿತಕರವಾಗಿ, ಅವರ ಬಾಳಿಗೆ ಒಂದು ಬೆಳಕನ್ನೂ ಸೊಬಗನ್ನೂ ತರತಕ್ಕ ಶಕ್ತಿಯುಳ್ಳದ್ದಾಗಿ ಇರುವುದೆಲ್ಲವೂ ಸಾಹಿತ್ಯದಲ್ಲಿ ಸೇರಿರಬೇಕಾದದ್ದು. ಎದುವರೆಗೆ ಸಾಹಿತ್ಯವು ಒಂದು ಸಂಕೋಚವಾದ ಕ್ಷೇತ್ರದಲ್ಲಿ ಕಟ್ಟು ಕಟ್ಟಿಕೊಂಡು ಕುಳಿತಿರುವುದೋ ಅದುವರೆಗೆ ಅದು ನಮ್ಮ ಜನದ ಜೀವನವನ್ನು ಮುಟ್ಟಲಾರದು; ಅದುವರೆಗೆ ನಮ್ಮ ಭಾಷೆಗೆ ಒಂದು ಜೀವಕಳೆ ಬರಲಾರದು. ಸಾಹಿತ್ಯದ ಪ್ರಭಾವವು ಜೀವನದಲ್ಲೆಲ್ಲಾ ವ್ಯಾಪಿಸತಕ್ಕದ್ದಾಗಿರಬೇಕು. ಅದು ನಮ್ಮ ಜನರ ಹೃದಯವನ್ನು ಸೋಕಬೇಕು. ಅದರ ಮಹಿಮೆ ನಮ್ಮ ದಿನದಿನದ ಪ್ರತಿಯೊಂದು

ವ್ಯಾಪಾರದಲ್ಲೂ ಪ್ರತಿಯೊಂದು ಕ್ರಿಯೆಯಲ್ಲೂ ಪ್ರತಿಯೊಂದು ಪ್ರವೃತ್ತಿಯಲ್ಲೂ ತೋರಿಬರಬೇಕು. ಹೀಗೆ ಯಾವ ಭಾಷೆಯು ಸಾಹಿತ್ಯವು ಜನದ ಆತ್ಮವನ್ನು ಮುಟ್ಟಬಲ್ಲುದೋ,—ಅವರ ಬದುಕಿನ ಪ್ರತಿಯೊಂದು ಮೂಲೆಯನ್ನೂ ಬೆಳಗಿಸಬಲ್ಲುದೋ,—ಅದೇ ಸಜೀವ ಭಾಷೆ; ಅದೇ ಬದುಕತಕ್ಕ ಭಾಷೆ. ನಮ್ಮ ಕನ್ನಡವು ಹಾಗೆ ಆಗಬೇಕಾದರೆ ನಮ್ಮ ಸಾಹಿತ್ಯವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿ, ನಮ್ಮ ದಿನದಿನದ ಬಾಳಿಗೆ ಸಂಬಂಧಪಟ್ಟ ಎಲ್ಲ ವಿಚಾರಗಳನ್ನೂ ತನ್ನೊಳಕ್ಕೆ ಸೆಳೆದುಕೊಂಡು, ಯಾವ ವಿಚಾರವನ್ನೂ ಹೊರಕ್ಕಿಡದೆ, ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಂಡು ಬೆಳೆಯಬೇಕು. ನಮ್ಮ ತತ್ತ್ವ ಹೀಗಿರುವುದರಿಂದ, ಪರಿಷತ್ತು ಎಲ್ಲ ವಿಚಾರಗಳನ್ನೂ ತಿಳಿದುಕೊಳ್ಳುವುದಕ್ಕೂ, ಎಲ್ಲ ಪ್ರಶ್ನೆಗಳನ್ನೂ ಸಮಾಲೋಚಿಸುವುದಕ್ಕೂ, ಎಲ್ಲ ಸಿದ್ಧಾಂತಗಳನ್ನೂ ವಿಮರ್ಶಿಸುವುದಕ್ಕೂ ಅವಕಾಶವನ್ನು ಮಾಡಿಕೊಡುತ್ತದೆ. ಆದರೆ ಯಾವ ವಿಚಾರದಲ್ಲೂ ಅದು ತಾನಾಗಿ ಒಂದು ಹೊಸ ಸಿದ್ಧಾಂತವನ್ನು ಮಾಡತಕ್ಕುದಲ್ಲ. ವಿಷಯಸಂಗ್ರಹಕ್ಕೂ ಚರ್ಚೆಗೂ ಅನುಕೂಲಗಳನ್ನು ಒದಗಿಸುವುದು ಮಾತ್ರ ಅದರ ಕೆಲಸ. ನಿರ್ಣಯಗಳನ್ನು ಮಾಡಿಕೊಳ್ಳುವುದು ಇಲ್ಲಿ ಬರುವ ಪ್ರತಿಯೊಬ್ಬ ಸಭಿಕನ ಸ್ವಂತ ಬುದ್ಧಿಯ ಕೆಲಸ. ಆದಕಾರಣ ಪರಿಷತ್ತಿನ ಸಭಾಮಂಟಪದಲ್ಲಿ ನಡೆಯುವ ಉಪನ್ಯಾಸಗಳಲ್ಲಿ ಉಪನ್ಯಾಸಕರು ಪ್ರತಿಪಾದಿಸುವ ಅಭಿಪ್ರಾಯಗಳೂ,—ಅದೇ ರೀತಿ ಪರಿಷತ್ಪತ್ರಿಕೆಯಲ್ಲಿ ಪ್ರಕಟಪಡುವ ಲೇಖನಗಳಲ್ಲಿಯ ಅಭಿಪ್ರಾಯಗಳೂ,—ಆಯಾ ಉಪನ್ಯಾಸಕರವೂ ಲೇಖಕರವೂ ಆಗಿರುತ್ತವೆ. ಅಂಥಾ ಅಭಿಪ್ರಾಯಗಳು ಅವಶ್ಯವಾಗಿ ಪರಿಷತ್ತಿನ ಅಭಿಪ್ರಾಯಗಳೆಂದು ಯಾರೂ ಪರಿಗಣಿಸತಕ್ಕದ್ದಲ್ಲ. ಪರಿಷತ್ತಿಗೆ ಎಲ್ಲ ಮತಗಳೂ ಬೇಕು; ಎಲ್ಲ ದೃಷ್ಟಿಗಳೂ ಬೇಕು; ಎಲ್ಲ ವಾದಗಳೂ ಬೇಕು. ಯಾವುದಾದರೂ ಒಂದು ದೃಷ್ಟಿಯನ್ನು, ಅಥವಾ ಒಂದು ವಾದವನ್ನು, ಅಥವಾ ಒಂದು ಮತವನ್ನು ಮಾತ್ರ ಅದು ಸ್ವೀಕರಿಸಿ ಮಿಕ್ಕದ್ದನ್ನು ನಿರಾಕರಿಸಲಾರದು.

## ಸಭಿಕ ಸಿದ್ಧತೆ

ಈ ಉಪನ್ಯಾಸಗಳನ್ನು ಆಧುನಿಕ ವಿಚಾರೋಪನ್ಯಾಸಗಳೆಂದು ಕರೆದಿದೆ. ಆಧುನಿಕ ವಿಜ್ಞಾನವು ಯಾವ ರೀತಿಯಲ್ಲಿ ಮುಂದೆ ಮುಂದೆ ನಡೆಯುತ್ತಿದೆ. ಪ್ರಪಂಚದ ಜೀವನವು ಎಷ್ಟುಮಟ್ಟಿಗೆ ಬದಲಾವಣೆಯಾಗುತ್ತಿದೆ, ನಮ್ಮ

ಜನರ ಬುದ್ಧಿ ಯಾವ ವಿಚಾರಮಾರ್ಗದಲ್ಲಿ ಸಂಚರಿಸಿ, ಹೇಗೆ ಹೊಸ ಕರ್ತವ್ಯ ಗಳನ್ನು ಕಂಡುಕೊಳ್ಳಬೇಕಾಗಿದೆ-ಎಂಬುದನ್ನು ಸ್ವಲ್ಪಮಾತ್ರವಾಗಿಯಾದರೂ, ಅತಿಸ್ಥೂಲರೂಪದಲ್ಲಿಯಾದರೂ, ಮನವರಿಕೆ ಮಾಡಿಕೊಡಬೇಕೆಂಬುದೇ ಈ ಉಪನ್ಯಾಸಮಾಲೆಯ ತಾತ್ಪರ್ಯ. ಈ ಉದ್ದೇಶವು ಈಗ ಎಷ್ಟು ಮಾತ್ರ ನೆರವೇರಿದೆಯೆಂದು ನಾನು ಹೇಳಲಾರೆ. ಇಂಥ ಉಪನ್ಯಾಸಗಳ ಕ್ರಮವು ನಮ್ಮಲ್ಲಿ ಇನ್ನೂ ಹೊಸದು ಎಂದು ನಾನು ತಿಳಿದುಕೊಂಡಿದ್ದೇನೆ. ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ರಾಜಕೀಯ ಪ್ರವೃತ್ತರ ಪ್ರಯೋಜನಕ್ಕಾಗಿಯೂ ಉಪಾಧ್ಯಾಯರು ಮುಂತಾದವರಿಗಾಗಿಯೂ "ಬೇಸಗೆಯ ಪಾಠಶಾಲೆ", "ಪುನರಾವರ್ತನೆಯ ಶಾಲೆ"—ಎಂಬ ಹೆಸರಿನಲ್ಲಿ ಇಂಥ ಉಪನ್ಯಾಸಗಳನ್ನು ನಡಸುವುದು ರೂಢಿಯಾಗಿದೆ. ನಮಗೆ ಅದು ಇನ್ನೂ ಹೊಸದು. ಅದು ಸಾರ್ಥಕ ವಾಗುವಂತೆ ನಡೆಯಬೇಕಾದರೆ ಉಪನ್ಯಾಸಕರೂ ಸಭಿಕರೂ ಇಬ್ಬರೂ ಮಾಡಿಕೊಂಡಿರಬೇಕಾದ ಸಿದ್ಧತೆ ಒಂದಿದೆ. ಉಪನ್ಯಾಸ ಕೇಳುವುದಕ್ಕೆ ಬರು ವವರು ಎಲ್ಲ ವಿಷಯವನ್ನೂ ಆಮೂಲಾಗ್ರವಾಗಿ ಇಲ್ಲಿಯೇ ತಿಳಿದುಕೊಳ್ಳ ಲಾಗುವುದೆಂದು ನಿರೀಕ್ಷಿಸಿರುವುದುಂಟು. ಅದು ತಪ್ಪು. ಅವರು ಉಪನ್ಯಾಸಕ್ಕೆ ಒಂದೆರಡು ವಾರ ಹಿಂದೆಯೇ ಅದರ ವಿಷಯಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಓದಿಕೊಂಡು, ತಮಗೆ ತಿಳಿದ ಅಂಶಗಳನ್ನು ಬರೆದಿಟ್ಟುಕೊಂಡು, ಯಾವ ವಿಷಯದಲ್ಲಿ ಸಂದೇಹವಿದೆಯೋ ಅದನ್ನು ಗುರುತುಮಾಡಿಕೊಂಡು, ಉಪನ್ಯಾಸ ಕೇಳುವುದಕ್ಕೆ ಬರಬೇಕು. ಉಪನ್ಯಾಸಕರು ಮಾತನಾಡತಕ್ಕ ಅರ್ಧ ಘಂಟೆ ಒಂದು ಘಂಟೆಯಲ್ಲಿ ಎಷ್ಟು ವಿಚಾರಗಳನ್ನು ಹೇಳಬಹುದು? ಅದರಲ್ಲಿ ಎಷ್ಟು ವಿಷಯಗಳನ್ನು ಗ್ರಹಿಸುವುದು ಸಾಧ್ಯ? ಇಲ್ಲಿಯ ಉಪನ್ಯಾಸಗಳನ್ನು ಸಂಗ್ರಹ ರೀತಿಯಲ್ಲಿ ನಡಸಬೇಕೆಂಬುದೇ ನಮ್ಮ ಉದ್ದೇಶ . . . ಅರ್ಧ ಘಂಟೆ, ಮುಕ್ಕಾಲು ಘಂಟೆಯ ಹೊತ್ತು ಉಪನ್ಯಾಸಮಾಡುವುದು; ಅನಂತರ ಸಂವಾದ ರೂಪದಲ್ಲಿ ತಮ್ಮ ವಿಷಯಕ್ಕೆ ಸಂಬಂಧಪಟ್ಟ ಪ್ರಶ್ನೋತ್ತರಗಳನ್ನು ನಡಸು ವುದು—ಹೀಗೆ ನಮ್ಮ ಉದ್ದೇಶ. ಮುಖ್ಯವಾಗಿ ಇದು ಸಂಭಾಷಣರೂಪ ವಾಗಿರಬೇಕು. ಉಪನ್ಯಾಸಕರು ಯಾವ ವಿಷಯವನ್ನೇ ತೆಗೆದುಕೊಳ್ಳಲಿ, ಅದು ಚಿಕ್ಕದಾಗಲಿ ದೊಡ್ಡದಾಗಲಿ, ಇಷ್ಟು ಅಲ್ಪಕಾಲದಲ್ಲಿ ತಮಗೆ ತೃಪ್ತಿ ಯಾಗುವಷ್ಟು ವಿಸ್ತಾರವಾಗಿ ಉಪನ್ಯಸಿಸುವುದು ಸಾಧ್ಯವಿಲ್ಲ. ಆದರೆ ಸ್ವಲ್ಪ ವಿಷಯವನ್ನು ಹೇಳಿದರೂ ಅದು ಶ್ರೋತೃಗಳ ಮನಸ್ಸಿಗೆ ಹಿಡಿಯಬೇಕೆನ್ನು ವುದು ಉಪನ್ಯಾಸಕರ ಉದ್ದೇಶವಾಗಿರುತ್ತದೆ. ಆದಕಾರಣ ಶ್ರೋತೃಗಳು ತಕ್ಕ ಪೂರ್ವಸಿದ್ಧತೆ ಮಾಡಿಕೊಂಡು ಬಂದವರಾಗಿರಬೇಕು.

## ಭಾಷಕ ಸಿದ್ಧತೆ

ಒಂದು ವಿಷಯುವನ್ನು ಸ್ವಲ್ಪ ಕಾಲದಲ್ಲಿ ಹೇಳಿದರೂ, ಹೇಳುವ ರೀತಿಯು ವಿಚಕ್ಷಣೆಯಿಂದ ಶ್ರೋತೃಗಳ ಮನಸ್ಸಿನಲ್ಲಿ ಒಂದು ಸಮಗ್ರವಾದ ಬಿಂಬವು ಕಲ್ಪಿತವಾಗಬೇಕು. ವಿಷಯವು ಅಪಾರವಾಗಿರುತ್ತದೆ. ಉಪನ್ಯಾಸಕರು ಆ ಅಪಾರ ಕ್ಷೇತ್ರದ ಒಂದೆರಡು ಭಾಗಗಳನ್ನು ಮಾತ್ರ ಆರಿಸಿಕೊಂಡು, ಆ ಒಂದೆರಡು ವಿಷಯುಗಳನ್ನು ಕುರಿತು ಸುಸಂಬದ್ಧ ಕ್ರಮದಲ್ಲಿ ಉಪನ್ಯಾಸ ಮಾಡಿದರೆ ಸಾಕಾಗಿರುತ್ತದೆ. ಇಂಥ ಉಪನ್ಯಾಸಗಳು ವಿಷಯ ಸರ್ವಸ್ವವನ್ನೂ ಪ್ರತಿಪಾದನೆ ಮಾಡಲಾಗುವುದಿಲ್ಲ. ಇವು ಕೇವಲ ದಿಕ್ ಪ್ರದರ್ಶನಾರ್ಥ ವಾದವು. ಅವುಗಳನ್ನು ಕೇಳಿದ್ದರಿಂದ ಶ್ರೋತೃಗಳ ಮನಸ್ಸಿನಲ್ಲಿ ವಿಷಯು ವನ್ನು ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ ಹುಟ್ಟಿದರೆ ಸಾಕು; ಮುಂದೆ ಬೇಕಾದ ಶಾಸ್ತ್ರವ್ಯಾಸಂಗವನ್ನು ಅವರೇ ಸಾಧ್ಯವಿರುವ ಮಟ್ಟಿಗೆ ಮಾಡಿಕೊಳ್ಳುವರು. ವಿಷಯದ ಸ್ವರೂಪವೆಂಥಾದ್ದು, ಅದು ಹೋಗತಕ್ಕ ದಾರಿ ಎಂಥಾದ್ದು--ಎಂದಿಷ್ಟು ಮಾತ್ರ ಉಪನ್ಯಾಸದಿಂದ ತೋರಿಬಂದರೆ ಅದೇ ದೊಡ್ಡ ಉಪಕಾರವಾಗುತ್ತದೆ. ಹೀಗೆ ಮಾಡುವುದಕ್ಕೆ ಬದಲಾಗಿ, ಉಪನ್ಯಾಸಕರು ವಿಷಯದ ಯಾವುದೋ ಒಂದು ಅಂಚನ್ನು ಹಿಡಿದು ಪ್ರಾರಂಭಿಸಿ, ಮತ್ತಿನ್ನಾವುದೋ ಒಂದು ಅಂಚಿಗೆ ಹಾರಿ, ಕೈಗೆ ಅಬ್ಬಲಾರದಷ್ಟು ಹೊರೆಯನ್ನೆತ್ತುವ ಸಾಹಸದಿಂದ ಅಕಾಂಡತಾಂಡವ ಮಾಡಿದರೆ, ಅದರಿಂದ ಶ್ರೋತೃಗಳಿಗೆ ವಿಷಯದ ಸ್ವರೂಪವನ್ನಾಗಲಿ ಸ್ವಭಾವ ವನ್ನಾಗಲಿ ವಿಶದಪಡಿಸಿದಂತೆ ಆಗಲಾರದು. ಉಪನ್ಯಾಸವು ಚಿಕ್ಕದಾಗಿದ್ದರೂ ಅಷ್ಟರಲ್ಲೇ ಅದು ಒಂದು ಸಂಪೂರ್ಣತೆಯನ್ನು ಪಡೆದು, ಮನಸ್ಸಿಗೆ ಒಂದು ಸಮಗ್ರ ಬಿಂಬವನ್ನು ತರುವಂಥಾದ್ದಾಗಿ ಇರಬೇಕು.

ಇಲ್ಲಿ ಇದುವರೆಗೆ ಮಾತನಾಡಿರತಕ್ಕವರಲ್ಲಿ ಇಂಗ್ಲಿಷ್ ಬಲ್ಲ ಪ್ರತಿ ಯೊಬ್ಬರೂ—ನನ್ನೊಬ್ಬನ ವಿನಾ—ಬಹುಶಃ ಹೆಚ್ಚಾಗಿಯೋ ಕೊಂಚ ವಾಗಿಯೋ ಸಂಕೋಚಪಟ್ಟುಕೊಂಡೇ ಕನ್ನಡದಲ್ಲಿ ಮಾತನಾಡಿರುವ ಹಾಗೆ ತೋರುತ್ತದೆ. "ನನಗೆ ಕನ್ನಡದಲ್ಲಿ ಮಾತನಾಡಿ ಅಭ್ಯಾಸವಿಲ್ಲ" ಎಂದು ಮೊದಲು ಪೀಠಿಕೆ ಹಾಕಿಕೊಂಡೇ ಉಪನ್ಯಾಸಗಳನ್ನು ಆರಂಭಮಾಡಿದ್ದಾರೆ. ಆದರೆ ಅಂಥ ಸಂಕೋಚಕ್ಕೇನೂ ಕಾರಣವಿಲ್ಲವೆಂದು ನನಗೆ ತೋರುತ್ತದೆ. ಅವರು ಕನ್ನಡದಲ್ಲಿ ಧಾರಾಳವಾಗಿ ಮಾತನಾಡಿರುವುದನ್ನು ನೀವುಗಳು ಕೇಳಿ ದ್ದೀರಿ. ಇಂಗ್ಲಿಷು ಪದಗಳನ್ನು ಯಾರೂ ಹೆಚ್ಚಾಗಿ ಉಪಯೋಗಿಸಿಲ್ಲ;

ಅಥವಾ ಒಂದುವೇಳೆ ಉಪಯೋಗಿಸಬೇಕಾಗಿ ಬಂದರೂ ಅದರ ಹಿಂದೆಯೇ ತಕ್ಕ ಕನ್ನಡಮಾತನ್ನೂ ಹೇಳಿರುತ್ತಾರೆ. ಅಲ್ಲದೆ ಇಂಗ್ಲಿಷು ಪದಗಳನ್ನೇ ಉಪಯೋಗಿಸಿದ್ದರೂ ಅವು ಅನಿವಾರ್ಯವಾದವುಗಳಾಗಿರುತ್ತವೆ. ಅವು ಗಳಲ್ಲೆಷ್ಟೋ ಆಗಲೇ ನಮಗೆ ಬಳಕೆಗೆ ಬಂದುಬಿಟ್ಟಿವೆ. "ಫಾಸ್ಫೇಟ್" ಎನ್ನುವ ಪದವನ್ನು ಫಾಸ್ಫೇಟ್ ಎಂದೇ ಏಕೆ ಹೇಳಕೂಡದು? "ಕೋರ್ಟು", "ಕಚೇರಿ" ಮುಂತಾದ ಪದಗಳು ನಮಗೇನೂ ಹೊಸವಾಗಿ ಕಾಣುವುದಿಲ್ಲ. ಇಂಥ ಪದಗಳು ನಮ್ಮ ಸಾಮಾನ್ಯ ಭಾಷೆಯಲ್ಲಿ ಸೇರಿದ್ದರೂ ನಮಗೆ ಅಷ್ಟೇನೂ ವಿಪರೀತವಾಗಿ ತೋರುವುದಿಲ್ಲ. ನಾವೆಲ್ಲ ತೊರೆಯಬೇಕಾದದ್ದು ವಿಪರೀತವಾಗಿ ತೋರುವ ಅನ್ಯಭಾಷಾಪದಗಳನ್ನು. ಇಲ್ಲಿ ಒಂದು ಚಿಕ್ಕ ಕಥೆ ಹೇಳಬಹುದೆಂದು ತೋರುತ್ತದೆ. ನನ್ನ ಸ್ನೇಹಿತರು ಒಬ್ಬ ದೊಡ್ಡ ಡಾಕ್ಟರು ಇದ್ದಾರೆ. ಅವರಿಗೆ ಕನ್ನಡದಲ್ಲಿ ಅಭಿಮಾನ. ಒಂದು ದಿನ ಒಬ್ಬಾತ ಅವ ರಲ್ಲಿಗೆ ಹೋಗಿ "ಸಾರ್, ನಿನ್ನೆ ನೈಟು ನನ್ನ ವೈಫಿಗೆ ಫೀವರ್ ಬಂದು, ಫೋರ್ ಫೈವ್ ಟೈಮ್ಸ್ ವಾಮಿಟ್ ಆಯಿತು; ಸ್ವಲ್ಪ ಎಕ್ಸಾಮಿನ್ ಮಾಡಿ ಮೆಡಿಸನ್ ಕೊಡಬೇಕು" ಎಂದರಂತೆ. ಅದಕ್ಕೆ ನನ್ನ ಸ್ನೇಹಿತರು—"ಆಕೆ ಕಮ್ ಮಾಡಿದ್ದರೆ ಇಲ್ಲಿ ಸಿಟ್ ಮಾಡಿಸಿ; ನಾನು ಸೀ ಮಾಡುತ್ತೇನೆ" ಎಂದು ಹೇಳಿದರಂತೆ. ಇಂಗ್ಲಿಷ್ ಬೆರಸಿ ಮಾತನಾಡುವುದರ ವಿಪರೀತ ವನ್ನು ತೋರಿಸುವುದಕ್ಕೋಸ್ಕರ ಹಾಗೆ ಅವರು ಮಾಡಿದ್ದು. ಎಲ್ಲೆಲ್ಲಿ ತೀರ ಅವಶ್ಯವೋ ಅಲ್ಲಿ ಇಂಗ್ಲಿಷನ್ನೋ ಹಿಂದುಸ್ಥಾನಿಯನ್ನೋ ಬೆರಸಿದರೆ ತಪ್ಪಿಲ್ಲ. ಇಲ್ಲಿ ನಡೆದಿರುವ ಭಾಷಣಗಳನ್ನು ಕೇಳಿದವರಿಗೆ, ಇಂಗ್ಲಿಷ್ ಪದಗಳನ್ನು ಎಷ್ಟು ಮಿತವಾಗಿ ಉಪಯೋಗಿಸಿಕೊಂಡು ಉಪನ್ಯಾಸಕರು ಮಾತನಾಡಿ ದ್ದಾರೆಂಬುದು ತಿಳಿದಿದೆ. ಮುಂದೆ ಕನ್ನಡದಲ್ಲಿ ಉಪನ್ಯಾಸಮಾಡತಕ್ಕ ಇಂಗ್ಲಿಷ್ ವಿದ್ಯಾವಂತರುಗಳು ಸಂಕೋಚಪಟ್ಟುಕೊಳ್ಳದೆ ಮಾತನಾಡ ಬಹುದೆಂದು ನಾನು ತಿಳಿದುಕೊಂಡಿದ್ದೇನೆ.

ಈ ಉಪನ್ಯಾಸಮಾಲೆಯ ಜೊತೆಯಲ್ಲಿ ಗ್ರಂಥಪ್ರದರ್ಶನವೊಂದನ್ನು ನಡಸಿದರೆ ಉಪಯೋಗವಾಗಬಹುದೆಂದು ತಿಳಿದುಕೊಂಡು ಆ ಪ್ರಯತ್ನವನ್ನು ಮಾಡಿದ್ದಾಯಿತು. ಅದೂ ತಕ್ಕಮಟ್ಟಿಗೆ ಚೆನ್ನಾಗಿ ನೆರವೇರಿದೆಯೆಂದು ನಾನು ತಿಳಿದುಕೊಂಡಿದ್ದೇನೆ.

ಗ್ರಂಥಪ್ರದರ್ಶನದಲ್ಲಿ ಒಟ್ಟಿಗೆ ಸೇರಿರುವುದು ಮೂರು ಸಾವಿರಕ್ಕೆ ಮೇಲಿನ ಪುಸ್ತಕಗಳು. ಇವುಗಳಲ್ಲಿ ಅನೇಕ ಜಾತಿ ವಿಜಾತಿಗಳಿವೆ; ಮತ್ತು ಭೂಪಟ ಗಳು, ಭೂಗೋಳ ಮೊದಲಾದ ಪಾಠಶಾಲೋಪಕರಣಗಳು ಬೇರೆ ಇವೆ.

ಇವುಗಳ ಸಮೂಹವನ್ನು ನೋಡಲು, ಮೊದಲನೆಯ ದಿವಸ ಬಂದ ಜನರ ಸಂಖ್ಯೆಯನ್ನು ಸೇರಿಸಿಕೊಳ್ಳದೆ, ಒಟ್ಟು ೧,೯೯೩ ಜನರು ಉಳಿದ ಆರು ದಿನಗಳಲ್ಲಿ ಬಂದಿರುತ್ತಾರೆ. ಮೊದಲ ದಿವಸ ಬಹಳ ಕಡಮೆಯೆಂದು ಲೆಕ್ಕ ಹಾಕಿ ೫೦೦ ಜನರು ಬಂದಿರಬಹುದೆಂದರೂ ಒಟ್ಟು ೨,೫೦೦ ಜನಕ್ಕೆ ಕಡಮೆಯಿಲ್ಲದೆ ಗ್ರಂಥಪ್ರದರ್ಶನವನ್ನು ನೋಡಿದ್ದಾರೆ ಎಂದು ಗೊತ್ತಾಗುತ್ತದೆ. ಗ್ರಂಥಗಳ ಬೆಳವಣಿಗೆ ಯಾವ ರೀತಿಯಲ್ಲಿ ನಡೆದಿದೆ, ಎಂದು ನೋಡಿದರೆ ೧೯೦೧ ನೆಯ ಇಸವಿಯಿಂದ ೧೯೧೫ ರ ವರೆಗೆ ಒಟ್ಟು ೨೦೬ ಪುಸ್ತಕಗಳು ಪ್ರಕಟವಾಗಿವೆ; ಈಚಿನ ೧೮ ವರ್ಷಗಳಲ್ಲಿ—ಎಂದರೆ ೧೯೧೬ ರಿಂದ ೧೯೩೪ ರ ವರೆಗೆ ೨,೨೨೬ ಪುಸ್ತಕಗಳು ಪ್ರಕಟವಾಗಿವೆ ಎಂದರೆ ಹತ್ತರಷ್ಟು ಹೆಚ್ಚಾಗಿ ಬೆಳೆದಿವೆ. ಈ ಸಂಖ್ಯೆಗಳೇನೂ ಕರಾರುವಾಕ್ಕಾದವಲ್ಲ. ಏಕೆಂದರೆ ಎಷ್ಟೋ ಪುಸ್ತಕಗಳು ಪ್ರದರ್ಶನಕ್ಕೆ ಬಂದಿಲ್ಲ. ಕಾದಂಬರಿಯ ಗುಂಪನ್ನು ತೆಗೆದುಕೊಂಡು ನೋಡಿರಿ: ೧೯೦೧ ರಿಂದ ೧೯೧೫ ರ ವರೆಗೆ ಬಿ. ವೆಂಕಟಾಚಾರ್ಯರ ಕಾದಂಬರಿಗಳು ಎಷ್ಟೋ—ಸುಮಾರು ೩೦ ಇದ್ದರೂ ಇರಬಹುದು—ಪ್ರಕಟವಾಗಿವೆ. ಆ ಒಟ್ಟು ಸಂಖ್ಯೆ ಇಲ್ಲಿ ಲೆಕ್ಕಕ್ಕೆ ಬಾರದೆಹೋಗಿದ್ದರೂ ಇರಬಹುದು. ಹೀಗೆ ನಮ್ಮಲ್ಲಿ ಲೆಕ್ಕಕ್ಕೆ ದೊರೆಯದೆ ಇರುವ ಗ್ರಂಥಗಳು ಅನೇಕವಿರಬಹುದು. ಆದರೂ ಈಗ ಬಂದಿರುವಷ್ಟೇ ಗ್ರಂಥಗಳ ಸಂಖ್ಯೆಯನ್ನು ನೋಡಿದರೂ ಸಹ ಈಚೀಚೆಗೆ ಆಗಿರುವ ಗ್ರಂಥಾಭಿವೃದ್ಧಿಯು ಪ್ರೋತ್ಸಾಹಕರವಾಗಿದೆ.

## ಸಾಹಿತ್ಯಸೇವೆ



ಇಲ್ಲಿಗೆ ಬಹು ಮಂದಿ ಉಪಾಧ್ಯಾಯರುಗಳು ದಯಮಾಡಿ ಬಂದಿರುತ್ತೀರಿ. ಕೆಲವರು ಬೆಳಗಾಮ್, ಧಾರವಾಡ, ಕಾರವಾರ, ಮಂಗಳೂರು, ಕೊಡಗು ಮೊದಲಾದ ದೂರಪ್ರದೇಶಗಳಿಂದ ಬಂದವರು. ನಿಮ್ಮ ನಿಮ್ಮ ಊರುಗಳಿಗೆ ನೀವುಗಳು ಹೋದ ತರುವಾಯ ಪರಿಷತ್ತಿಗೆ ಮಾಡಬೇಕಾದ ಸಹಾಯವು ಇನ್ನೂ ಸ್ವಲ್ಪವಿದೆ ಎನ್ನುವುದನ್ನು ತಾವು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ತಮ್ಮಗಳಿಂದ ಸಹಾಯವಾಗಬೇಕೆಂದರೆ ತಾವೆಲ್ಲರೂ ಪರಿಷತ್ತಿನ ನಿಧಿಗೆ ಹಣ ಕೊಡಬೇಕೆಂಬುದು ಒಂದೇ ಅರ್ಥವಲ್ಲ. ಹಣವನ್ನು ಸಾಧ್ಯವಿದ್ದಷ್ಟು ಕೊಡಿ. ಅದಕ್ಕಿಂತ ಹೆಚ್ಚಾಗಿ ನಿಮ್ಮ ನಿಮ್ಮ ಊರುಗಳಲ್ಲಿ ಕರ್ಣಾಟಕ ಸಂಘಗಳನ್ನು ಸ್ಥಾಪನೆಮಾಡಿಸಿ ಪರಿಷತ್ತಿಗೆ ಬೆಂಬಲ ಕೊಡಿ. ಸಂಘಗಳು ನಾನಾ ಕಡೆಗಳಲ್ಲಿ ಸ್ಥಾಪಿತವಾಗಿ ಕೆಲಸ ಮಾಡಿದಷ್ಟೂ ನಮ್ಮ ಸಾಹಿತ್ಯದ ಶಕ್ತಿ ಪ್ರಭೆಗಳು ಬೆಳೆದುಕೊಂಡುಹೋಗಲು ಅನುಕೂಲವಾಗುವುದು. ಈಗಾಗಲೇ

ಅನೇಕ ಸ್ಥಳಗಳಲ್ಲಿ ಕರ್ಣಾಟಕ ಸೇವಾಸಮಿತಿಗಳೂ, ಸಾಹಿತ್ಯಸಂಘಗಳೂ ಏರ್ಪಾಟಾಗಿವೆ. ಇಂಥ ಎಲ್ಲ ಸಂಸ್ಥೆಗಳೂ ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ಅದರ ಅಂಗಗಳಾಗಿ ಸೇರಬೇಕು. ಮೊನ್ನೆ ಹುಬ್ಬಳ್ಳಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಈ ರೀತಿಯಾದ ಒಂದು ನಿರ್ಣಯವು ಅಂಗೀಕೃತವಾಗಿದೆ. ಆ ಕಾರ್ಯವನ್ನು ನೀವುಗಳೆಲ್ಲರೂ ಕೈಕೊಂಡು ನಡಸಬೇಕೆಂದು ಬೇಡಿಕೊಳ್ಳುತ್ತೇನೆ. ಮೈಸೂರು ಸಂಸ್ಥಾನದ ಕೆಲವು ಡಿಸ್ಟ್ರಿಕ್ಟು ಊರುಗಳಲ್ಲಿಯೂ ಕೆಲವು ತಾಲ್ಲೂಕು ಊರುಗಳಲ್ಲಿಯೂ ಈಗ ಕರ್ಣಾಟಕ ಸಂಘಗಳಾಗಿವೆ. ಇಂಥ ದೊಡ್ಡ ಊರುಗಳಲ್ಲಿ ಮಾತ್ರವೇ ಅಲ್ಲದೆ ದೊಡ್ಡದೊಡ್ಡ ಹಳ್ಳಿಗಳಲ್ಲಿಯೂ ಕೂಡ ಕರ್ಣಾಟಕ ಸಂಘಗಳನ್ನು ಸ್ಥಾಪಿಸಬೇಕೆನ್ನುವುದು ನನ್ನ ಸೂಚನೆ. ಅವುಗಳಲ್ಲಿ ಏನು ಕೆಲಸ ಮಾಡುವುದು?—ಎಂದು ನೀವು ಕೇಳಬಹುದು. ಇನ್ನೇನೂ ಆಗದಿದ್ದರೂ ಕನ್ನಡದಲ್ಲಿರುವ ನಾನಾ ಜಾತಿಯ ಉತ್ತಮ ಗ್ರಂಥಗಳನ್ನು ಆರಿಸಿಕೊಂಡು, ಹತ್ತು ದಿವಸಕ್ಕೋ ಹದಿನೈದು ದಿವಸಕ್ಕೋ ಒಂದು ಸಲ ನಿಮ್ಮೂರಿನ ಜನರನ್ನು ಗುಡಿಯಲ್ಲೋ ಚಾವಡಿಯಲ್ಲೋ ಸೇರಿಸಿ, ಅವರಿಗೆ ಆ ಗ್ರಂಥಗಳಲ್ಲೊಂದನ್ನು ಒಂದು ಅರ್ಧ ಘಂಟೆಯ ಹೊತ್ತು ಓದಿ ಹೇಳಬಹುದು. ಇದರ ಜೊತೆಗೆ ಆಗಾಗ ಆಧುನಿಕ ವಿಚಾರಗಳನ್ನು ಕುರಿತ ಉಪನ್ಯಾಸಗಳನ್ನೂ ಇಟ್ಟುಕೊಳ್ಳಬಹುದು. ಅಂತೂ ಸಾಧ್ಯ ತೋರಿದಂತೆ ಕೆಲಸ ಪ್ರಾರಂಭವಾಗಬೇಕು. ಅನಂತರ ತಾನಾಗಿಯೇ ಅದು ಬೆಳೆದುಕೊಂಡುಹೋಗುತ್ತದೆ. ಈ ಕೆಲಸಕ್ಕೆ ಎಲ್ಲ ದರ್ಜೆಯ ಎಲ್ಲ ತರಗತಿಯ ಜನರ ಸಹಾಯವೂ ಬೇಕಾಗುತ್ತದೆ. ಸಾಹಿತ್ಯವೆನ್ನುವುದು ಯಾವುದೋ ಒಂದು ದೂರದ ವಸ್ತುವಲ್ಲ; ನಮ್ಮ ಬದುಕಿಗೆ ಬೇಕಾದ ಬೆಳಕೇ ಅದು,—ಎನ್ನುವ ತಿಳಿವಳಿಕೆಯನ್ನು ಎಲ್ಲರಲ್ಲಿಯೂ ಉಂಟುಮಾಡಿ ಕೊಡಬೇಕು. ಈ ಕೆಲಸವನ್ನು ನಡಸುವುದಕ್ಕಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಕರ್ಣಾಟಕ ಸಂಘಗಳನ್ನು ಸ್ಥಾಪನೆ ಮಾಡಬೇಕೆಂದು ಪುನಃ ಪುನಃ ತಮ್ಮನ್ನು ಬೇಡಿಕೊಳ್ಳುತ್ತೇನೆ.

# ೪. ಭಾಷೆಯ ನವೀಕರಣ*

ಈ ವಿಶೇಷ ಸಾಹಿತ್ಯೋತ್ಸವದ ಉದ್ದೇಶಗಳೇನೆಂಬುದನ್ನು ಸಂಗ್ರಹವಾಗಿ ಹೇಳಬೇಕಾದರೆ,—ಈ ಉತ್ಸವವು ಕನ್ನಡ ಭಾಷೆಯ ನವೀಕರಣ ಪ್ರಯತ್ನದ ಒಂದು ರೂಪ. ಸಾಂಪ್ರತ ಲೋಕದ ಬಗೆಬಗೆಯ ವೃತ್ತಿ ಪ್ರವೃತ್ತಿಗಳಿಗೂ ವಿಚಾರವ್ಯವಹಾರಗಳಿಗೂ ಕನ್ನಡವು ಒದಗಿಬರುವಂತೆ ಮಾಡಬೇಕೆಂಬುದು ಪರಿಷತ್ತಿನ ಆಶಯ. ಇದುವರೆಗೆ ನಮ್ಮ ಜನರಲ್ಲಿ ಸಾಹಿತ್ಯವೆಂದರೆ, ಅದು ಕೇವಲ ವಿದ್ವತ್ಪ್ರಪಂಚಕ್ಕೆ ಸೇರಿದ ಹವ್ಯಾಸ; ಅದಕ್ಕೂ ಸಾಮಾನ್ಯಲೋಕದ ಅನುದಿನದ ಜೀವನಕ್ಕೂ ಹೆಚ್ಚಾದ ಸಂಬಂಧವೇನೂ ಇಲ್ಲ; ಅದು ಪಾಂಡಿತ್ಯಕ್ಕೆ ಮಾತ್ರ ರುಚಿಸುವ ಒಂದು ಶಾಬ್ದಿಕಕ್ರೀಡೆ—ಎಂಬುದು ಸಾಮಾನ್ಯ ಭಾವನೆಯಾಗಿತ್ತು. ಸಾಮಾನ್ಯ ಜನರಿಗೆ ಅರ್ಥವಾಗದ ಪದಸರಣಿಯಲ್ಲಿರುವ ಒಂದು ಕಥೆ ಅಥವಾ ಪುರಾಣ ಅಥವಾ ನಾಟಕ; ಅದಕ್ಕೆ ಸಂಬಂಧಪಟ್ಟ ವ್ಯಾಕರಣ, ಛಂದಸ್ಸು, ಅಲಂಕಾರ—ಇವುಗಳಿಂದ ಹೊರಟ ವ್ಯಾಖ್ಯಾನ, ಚರ್ಚೆ—ಇದಿಷ್ಟು ಮಾತ್ರವೇ ಸಾಹಿತ್ಯ ಎಂಬುದು ರೂಢಿಯಿಂದ ಬಂದ ತಿಳಿವಳಿಕೆಯಾಗಿತ್ತು. ಆದಕಾರಣ ಸಾಹಿತ್ಯಸಂಸ್ಥೆಯೆಂದರೆ ಅದು ಯಾರೋ ಕೆಲಮಂದಿ ಮಾತಿನ ಮಲ್ಲರ ದೇಗುಲವೆಂದು ಬೀದಿಯ ಮನುಷ್ಯರಿಗೆ ತೋರುತ್ತಿತ್ತೇ ಹೊರತು, ಅದು ತಮ್ಮ ಬದುಕಿಗೂ ಅವಶ್ಯವಾಗಿ ಬೇಕಾದ ಸಾಮಗ್ರಿಯೆಂದು ಅವರಿಗೆ ತೋರುತ್ತಿರಲಿಲ್ಲ. ಈ ಪರಿಷತ್ತು ಸಾಹಿತ್ಯವೆಂಬ ಮಾತಿಗೆ ಕೊಟ್ಟಿರುವ ಅರ್ಥವಾದರೋ, ಹೀಗೆ ಸಂಕುಚಿತವಾದದ್ದಲ್ಲವೆಂದು ಅದರ ನಿಬಂಧಾವಳಿಯ ಮೊದಲಲ್ಲಿರುವ ಉದ್ದೇಶವಿವರಣೆಯಿಂದಲೇ ಸ್ಪಷ್ಟಪಡುತ್ತದೆ. ಈ ಪರಿಷತ್ತಿನ ದೃಷ್ಟಿಯಲ್ಲಿ, ಸಾಹಿತ್ಯವೆಂಬುದು ಜನಜೀವನವನ್ನು ಉನ್ನತಿಗೆತ್ತುವುದಕ್ಕೆ ಅವಶ್ಯವಾಗಿರುವ ಆಯುಧ. ದೇಶದಲ್ಲಿಯ ಎಲ್ಲ ಮತಗಳ, ಎಲ್ಲ ವರ್ಗಗಳ ಮತ್ತು ಎಲ್ಲ ಕಸಬುಗಳ ಜನರಲ್ಲಿಯೂ ಜ್ಞಾನವನ್ನೂ ವಿವೇಕವನ್ನೂ ಬೆಳಸಿ, ಅವರ ಧ್ಯೇಯಗಳನ್ನು ಉನ್ನತಗೊಳಿಸಿ, ಅವರ ಲೌಕಿಕಯೋಗ್ಯತೆಯನ್ನು ಅಭಿವೃದ್ಧಿಪಡಿಸುವುದು ಸಾಹಿತ್ಯದ ಕರ್ತವ್ಯ

---

* ಕರ್ಣಾಟಕ ಸಾಹಿತ್ಯ ಪರಿಷತ್ತು ಬೆಂಗಳೂರು ನಗರದಲ್ಲಿ ಏರ್ಪಡಿಸಿದ ಎರಡನೆಯ ವಿಶೇಷ ಸಾಹಿತ್ಯೋತ್ಸವದ (೨೫-೪-೧೯೩೫ರಿಂದ ೨-೫-೧೯೩೫) ಸಂದರ್ಭದಲ್ಲಿ ಉಪಾಧ್ಯಕ್ಷ ಸ್ಥಾನದಿಂದ ಮಾಡಿದ ಸ್ವಾಗತ ಮತ್ತು ಉಪಸಂಹಾರ ಭಾಷಣದ ಭಾಗಗಳು. (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಜುಲೈ ೧೯೩೫.)

ವೆಂದು ಪರಿಷತ್ತು ನಂಬಿದೆ. ಈ ದೃಷ್ಟಿಯಿಂದ ನೋಡಿದರೆ ಕನ್ನಡಸಾಹಿತ್ಯದಲ್ಲಿ ಈಗ ಕೆಲವು ದೊಡ್ಡ ಕೊರತೆಗಳು ಎದ್ದು ಕಾಣಿಸುತ್ತಿವೆ. ನಮ್ಮ ಇದುವರೆಗಿನ ಸಾಹಿತ್ಯದಲ್ಲಿ ಲೌಕಿಕ ಜೀವನಕ್ಕೆ ಸಂಬಂಧಪಟ್ಟ ತಿಳಿವಳಿಕೆಯನ್ನು ಕೊಡುವ ಭಾಗವು ತೀರ ವಿರಳವಾಗಿದೆ;—ಅಂತರಂಗಪ್ರಪಂಚದ ವಿಚಾರಗಳು ಯಥೇಷ್ಟವಾಗಿವೆ. ಬಹಿರಂಗಪ್ರಪಂಚದ ವಿಚಾರಗಳು ಅತಿ ಸ್ವಲ್ಪವಾಗಿವೆ. ಭಾವರಾಗಗಳ ಧ್ವನಿ ಅವುಗಳಲ್ಲಿ ತೀವ್ರವಾಗಿ ಕೇಳಬರುತ್ತದೆ; ವಿಮರ್ಶೆ ಪರೀಕ್ಷೆಗಳ ಧ್ವನಿ ಅಷ್ಟು ಬಲವಾಗಿ ಕೇಳಬರುತ್ತಿಲ್ಲ. ಭಕ್ತಿ, ಪ್ರೀತಿ, ವೈರಾಗ್ಯ—ಇವು ಮನುಷ್ಯನ ಉಪೇಕ್ಷೆಗೆ ಅರ್ಹವಾದವುಗಳೆಂದು ಯಾರೂ ಹೇಳಲಾರರು; ಆದರೆ ಅವಷ್ಟರಿಂದಲೇ ಅವನ ಜೀವನವು ಪೂರ್ಣವೆನಿಸಲಾರದು, ಸಾರ್ಥಕ ಮಾರ್ಗದಲ್ಲಿ ಸಾಗಲಾರದು; ಅವುಗಳ ಜೊತೆಗೆ ವಿಚಾರಶೀಲತೆ, ಕಾರ್ಯದಕ್ಷತೆ, ಕರ್ತವ್ಯೋತ್ಸಾಹ ಇವೂ ಸೇರಿರಬೇಕು. ಈ ಗುಣಗಳಿಗೆ ಪರಿಪೋಷಕವಾದದ್ದು ಪ್ರಕೃತಿವಿಜ್ಞಾನ ಮತ್ತು ಲೋಕವ್ಯವಸ್ಥಾಪರಿಜ್ಞಾನ. ಈ ಎರಡು ವಿಷಯಗಳನ್ನು ಕುರಿತ ಸಾಹಿತ್ಯವನ್ನು ಬೆಳಸುವುದು ಕನ್ನಡದ ಅಭಿಮಾನಿಗಳಿಗೆ ಈಗ ಅವಶ್ಯ ಕರ್ತವ್ಯವಾಗಿದೆ. ಈ ಕರ್ತವ್ಯವನ್ನು ನೆರವೇರಿಸಲು ಸಾಧಕವೆಂದು ತೋರಿರುವ ಮಾರ್ಗಗಳಲ್ಲಿ ಈ ವಿಶೇಷ ಸಾಹಿತ್ಯೋತ್ಸವದ ಉಪನ್ಯಾಸಮಾಲೆ ಒಂದಾಗಿದೆ.

## ಪ್ರಕೃತ ಕಾಲದ ವಿಚಾರಗಳು

ಆದದ್ದರಿಂದಲೇ ಈ ಉಪನ್ಯಾಸಗಳನ್ನು ಆಧುನಿಕ ವಿಚಾರೋಪನ್ಯಾಸಗಳೆಂದು ಕರೆದಿದೆ. ಪೂರ್ವಕಾಲದಲ್ಲಿ ಕಾವ್ಯ ಇತಿಹಾಸಗಳೂ ಮತಧರ್ಮಗ್ರಂಥಗಳೂ ಪ್ರಪಂಚದ ಸ್ಥಿತಿಯ ಮೇಲೆ ಎಷ್ಟು ಮಾತ್ರ ಪರಿಣಾಮವನ್ನು ಮಾಡುತ್ತಿದ್ದವೋ ಅದಕ್ಕಿಂತ ಹೆಚ್ಚಾಗಿ ಈಗ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ಮೊದಲಾದ ಪ್ರಕೃತಿವಿಜ್ಞಾನಶಾಖೆಗಳೂ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಮೊದಲಾದ ಸಮಾಜವಿಜ್ಞಾನಶಾಖೆಗಳೂ ಪ್ರಪಂಚದ ಸ್ಥಿತಿಗತಿಗಳನ್ನು ಮಾರ್ಪಡಿಸುತ್ತಿವೆ. ನಮ್ಮ ಕಾಲವನ್ನು ವಿಜ್ಞಾನದ ಯುಗವೆಂದು ವ್ಯವಹರಿಸುವುದು ಎಲ್ಲರಿಗೂ ತಿಳಿದಿರುವ ಸಂಗತಿ. ವಿಜ್ಞಾನದ ಮಹಿಮೆಯಿಂದ ಬದಲಾಗುತ್ತಿರುವುದು ನಮ್ಮ ಹೊರಗಿನ ಜೀವನದ ಪರಿಸ್ಥಿತಿಗಳು ಮಾತ್ರವೇ ಅಲ್ಲ; ಈ ಬಾಹ್ಯವ್ಯತ್ಯಾಸಗಳ ಫಲಿತಾಂಶವಾಗಿಯೂ, ಅದಕ್ಕಿಂತ ಹೆಚ್ಚಾಗಿ ವಿಜ್ಞಾನಪ್ರಕ್ರಿಯೆಯಿಂದ ಬುದ್ಧಿಗೆ ಆಗುತ್ತಿರುವ ವಿಮರ್ಶನಪ್ರೇರಕವಾದ ಶಿಕ್ಷಣದಿಂದಲೂ ನಮ್ಮಗಳ ಅಂತರಂಗಜೀವನ ಸಹ ಬದಲಾವಣೆಯನ್ನು

ಹೊಂದುತ್ತಿದೆ. ಇಂಥ ಕಾಲದಲ್ಲಿ ಕನ್ನಡಿಗರು ವಿಜ್ಞಾನದ ಸ್ವರೂಪವೆಂಥಾದ್ದು, ಅದರ ಪ್ರಭಾವವೆಂಥಾದ್ದು ಎಂಬುದನ್ನು ತಿಳಿದುಕೊಳ್ಳುವುದು ಅವರ ಜೀವನಧರ್ಮಕ್ಕೆ ಸೇರಿದ ಒಂದು ಕರ್ತವ್ಯವಾಗಿರುತ್ತದೆ. ಅದಕ್ಕೆ ಸಹಾಯ ವನ್ನೊದಗಿಸಬೇಕೆಂಬುದು ಪರಿಷತ್ತಿನ ಆಶೆ.

ಈ ಉಪನ್ಯಾಸಮಾಲೆಯಿಂದ ಅಪೇಕ್ಷಿಸಬಹುದಾದ ಪ್ರಯೋಜನಗಳು ಅನೇಕ. ಮೊದಲನೆಯದಾಗಿ, ನಮ್ಮ ದೇಶದ ಭವಿಷ್ಯಕ್ಕೆ ಈಗ ಯಾರು ತಳಹದಿ ಕಟ್ಟುತ್ತಿದ್ದಾರೆಯೋ ಅಂಥ ಉಪಾಧ್ಯಾಯರು ಈಗ ಪ್ರಪಂಚವು ಬದುಕುತ್ತಿರುವ ರೀತಿಗಳನ್ನು ಅರಿತುಕೊಳ್ಳಬೇಕೆಂಬುದು ನಮ್ಮ ಮನೋಗತ. ಅವರು ಚರಿತ್ರೆ, ಭೂಗೋಳ, ವಾಣಿಜ್ಯ, ವ್ಯವಸಾಯ ಮೊದಲಾದ ನಾನಾ ಲೋಕವ್ಯಾಪಾರವಿಷಯಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಬೇಕಾಗಿರುವು ದಷ್ಟೆ? ಈ ನಾನಾ ವಿಷಯಗಳಿಗೂ ಪ್ರಪಂಚದ ಜೀವನಕ್ಕೂ ಇರತಕ್ಕ ಸಂಬಂಧ ಎಂಥಾದ್ದು? ಈ ವಿಷಯಗಳು ವಿಜ್ಞಾನದ ಅಭಿವೃದ್ಧಿಯಿಂದ ಹೇಗೆ ಹೇಗೆ ರೂಪಾಂತರಗಳನ್ನು ಹೊಂದುತ್ತಿವೆ?—ಎಂಬೀ ವಿವರಗಳನ್ನು ಅವರು ಚೆನ್ನಾಗಿ ಅರಿತುಕೊಂಡಿದ್ದ ಹೊರತು ಅವರ ಪಾಠವು ಎಷ್ಟು ಫಲ ಕಾರಿಯಾಗಬೇಕಾದದ್ದು ಯುಕ್ತವೋ ಅಷ್ಟು ಹೆಚ್ಚಾಗಿ ಫಲಕಾರಿಯಾಗ ಲಾರದು. ವಿದ್ಯಾರ್ಥಿಗೆ ಒಂದು ಮಿಳ್ಳೆಯಷ್ಟು ತಿಳಿವಳಿಕೆಯನ್ನು ಕೊಡ ಬೇಕಾದರೆ ಬೋಧಕನಲ್ಲಿ ಒಂದು ಕೊಡದಷ್ಟು ಆ ಹಾಲು ತುಂಬಿರಬೇಕು. ಗೊತ್ತಾದ ಪಠ್ಯಪುಸ್ತಕದಲ್ಲಿ ಎಷ್ಟು ಕೊಟ್ಟಿರುತ್ತದೆಯೋ ಅಷ್ಟನ್ನು ಮಾತ್ರವೇ ಆತನು ತಿಳಿದುಕೊಂಡಿದ್ದರೆ ಸಾಲದು. ಪಠ್ಯಪುಸ್ತಕವೆಂಬ ಸಣ್ಣ ಚಿತ್ರಕ್ಕೆ ಭಿತ್ತಿಯಂತೆ ಆಧಾರವಾಗಿರುವ ವಿಶಾಲಶಾಸ್ತ್ರಭಾಗವನ್ನು ಅವನು ಕೂಡಿದ ಮಟ್ಟಿಗೂ ಪರಿಚಯಮಾಡಿಕೊಂಡಿರಬೇಕು. ಆ ಬಗೆಯ ಪೀಠಿಕಾ ಪ್ರಾಯವಾದ ವಿಸ್ತೀರ್ಣಜ್ಞಾನವನ್ನು ಸಾಧ್ಯವಾಗುವಷ್ಟು ಒದಗಿಸ ಬೇಕೆಂಬುದು ಈ ಉಪನ್ಯಾಸಗಳ ಆಶಯ.

## ಸಾರ್ವಜನಿಕರಿಗೆ

ಆದರೆ ಪರಿಷತ್ತಿನ ಗಮನದಲ್ಲಿರುವವರು ಉಪಾಧ್ಯಾಯರು ಮಾತ್ರವೇ ಅಲ್ಲ. ಯಾರುಯಾರು ಜ್ಞಾನಪ್ರಸಾರದಲ್ಲಿ ಆಸಕ್ತರಾಗಿರುವರೋ, ಯಾರು ಯಾರಿಗೆ ವಿದ್ಯಾಪ್ರಚಾರದಲ್ಲಿ ಶ್ರದ್ಧೆಯುಂಟೋ ಅಂಥವರೆಲ್ಲರಿಗೂ ಈ ಉಪ ನ್ಯಾಸಗಳು ಇಷ್ಟವಾದಾವೆಂಬುದು ಪರಿಷತ್ತಿನ ನಿರೀಕ್ಷಣೆ. ಸಿಜವಾಗಿ ಈ ಉಪನ್ಯಾಸವಿಷಯಗಳು ಪ್ರತಿಯೊಬ್ಬ ಪ್ರಬುದ್ಧನಾದ ಪ್ರಜೆಗೂ ಇರಬೇಕಾದ

ಜ್ಞಾನದ ಅಂಗಗಳು. ತನ್ನ ದೇಶದ ವಿಷಯದಲ್ಲಿ ತನಗಿರುವ ಕರ್ತವ್ಯ ವೇನೆಂಬುದನ್ನರಿತುಕೊಂಡು, ಸಾರ್ವಜನಿಕ ಹಿತಕ್ಕೆ ಅನುಕೂಲವಾಗುವಂತೆ ಬದುಕಬೇಕೆಂಬ ಪ್ರತಿಯೊಬ್ಬನೂ ಇಂಥಾ ವಿಜ್ಞಾನವಿದ್ಯೆಯನ್ನು ಸಂಪಾದಿಸಿ ಕೊಳ್ಳುವುದು ಆವಶ್ಯಕ. ತತ್ರಾಪಿ, ಜವಾಬ್ದಾರಿಯುಳ್ಳ ಸಾರ್ವಜನಿಕ ಸ್ಥಾನಗಳಲ್ಲಿ ಕುಳಿತಿರುವವರಿಗೆ ಇಂಥ ಲೋಕವಿಜ್ಞಾನವಿಲ್ಲದಿದ್ದರೆ ಅವರ ಧರ್ಮವು ಪರಿಪೂರ್ಣವಾಗಿ ಸಾಗಲಾರದು. ನಮ್ಮ ಮ್ಯುನಿಸಿಪಾಲಿಟಿ, ಡಿಸ್ಟ್ರಿಕ್ಟ್ ಬೋರ್ಡು ಮುಂತಾದ ಪ್ರಾದೇಶಿಕ ಸಂಸ್ಥೆಗಳ ಸದಸ್ಯರೂ, ಪ್ರಜಾಪ್ರತಿನಿಧಿಸಭೆ ಮುಂತಾದ ಸಂಸ್ಥಾನಿಕ ಸಂಸ್ಥೆಗಳ ಸದಸ್ಯರೂ, ಪ್ರಕೃತಿ ವಿಜ್ಞಾನ ಸಮಾಜವಿಜ್ಞಾನಗಳ ಪರಿಚಯವನ್ನು ಸಂಪಾದಿಸಲು ಸ್ವಲ್ಪ ಕಾಲ ವನ್ನು ವಿನಿಯೋಗಿಸಿದರೆ, ಅದು ಅವರಿಗೆ ನಿಷ್ಪ್ರಯೋಜಕವಾಗಲಾರದೆಂದೂ ಅದರಿಂದ ದೇಶಕ್ಕೆ ಉಪಕಾರವೇ ಆದೀತೆಂದೂ ನಾನು ಭಾವಿಸಿದ್ದೇನೆ. ನಮ್ಮ ದೇಶೋದ್ಧಾರಕರು ಸಾಹಿತ್ಯವಿಜ್ಞಾನಗಳು ತಮಗೆ ಅನುಪಯೋಗ ವೆಂದು ತಿಳಿದುಕೊಂಡಿಲ್ಲವೆಂಬುದಾಗಿ ನಾನು ನಂಬಿದ್ದೇನೆ. ವಿಜ್ಞಾನ-ವಿವೇಕ ಗಳಿಲ್ಲದೆ ಪ್ರಜಾಧರ್ಮದ ಆಚರಣೆ ಸಾಂಗವಾಗಲಾರದು.

ಕನ್ನಡಭಾಷೆಗೂ ಈ ಉಪನ್ಯಾಸಮಾಲೆಯಿಂದ ಆಗಬಹುದಾದ ಉಪಕಾರ ಒಂದಿದೆ. ಇಂಥ ವಿಷಯಗಳು ಕನ್ನಡಕ್ಕೆ ಹೊಸವು. ಅವುಗಳಿಗೆ ತಕ್ಕ ಶಬ್ದ ಸಾಮಗ್ರಿ ಕನ್ನಡದಲ್ಲಿ ಸಿದ್ಧವಾಗಿಲ್ಲ. ನಮ್ಮ ವಾಡಿಕೆಯ ಮಾತಿನ ರೀತಿ ಈ ಗಹನವಿಷಯಗಳಿಗೆ ಹೊಂದತಕ್ಕದ್ದಲ್ಲ. ಈ ವಿಷಯಗಳು ತೊಡಕುಳ್ಳವು. ಅವುಗಳ ಸಿಕ್ಕುಗಳನ್ನೆಲ್ಲ ಕನ್ನಡದಲ್ಲಿ ಬಿಡಿಸಿ ತೋರಿಸುವುದು ಕಷ್ಟದ ಕೆಲಸ. ಹೀಗಿದ್ದರೂ ಈ ಕೆಲಸವನ್ನು ಎಂದಾದರೊಂದು ದಿನ ಕೈಗೆ ತೆಗೆದುಕೊಂಡಲ್ಲದೆ ನಮ್ಮ ಭಾಷೆಯೂ ನಮ್ಮ ಜನವೂ ಮೇಲಕ್ಕೇರುವ ಆಶೆ ಇಲ್ಲ. ಯಾರು ಇಂದೇ ಧೈರ್ಯಮಾಡಿ ಈ ಕಾರ್ಯಕ್ಕೆ ತೊಡಗುವರೋ ಅವರು ಮಾರ್ಗ ಕರ್ತರೆಂಬ ಯಶಸ್ಸಿಗೆ ಅರ್ಹರಾಗುವರು. ಅವರೇ ನಮ್ಮ ಹಳೆಯ ಭಾಷೆ ಯನ್ನು ಈ ಹೊಸ ಹೊಸ ವಿಷಯಗಳಿಗೆ ಪಳಗಿಸಿಕೊಡತಕ್ಕವರು. ಅವರ ಉಪಯೋಗದ ಮೂಲಕ ಭಾಷೆ ಬೆಳೆದು, ಹೊಸ ಶಬ್ದಸಂಪತ್ತನ್ನು ಗಳಿಸಿ ಬಲಿಷ್ಠವಾಗುವುದು. ಜಟಿಲವೂ ಸೂಕ್ಷ್ಮವೂ ಆದ ವಿಷಯಗಳ ಸೇವಾವಕಾಶ ವನ್ನು ಭಾಷೆಗೆ ತಪ್ಪಿಸಿದರೆ, ಅದು ವ್ಯಾಯಾಮಹೀನನಾದ ಮನುಷ್ಯನಂತೆ ದುರ್ಬಲವಾಗಿ ಕ್ಷಯಿಸುವುದು. ಕನ್ನಡ ಮಾತುಗಳನ್ನು ಬಗೆಬಗೆಯ ಪ್ರಸಂಗ ಗಳಿಗೆ ಹಚ್ಚಿ ತೀಡಬೇಕು; ವಾದವಿವಾದಗಳಲ್ಲಿ ನಾಡಬೇಕು; ಅನ್ಯಭಾಷಾ ಪದಗಳ ಸಂಪರ್ಕಸಂಘರ್ಷಣೆಗಳಿಗೆ ಅವನ್ನು ಸಿಕ್ಕಿಸಬೇಕು; ಪಾರಿಭಾಷಿಕ

ಶಬ್ದಗಳ ಹೊರೆಯನ್ನು ಅವುಗಳ ಮೇಲೆ ಹೊರಿಸಬೇಕು. ಹೀಗೆ ನಮ್ಮ ಭಾಷೆಯ ಶರೀರಕ್ಕೆ ಸಾವಿಯ ಮಾಡಿಸಿದಲ್ಲದೆ ಅದಕ್ಕೆ ಶಕ್ತಿಯೂ ಅಂಗಲಾಘವವೂ ಉಂಟಾಗದು. ಈ ಬಗೆಯ ವ್ಯಾಯಾಮಕ್ಕೆ ಕನ್ನಡವು ಅರ್ಹವಾಗಿದೆಯೆಂಬುದು ನಮ್ಮ ಕಳೆದ ವರ್ಷದ ಅನುಭವದಿಂದ ಸಿದ್ಧವಾಗಿದೆ.

## ವಿದ್ಯಾಭ್ಯಾಸಕ್ರಮದಲ್ಲಿ ಕನ್ನಡ

ಈ ಸಂದರ್ಭದಲ್ಲಿ ನಾನು ವಿಜ್ಞಾಪಿಸಬೇಕಾಗಿರುವ ಸಂತೋಷದ ಸಂಗತಿ ಒಂದು ಇದೆ. ಕಳೆದ ವರ್ಷ ಈ ಸಂದರ್ಭದಲ್ಲಿ ಮಾತನಾಡಿದಾಗ ನಾನು ಈ ರೀತಿ ವಿಜ್ಞಾಪನೆಮಾಡಿದೆ:—

"ನಮ್ಮ ದೇಶದಲ್ಲಿ ಈಗ ರೂಢಿಯಲ್ಲಿರುವ ವಿದ್ಯಾಭ್ಯಾಸಕ್ರಮದಲ್ಲಿ ಇಂಗ್ಲಿಷು ಭಾಷೆಗಿರುವ ಪ್ರಾಧಾನ್ಯದ ಕಾರಣದಿಂದ ವಿದ್ಯಾರ್ಥಿಗಳಿಗೆ ಆಯುಸ್ಸಿನ ವ್ಯರ್ಥವ್ಯಯವೂ ಶಕ್ತಿಯ ವ್ಯರ್ಥವ್ಯಯವೂ ಅತಿಯಾಗಿ ಆಗುತ್ತಿವೆ. ನಮ್ಮ ವಿದ್ಯಾರ್ಥಿಗಳಿಗೆ ಈಗಿರುವ ಕಷ್ಟವು ಎರಡು ಬಗೆಯದು--ಒಂದು ವಿಷಯನವೀನತೆಯಿಂದ ಆಗಿರುವುದು ; ಇನ್ನೊಂದು ಭಾಷಾನವೀನತೆಯಿಂದ ಆಗಿರುವುದು. ಅವರು ಹೊಸ ವಿಷಯವನ್ನು ತಿಳಿದುಕೊಳ್ಳುವುದಕ್ಕಾಗಿ ಹೊಸ ಭಾಷೆಯನ್ನು ಕಲಿತುಕೊಳ್ಳುವುದಕ್ಕೆ ಬೇಕಾಗಿರುವ ಕಾಲವ್ಯಯ ಶಕ್ತಿವ್ಯಯಗಳಲ್ಲಿ, ವಿಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಬೇಕಾದ ಕಾಲವೂ ಶಕ್ತಿಯೂ ಅವರಿಗೆ ಉಳಿಯದಂತಾಗಿದೆ. ಜ್ಞಾನಕ್ಕೆ ಕೊಡಬೇಕಾದ ಗಮನವನ್ನು ಈಗ ಅವರು ಜ್ಞಾನದ ಹೊದಿಕೆಗೆ ಕೊಡಬೇಕಾಗಿ ಬಂದಿದೆ. ಕೊಬರಿಗೆ ಸಲ್ಲಬೇಕಾದ ಗಮನವನ್ನು ಕರಟಕ್ಕೆ ಸಲ್ಲಿಸಬೇಕಾಗಿದೆ. ಇದುವರೆಗೂ ನಮ್ಮ ದೇಶದಲ್ಲಿ ಈ ಕಷ್ಟವು ಅನಿವಾರ್ಯವಾಗಿತ್ತು. ಈಗಲಾದರೋ ಇಂಗ್ಲಿಷು ಭಾಷೆಯೊಳಗಿನ ತಿರುಳು ನಮ್ಮ ಭಾಷೆಯಲ್ಲಿಯೇ ದೊರೆಯುವಂತಾಗಿದೆ. ಐರೋಪ್ಯ ಭಾಷೆಗಳಲ್ಲಿ ಸಾರಭೂತವಾದ ವಿಷಯಗಳನ್ನೂ ಶ್ರೇಷ್ಠಗ್ರಂಥಗಳನ್ನೂ ಕನ್ನಡದಲ್ಲಿ ರೂಪಾಂತರಗೊಳಿಸಿಕೊಡಲು ವಿದ್ವಾಂಸರು ಈಗ ಸಿದ್ಧರಾಗುತ್ತಲಿದ್ದಾರೆ. ಆಧುನಿಕ ವಿಜ್ಞಾನಶಾಸ್ತ್ರಗಳನ್ನೂ ಸಮಾಜಶಾಸ್ತ್ರಗಳನ್ನೂ ಕನ್ನಡದಲ್ಲಿ ಪ್ರತಿಪಾದಿಸಿ ಹೇಳುವುದು ಈಗ ಸಾಧ್ಯವೆಂದು ಇಲ್ಲಿ ಸಾಕ್ಷಾತ್ತಾಗಿ ತೋರುತ್ತಿದೆ. ನಮ್ಮ ವಿದ್ಯಾರ್ಥಿಗಳ ಮೇಲಿರುವ ಇಂಗ್ಲಿಷಿನ ಹೊರೆಯನ್ನು ಇಳಿಸಲು ಈಗ ಸಕಾಲವಾಗಿದೆ."

ಈ ಅರ್ಥದ ಅರಿಕೆಗಳನ್ನು ನಮ್ಮ ಸರಕಾರದವರು ಲಾಲಿಸಿ, ಸಂಸ್ಥಾನದ ಹೈಸ್ಕೂಲುಗಳಲ್ಲಿ ಕನ್ನಡ ವಿದ್ಯಾರ್ಥಿಗಳಿಗೆ ಚರಿತ್ರೆ ಭೂಗೋಳ ಗಣಿತಗಳನ್ನು ಕನ್ನಡದಲ್ಲಿಯೇ ಬೋಧಿಸುವಂತೆ ಈಚೆಗೆ ಅಪ್ಪಣೆ ದಯಪಾಲಿಸಿದ್ದಾರೆ. ಇದು ಪರಿಷತ್ತಿಗೆ ಅತ್ಯಂತ ತೃಪ್ತಿಕರವಾದ ಮತ್ತು ಪ್ರೋತ್ಸಾಹಕರವಾದ ಸಂಗತಿಯಾಗಿದೆ. ಇನ್ನು ಸ್ವಲ್ಪಕಾಲದಲ್ಲಿಯೇ ವಿಜ್ಞಾನಶಾಸ್ತ್ರ ಮೊದಲಾದ ಎಲ್ಲ ಬಗೆಯ ಭಾಷೇತರ ವಿಷಯಗಳನ್ನೂ ಕನ್ನಡ ಹುಡುಗರಿಗೆ ಕನ್ನಡದಲ್ಲಿಯೇ

ಕಲಿಸುವಂತೆ ನಮ್ಮ ಸರಕಾರದವರು ಏರ್ಪಡಿಸಿಯಾರೆಂದು ಪರಿಷತ್ತು ಕುತೂಹಲದಿಂದ ನಿರೀಕ್ಷಿಸಿಕೊಂಡಿದೆ.

ಮದರಾಸು, ಬೊಂಬಾಯಿ, ಬಂಗಾಳ ಮೊದಲಾದ ಪ್ರಾಂತಗಳಲ್ಲಿಯೂ ಇದೇ ತೆರದ ಸುಧಾರಣೆ ಈಗ ನಡೆಯುತ್ತಿದೆ. ಈ ಬಗೆಯ ತಿದ್ದುಪಾಟಿನಿಂದ ಇಂಗ್ಲಿಷಿನ ಸ್ಥಾನಕ್ಕೆ ಹಾನಿ ಬಂದೀತೆಂಬ ಭೀತಿಗೆ ಎಷ್ಟುಮಾತ್ರವೂ ಕಾರಣವಿಲ್ಲ. ನಮ್ಮ ಸಂಸ್ಥಾನದೊಳಗೂ ಹೊರಗಡೆಯೂ ಈ ವಿಚಾರದಲ್ಲಿ ಪ್ರಯೋಗ ಪರೀಕ್ಷೆಗಳನ್ನು ನಡಸಿರುವ ಉಪಾಧ್ಯಾಯರುಗಳು,* ಯಾವ ವಿದ್ಯಾರ್ಥಿಗೆ ತನ್ನ ದೇಶಭಾಷೆಯಲ್ಲಿ ಪರಿಶ್ರಮ ಹೆಚ್ಚಾಗಿರುವುದೋ ಅವನಿಗೆ ಇಂಗ್ಲಿಷು ಭಾಷೆಯಲ್ಲಿಯೂ ಯೋಗ್ಯತೆಯು ಹೆಚ್ಚಾಗಿ ಬಂದಿರುವುದೆಂಬುದನ್ನು ಪ್ರಮಾಣಪೂರ್ವಕವಾಗಿ ತೋರಿಸಿಕೊಟ್ಟಿರುತ್ತಾರೆ. ಈ ಸಿದ್ಧಾಂತವು ಸ್ವಭಾವದ ನಿಯಮಕ್ಕೆ ಅನುಸಾರವಾದದ್ದಾಗಿಯೇ ಇದೆ. ಮನುಷ್ಯನು ಕಲಿಯಬೇಕೆನ್ನುವ ಭಾಷೆಗಳು ಎಷ್ಟೇ ಆಗಿದ್ದರೂ ಅವೆಲ್ಲಕ್ಕೂ ಸಾಧಕವಾದ ಬುದ್ಧಿಶಕ್ತಿ ಒಂದೇ ಆಗಿರುತ್ತದೆ. ಅದನ್ನು ವ್ಯಾಕರಣಶಕ್ತಿಯೆನ್ನಬಹುದು. ಆ ಅಂತರಂಗಶಕ್ತಿಯನ್ನು ಶಿಕ್ಷಿಸಿ ಪೋಷಿಸಿದರೆ ಅದು ಯಾವ ಭಾಷೆಗೆ ಬೇಕಾದರೂ ಒದಗಿಬರುವುದು. ಆದರೆ ಅದರ ಶಿಕ್ಷಣ ಪೋಷಣಗಳು ಮಾತ್ರ ದೇಶಭಾಷೆಯಲ್ಲಿ ನಡೆಯುವಷ್ಟು ಚೆನ್ನಾಗಿ ಮತ್ತಾವಭಾಷೆಯಲ್ಲೂ ನಡೆಯಲಾರವು. ಕನ್ನಡವ್ಯಾಕರಣದ ಸ್ವರೂಪವನ್ನೂ ಮರ್ಮಗಳನ್ನೂ ಅರಿತುಕೊಂಡವನಿಗೆ ಇಂಗ್ಲಿಷಿನ ವ್ಯಾಕರಣವನ್ನು ಸಾಧಿಸಲು ಹೆಚ್ಚಿನ ಪ್ರಯಾಸ ಬೇಕಾಗಲಾರದು. ತನ್ನ ಭಾಷೆಯಲ್ಲಿ ಪ್ರಾವೀಣ್ಯವಿದ್ದಷ್ಟೂ ಅನ್ಯಭಾಷೆ ಅವನಿಗೆ ಸುಲಭವಾದೀತು. ಹೀಗಿರುವುದರಿಂದ ನಮ್ಮ ವಿದ್ಯಾರ್ಥಿಗಳು ಇಂಗ್ಲಿಷನ್ನೂ ಇತರ ಅನ್ಯಭಾಷೆಗಳನ್ನೂ ಚೆನ್ನಾಗಿ ಕಲಿಯಬೇಕಾದರೆ, ಅವರ ಭಾಷಾಗ್ರಹಣಶಕ್ತಿಯನ್ನು ಕನ್ನಡದಲ್ಲಿ ಚೆನ್ನಾಗಿ ಬಲಪಡಿಸಿರಬೇಕು. ಕನ್ನಡ ಚೆನ್ನಾಗಿ ಬಂದವನಿಗೆ ಇಂಗ್ಲಿಷು ಚೆನ್ನಾಗಿ ಬರುವುದು ಸುಲಭ.

## ವ್ಯಾಕರಣ ಪಾಠದ ಆವಶ್ಯಕತೆ

ಹೀಗೆಂದಮೇಲೆ, ನಮ್ಮ ಮಿಡ್ಲ್ ಸ್ಕೂಲು ಹೈಸ್ಕೂಲುಗಳಲ್ಲಿ ಕನ್ನಡದ ಶಿಕ್ಷಣವು ಅತ್ಯುತ್ತಮ ರೀತಿಯಲ್ಲಿ ನಡೆಯಬೇಕೆನ್ನಲು ಈಗ ಹೊಸದಾಗಿ

---

* Report of the National Education Society, Bangalore (ಕ|| ಸಾ|| ಪರಿಷತ್ಪತ್ರಿಕೆ, ಸಂ|| ೧೯—೩, ಅಕ್ಟೋಬರ್ ೧೯೩೪, ಪುಟ ೩೧೫) and an article entitled " English and the Vernacular" in *The Hindu*—Educational and Literary Supplement of 5th March 1935.

ಇನ್ನೊಂದು ಕಾರಣವನ್ನು ಕೊಟ್ಟಂತಾಯಿತು. ಇನ್ನು ಮುಂದೆ ಕನ್ನಡದ ಬೋಧಕರ ಮೇಲಿನ ಜವಾಬ್ದಾರಿ ದ್ವಿಗುಣವಾಗಿರುತ್ತದೆ. ವಿದ್ಯಾರ್ಥಿಗೆ ಇಂಗ್ಲಿಷ್ ಚೆನ್ನಾಗಿ ಬರಬೇಕಾದರೂ ಅದಕ್ಕೆ ಮೂಲಸಹಾಯಕರ್ತರು ಅವರೇ. ಈಚೆಗೆ ಕೆಲವು ವರ್ಷಗಳಿಂದ ಕನ್ನಡದ ಪಾಠಕ್ರಮದಲ್ಲಿ ವ್ಯಾಕರಣ ಭಾಗಕ್ಕೆ ಗ್ರಹಣ ಕವಿದಿದ್ದಂತೆ ತೋರುತ್ತದೆ. ಇನ್ನು ಮುಂದೆ ಇಂಗ್ಲಿಷಿನ ಭದ್ರತೆಯನ್ನು ಕಾಪಾಡಬೇಕೆಂಬ ಕಾರಣದಿಂದಲಾದರೂ ಕನ್ನಡದ ಅಡಿಗಲ್ಲು ಭದ್ರಪಟ್ಟೀತೆಂದು ನಾವು ನಂಬಬಹುದಾಗಿದೆ. ಪೂರ್ವದಲ್ಲಿ ಹೇಳಿಕೊಡುತ್ತಿದ್ದಂತೆ ಕನ್ನಡ ಗದ್ಯಪದ್ಯಗಳ ಪಾಠಗಳನ್ನು ಹೇಳುವಾಗ ಶಬ್ದಸೌಷ್ಠವ, ಸಂಧಿ, ಸಮಾಸ, ಅನ್ವಯ ಮೊದಲಾದ ವ್ಯಾಕರಣಾಂಶಗಳಿಗೆ ನಮ್ಮ ಉಪಾಧ್ಯಾಯರು ಹೆಚ್ಚು ಗಮನಕೊಟ್ಟಾರೆಂದು ನಿರೀಕ್ಷಿಸಬಹುದಾಗಿದೆ.*

---

* ನಮ್ಮ ಪಾಠಶಾಲೆಗಳಲ್ಲಿ ಹಿಂದೆ—೧೫-೨೦ ವರ್ಷಗಳ ಕೆಳಗೆ—ರೂಢಿಯಲ್ಲಿದ್ದ ಪಾಠಕ್ರಮ ಈಚೆಗೆ ತಪ್ಪಿಹೋಗಿದೆ. ಆಗಿನ ಕನ್ನಡ ಸಾಹಿತ್ಯೋಪಾಧ್ಯಾಯರು ಅಲ್ಪಸ್ವಲ್ಪ ಸಂಸ್ಕೃತ ಬಲ್ಲವರಾಗಿ, ಸಾಂಪ್ರದಾಯಿಕವಾದ ಸಂಸ್ಕಾರ ಪಡೆದವರಾಗಿರುತ್ತಿದ್ದರು. ಅವರ ಪಾಠರೀತಿಯು ಪೂರ್ವಕಾಲದ ಸಂಸ್ಕೃತ ಪಂಡಿತರ ರೀತಿಯನ್ನನುಸರಿಸಿ, ವ್ಯಾಕರಣ ನಿಘಂಟುಗಳ ಮೇಲೆ ಹೆಚ್ಚು ಗಮನವಿಟ್ಟಿರುತ್ತಿತ್ತು. ಕಾವ್ಯಪಾಠಕಾಲದಲ್ಲಿ ಶಬ್ದೋಚ್ಚಾರಣೆ, ಪದವಿಭಾಗ, ಸಂಧಿ, ಅವಯವಾರ್ಥ, ಸಮಾಸ, ಅನ್ವಯ, ಪೂರ್ವಕಥೆ—ಇವೇ ಮೊದಲಾದ ಅಂಶಗಳಿಗೆ ವಿದ್ಯಾರ್ಥಿಯ ಗಮನವನ್ನು ಅವರು ಸೆಳೆಯುತ್ತಿದ್ದರು. ಈಚೆಗೆ ಆ ತೆರದ ಬೋಧಕರು ಕಡಮೆಯಾಗಿದ್ದಾರೆಂದು ತೋರುತ್ತದೆ. ಈಚಿನ ಶಿಕ್ಷಣಪದ್ಧತಿಯಲ್ಲಿ ವ್ಯಾಕರಣ ನಿಘಂಟುಗಳಿಗೆ ಅಷ್ಟುಮಟ್ಟಿನ ಪ್ರಾಶಸ್ತ್ಯ ಇರುವಂತೆ ತೋರುವುದಿಲ್ಲ. ಈಚೀಚಿನ ಪಠ್ಯಪುಸ್ತಕಗಳು ಸಹ ಭಾಷಾಬೋಧನೆಗೆ ಹೆಚ್ಚು ಅನುಕೂಲವಾಗಿಲ್ಲವೆಂದು ಹೇಳುವವರಿದ್ದರೂ ಇರಬಹುದು. ಈಚಿನ ಗ್ರಂಥಗಳಲ್ಲಿ ಇಂಗ್ಲಿಷಿನಿಂದ ಸಂಗ್ರಹಿಸಿದ ವಿಜ್ಞಾನಸಂಬಂಧವಾದ ಮತ್ತು ಸಾಂಪ್ರತಲೋಕದ ವಿಚಾರಗಳು ಹೆಚ್ಚಾಗಿರುವುದರಿಂದ, ಈ ಗ್ರಂಥಗಳು ಕನ್ನಡ ಬೋಧಕರಿಗೆ ತಕ್ಕಷ್ಟು ವಶವಾಗಿಲ್ಲವೆಂದು ಹೇಳುವವರಿದ್ದರೂ ಇರಬಹುದು. ನಮ್ಮ ಭಾಷಾಶಿಕ್ಷಣವು ಹದಗೆಟ್ಟಿರುವುದಕ್ಕೆ ಇರುವ ಕಾರಣ ಒಂದೇ ಅಲ್ಲ; ಅವು ಹತ್ತಾರಿರಬಹುದು. ಅವುಗಳನ್ನೆಲ್ಲ ವಿಚಾರಿಸಿ ಈಗಣ ಪರಿಸ್ಥಿತಿಯನ್ನು ತಿದ್ದಿ ಉತ್ತಮಪಡಿಸುವ ಮಾರ್ಗವನ್ನು ಆಲೋಚಿಸುವುದು ನಮಗೆಲ್ಲ ಕರ್ತವ್ಯವಾಗಿದೆ.

"ಕನ್ನಡವೊಂದರ ದೃಷ್ಟಿಯಿಂದ ಮಾತ್ರವೇ ಅಲ್ಲ, ಕನ್ನಡಿಗನು ಕಲಿಯಬೇಕಾಗಿರುವ ಇಂಗ್ಲಿಷ್ ಮೊದಲಾದ ಭಾಷೆಗಳ ದೃಷ್ಟಿಯಿಂದ ಸಹ ಅವನ ವ್ಯಾಕರಣಜ್ಞಾನ ಸಾಧುವಾಗಿರುವುದು ಅವಶ್ಯವಾಗಿದೆ. ವ್ಯಾಕರಣ ತತ್ತ್ವಗಳು ಯಾವುದಾದರೊಂದು ಭಾಷೆಯಲ್ಲಿ ಮೊದಲು ವಿದ್ಯಾರ್ಥಿಯ ಸ್ವಾಧೀನಕ್ಕೆ ಬಂದರೆ, ಆಮೇಲೆ ಅವನು ಅದೇ ತತ್ತ್ವಗಳನ್ನು ಇತರ ಭಾಷೆಗಳಿಗೆ ಅನ್ವಯಿಸಿಕೊಳ್ಳುವುದು ಸುಲಭವಾಗುತ್ತದೆ. ೨೦-೩೦ ವರ್ಷಗಳ ಹಿಂದೆ ಇಂಗ್ಲಿಷ್ ಕಲಿಯಹೊರಟ ವಿದ್ಯಾರ್ಥಿ ಆ ವೇಳೆಗೇ ಕನ್ನಡವನ್ನು ಚೆನ್ನಾಗಿ ಕಲಿತಿರುತ್ತಿದ್ದ

ಬೆಳೆದು ಬದಲಾಯಿಸುತ್ತಿರುವ ಕನ್ನಡಕ್ಕೆ ತಕ್ಕ ವ್ಯಾಕರಣವೊಂದನ್ನು ತಯಾರುಮಾಡಿಸಿಕೊಡುವ ಕೆಲಸವು ನಮ್ಮ ವಿದ್ಯಾಪ್ರಚಾರದ ಇಲಾಖೆಯವರ ದೃಷ್ಟಿಯಲ್ಲಿದೆಯೆಂದು ನಾನು ಕೇಳಿದ್ದೇನೆ. ಈ ಉಪಕರಣವನ್ನು ಪರಿಷತ್ತು ಬಹುಕಾಲದಿಂದ ಬೇಡುತ್ತಿದೆ. ಈ ಕಾರ್ಯದ ಜವಾಬ್ದಾರಿಯನ್ನು ಕೈಕೊಂಡಿರುವ ಮಹನೀಯರು ಅದನ್ನು ಆದಷ್ಟು ಬೇಗ ಪೂರಯಿಸಿಕೊಡಬೇಕೆಂದು ಬೇಡುತ್ತೇನೆ.

ಕನ್ನಡವನ್ನು ನವೀಕರಿಸುವುದು ಪರಿಷತ್ತಿನ ಉದ್ದೇಶವೆಂದು ವಿಜ್ಞಾಪನೆ ಮಾಡಿದೆ. ನವೀಕರಣವೆಂದರೆ ವ್ಯಾಕರಣವನ್ನು ತೊರೆಯುವುದೆಂದೂ ಛಂದಸ್ಸನ್ನು ಮರೆಯುವುದೆಂದೂ ಯಾರೂ ಅರ್ಥಮಾಡಲಾಗದು. ಬೆಳೆಯುತ್ತಿರುವ ಮನುಷ್ಯನಿಗೆ ಅವನ ಅಂಗಾಂಗಗಳ ಪರಿಪುಷ್ಟಿಗೆ ತಕ್ಕಂತೆಲ್ಲ ಅವನ ಉಡುಪು ತೊಡಪುಗಳನ್ನು ವಿಶಾಲಪಡಿಸುತ್ತ ಹೋಗಬೇಕಾಗುವಂತೆ, ಬೆಳೆಯುತ್ತಿರುವ ಭಾಷೆಗೆ ಅದರ ವೃದ್ಧಿಗೆ ತಕ್ಕಂತೆ ವ್ಯಾಕರಣಾದಿ ಶಾಸ್ತ್ರಗಳನ್ನು ವಿಶಾಲಪಡಿಸುತ್ತ ಹೋಗಬೇಕಾಗುವುದು ಸ್ವಾಭಾವಿಕವಾಗಿದೆ. ವಾಸ್ತವವಾಗಿ, ಈಗ ಕನ್ನಡದಲ್ಲಿ ಯಾವ ಯಾವ ಗ್ರಂಥಗಳು ಹೊಸ ಪರಿಯವೆನ್ನಿಸಿಕೊಂಡಿವೆಯೋ ಅವುಗಳಲ್ಲಿ ಶ್ರೇಷ್ಠವಾದವುಗಳನ್ನು ಪರೀಕ್ಷಿಸಿ ನೋಡಿದರೆ, ಅವುಗಳಲ್ಲಿ ವ್ಯಾಕರಣದೃಷ್ಟಿಯಿಂದಾಗಲಿ ಛಂದಸ್ಸಿನ ದೃಷ್ಟಿಯಿಂದಾಗಲಿ ಅಪ

---

ನಾದಕಾರಣ, ಅವನು ಇಂಗ್ಲಿಷ್ ಪಾಂಡಿತ್ಯವನ್ನು ಶುದ್ಧವಾಗಿಯೂ ಸುಲಭವಾಗಿಯೂ ಸಂಪಾದಿಸಲಾಗುತ್ತಿತ್ತು. ಈಗ್ಗೆ ೨೦ ವರ್ಷಗಳ ಹಿಂದೆ ಬಿ. ಎ. ಪ್ಯಾಸ್ ಮಾಡಿದವರ ಇಂಗ್ಲಿಷಿಗಿಂತ ಈಚೆಗೆ ಬಿ. ಎ. ಪ್ಯಾಸ್ ಮಾಡಿರುವವರ ಇಂಗ್ಲಿಷು ಕೀಳ್ಮಟ್ಟದ್ದೆಂದು ಬಹು ಕಡೆ ಹೇಳಿಕೊಳ್ಳುತ್ತಾರೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕೂಡ ಇಂಗ್ಲಿಷಿನ ಮಟ್ಟ ಈಚೀಚೆಗೆ ಕೀಳಾಗುತ್ತಿದೆಯೆಂಬ ಭಾವನೆ ಹಬ್ಬಿ, ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಇಂಗ್ಲಿಷ್ ಪ್ರಶ್ನಪತ್ರಿಕೆಗಳು ಎರಡಿದ್ದುದನ್ನು ಮೂರು ಮಾಡಿದ್ದಾರೆ. ಇಂಗ್ಲಿಷ್ ವ್ಯಾಕರಣ ಭಾಷಾಜ್ಞಾನಗಳು ಈ ಮೂರನೆಯ ಪ್ರಶ್ನಪತ್ರಿಕೆಯ ವಿಷಯವಾಗಿದೆ. ಆದರೆ ಇಂಗ್ಲಿಷ್ ಭಾಷಾಜ್ಞಾನವನ್ನು ಅಭಿವೃದ್ಧಿಪಡಿಸುವ ದಾರಿ ಕಾಲೇಜಿನಲ್ಲಿ ವ್ಯಾಕರಣ ಬೋಧನೆ ಮಾಡುವುದಲ್ಲ; ಎಲ್ಲ ಭಾಷೆಗಳಿಗೂ ಸಾಮಾನ್ಯವಾದ ತಳಹದಿಯಾಗಿರುವ ವ್ಯಾಕರಣಬುದ್ಧಿಯನ್ನು ಪ್ರಾರಂಭದಶೆಯಿಂದ ಕುದುರಿಸಿಕೊಂಡು ಬರುವುದು ಅದಕ್ಕೆ ಸರಿಯಾದ ದಾರಿ. ಕಾಲೇಜಿನ ಇಂಗ್ಲಿಷಿಗೆ ತಳಹದಿಯನ್ನು ಬಾಲಪಾಠಶಾಲೆ ಮಾಧ್ಯಮಿಕ ಪಾಠಶಾಲೆಗಳಲ್ಲಿ ಕನ್ನಡದಲ್ಲಿ ಹಾಕಬೇಕು. ಇಂಗ್ಲಿಷ್ ವ್ಯಾಕರಣಕ್ಕೆ ಕನ್ನಡ ದಾರಿ ಮಾಡಿರಬೇಕು.''

—ಕನ್ನಡ ಸಾಹಿತ್ಯಪರಿಷತ್ತಿನ ವಸಂತಸಾಹಿತ್ಯೋತ್ಸವದ ಅಂಗವಾಗಿ ಏರ್ಪಟ್ಟ ಭಾಷಾಶಿಕ್ಷಣ ವಿಚಾರಗೋಷ್ಠಿಯ ಪ್ರಾರಂಭದಲ್ಲಿ ಅಧ್ಯಕ್ಷಸ್ಥಾನದಿಂದ ತಾ|| ೧೨-೪-೧೯೪೧ರಲ್ಲಿ ಮಾಡಿದ ಭಾಷಣದಿಂದ.

ರಾಧ ನಡೆದಿಲ್ಲವೆಂಬುದು ಸ್ಪಷ್ಟವಾಗುತ್ತದೆ—ಎಂದು ನಾನು ಧೈರ್ಯದಿಂದ ಹೇಳ ತಕ್ಕವನಾಗಿದ್ದೇನೆ. ಈಗ—ಸಾಂಪ್ರದಾಯಿಕ ಪಂಡಿತರು ಯಾವ ವ್ಯಾಕರಣ ಛಂದಸ್ಸುಗಳನ್ನು ಪ್ರಮಾಣವೆಂದು ಅಂಗೀಕರಿಸಿರುತ್ತಾರೋ ಆ ವ್ಯಾಕರಣ ಛಂದಸ್ಸುಗಳು ಹಿಂದಿನ ಬೆಳವಣಿಗೆಯ ಫಲವೆಂಬುದು ಭಾಷಾಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ನಮ್ಮ ದೇಶದಲ್ಲಿ ಭಾಷಾಶಾಸ್ತ್ರದ (Comparative Philology) ಸಾಮ್ಯಾಸಾಮ್ಯ ವಿವೇಚನೆಯು ಈಚೀಚಿನದು. ಈ ಶಾಸ್ತ್ರದ ದೃಷ್ಟಿಯಿಂದ ನೋಡಿದರೆ ಕನ್ನಡ ಭಾಷೆಯ ಚರಿತ್ರೆಯಲ್ಲಿ—ಇತರ ಭಾಷೆಗಳ ಚರಿತ್ರೆಗಳಲ್ಲಿ ಆಗಿರುವಂತೆಯೇ—ಆಗಿಂದಾಗ್ಗೆ ಎಷ್ಟೋ ಬದಲಾವಣೆಗಳು ನಡೆದಿವೆ ಎಂಬುದು ಸಿದ್ಧಪಡುತ್ತದೆ. ಹಿಂದೆ ಭಾಷೆ ಬೆಳೆದಂತೆಯೇ ಈಗಲೂ ಇನ್ನು ಮುಂದೆಯೂ ಭಾಷೆ ಬೆಳೆಯುತ್ತಿರಬೇಕೆಂಬುದು ಸಂಸ್ಕರಣವಾದಿಗಳ ಮತ.

## ವಿಷಯನಾವೀನ್ಯ

ಆದರೆ ನವೀಕರಣವೆಂಬುದು ವ್ಯಾಕರಣ ಛಂದಸ್ಸು ಮೊದಲಾದ ಸಾಹಿತ್ಯದ ಉಪಕರಣಗಳಿಗೆ ಅನ್ವಯಿಸುವುದಕ್ಕಿಂತ ಹೆಚ್ಚಾಗಿ ಸಾಹಿತ್ಯದ ಸಾರ ಸಾಮಗ್ರಿಗೆ ಅನ್ವಯಿಸತಕ್ಕದ್ದಾಗಿದೆ. ನಮ್ಮ ಸಾಹಿತ್ಯದೊಳಕ್ಕೆ ಹೊಸ ಹೊಸ ವಸ್ತು ವಿಚಾರಗಳು ಬರಬೇಕು. ಸಾಹಿತ್ಯದಲ್ಲಿ ಪ್ರಕಾರನವೀನತೆಗಿಂತ ಮುಖ್ಯ ವಾದದ್ದು ವಿಷಯನವೀನತೆ. ವಿಷಯನವೀನತೆಯುಂಟಾಗಬೇಕಾದರೆ ಲೇಖಕರ ಮತ್ತು ಬೋಧಕರ ಅಂತಃಕರಣಕೋಶದಲ್ಲಿ ಪರಿಪರಿಯ ನೂತನ ಜ್ಞಾನಗಳೂ ನೂತನ ಭಾವನೆಗಳೂ ತುಂಬಿರಬೇಕು. ಹೀಗೆ ಗ್ರಂಥಗಳಲ್ಲಿ ನವೀನತೆ ಯುಂಟಾಗಿ ಅದರಿಂದ ಜನಸಾಮಾನ್ಯದ ಮನೋಬುದ್ಧಿಗಳ ವ್ಯಾಪಾರ ದಲ್ಲಿಯೂ ಜೀವನವಿಧಾನದಲ್ಲಿಯೂ ನವೀನತೆಯುಂಟಾದೀತೆಂಬುದು ನಮ್ಮ ಆಶೆ. ಒಂದು ಹೊಸ ಸ್ವತಂತ್ರ ಬುದ್ಧಿಸಂಚಾರ, ಒಂದು ಹೊಸ ವಿಚಾರ ಪರಿಪಾಟಿ, ಒಂದು ಹೊಸ ದೃಷ್ಟಿವಿಶಾಲತೆ, ಒಂದು ಹೊಸ ಪ್ರಪಂಚ ಸಹಾನು ಭೂತಿ, ಒಂದು ಹೊಸ ಜೀವನಕರ್ತವ್ಯ ಯೋಗ್ಯತೆ—ಇವು ನಾವು ಬಯಸುವ ನವೀನತೆಯ ಲಕ್ಷಣಗಳು. ಈ ತೆರದ ಸಾಹಿತ್ಯನವೀನತೆಯು ಜನಜೀವನದ ನವೀನತೆಗೆ ಸಾಧಕವಾದೀತೆಂಬುದು ನಮ್ಮ ನಂಬಿಕೆ.

## ಹಳದು ಹೊಸದು

ಪರಮಾರ್ಥವನ್ನು ವಿಚಾರಮಾಡಿದರೆ, ಹೊಸದು ಹಳದು ಎಂಬ ಭೇದ ಕೇವಲ ಸಂಕೇತಮಾತ್ರದ್ದೆಂದೂ ಅದು ವಾಸ್ತವಿಕವಲ್ಲವೆಂದೂ ಕಾಣಬರು

ತ್ತದೆ. ಈ ಪ್ರಪಂಚದಲ್ಲಿ ಹೊಸದು ಯಾವುದು, ಹಳದು ಯಾವುದು? ಸೂರ್ಯಚಂದ್ರರು ಕೂಡ ಯಾವುದೋ ಒಂದು ಕಾಲದಲ್ಲಿ ಹೊಸಬರಾಗಿದ್ದಿರಬೇಕು. ಶ್ರುತಿಯು ಅವರನ್ನು—

ನವೋನವೋ ಭವತಿ ಜಾಯಮಾನಃ ||

—ಎಂದು ಹೇಳಿ, ಅವರ ದಿನಂಪ್ರತಿಯ ಹೊಸತನವನ್ನು ಕೊಂಡಾಡುತ್ತದೆ. ಪರಮೇಶ್ವರನನ್ನು

ಶಾಶ್ವತೋಽಯಂ ಪುರಾಣಃ ||

ಎಂದು ಹೊಗಳಿರುವ ಶ್ರುತಿಯೇ

ಸದ್ಯೋಜಾತಂ ಪ್ರಪದ್ಯಾಮಿ ||

ಎಂದೂ ಸ್ತುತಿಸಿದೆ. ದೇವತೆಗಳಿಗೆ—

ಸೂಕ್ತೇನ ವಚಸಾ ನವೇನ ||

"ಹೊಸ ಮಾತುಗಳಿಂದ ಹಾಡಿ ಸ್ತೋತ್ರಮಾಡುವೆವು" ಎಂದು ಹೇಳಿ ಋಷಿಗಳು ಅವರನ್ನು ಮೆಚ್ಚಿಸಹೊರಟಿದ್ದಾರೆ. ಉಷಾದೇವಿಯನ್ನು ಕುರಿತು ವೇದವು ಆಡಿರುವ ಮಾತು ಸರಸ್ವತಿಗೂ ಅನ್ವಯಿಸಬಹುದೆಂದು ತೋರುತ್ತದೆ—

ಪುನಃ ಪುನರ್ಜಾಯಮಾನಾ ಪುರಾಣೀ
ಸಮಾನಂ ವರ್ಣಮಭಿಶುಂಭಮಾನಾ ||

"ಮರಳಿ ಮರಳಿ ಹುಟ್ಟುತ್ತಿರುವವಳು; ಹಳಬಳು; ಆದರೂ ಏಕಪ್ರಕಾರದ ಕಾಂತಿಯಿಂದ ಮೆರೆಯುತ್ತಿರುವವಳು." ಹೀಗೆ ನೋಡಿದರೆ ಸಾಹಿತ್ಯ ಆಗಾಗ ನವ್ಯತೆಯನ್ನು ತಾಳುತ್ತಿರುವುದು ಸ್ವಾಭಾವಿಕವಾದದ್ದು ಮತ್ತು ಅನಿವಾರ್ಯವಾದದ್ದು ಎಂದಷ್ಟು ಮಾತ್ರವೇ ಅಲ್ಲ; ಆ ನವ್ಯತೆ ನಮಗೆ ಅಪೇಕ್ಷಣೀಯವೂ ಶುಭಪ್ರದವೂ ಆದದ್ದು ಎಂದು ನಾವು ಕೃತಜ್ಞತೆಯಿಂದ ನೆನಪಿನಲ್ಲಿರಿಸಬೇಕಾಗುತ್ತದೆ.

ಈಗ ನಾನು ಅರಿಕೆ ಮಾಡಿರುವ ಅಭಿಪ್ರಾಯವನ್ನೇ ಮೊನ್ನೆ ನಡೆದ ಪಂಡಿತಮಂಡಲಿಯ ಅಧಿವೇಶನದ ಪ್ರಾರಂಭಭಾಷಣದಲ್ಲಿ ನಮ್ಮ ಸಂಸ್ಥಾನದ ಮುಖ್ಯಮಂತ್ರಿಗಳೂ ಪರಿಷತ್ತಿನ ಮುಖ್ಯ ಸಹಾಯಕರೂ ಆದ ಅಮಿನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಸಾಹೇಬರವರು ವಿಶದೀಕರಿಸಿರುತ್ತಾರೆ. ಅವರ ವಚನಗಳು ಈ ರೀತಿ ಇವೆ:

"ನಾವು ಕೇವಲ ಸಂಪ್ರದಾಯಶರಣರಾಗಿರುವುದನ್ನು ಬಿಟ್ಟುಬಿಡಬೇಕು. ವಿಚಾರ ಪರತೆಗೇ ಅವಕಾಶವಿಲ್ಲದಂತೆ ನಾವು ಸಂಪ್ರದಾಯಬದ್ಧರಾದಲ್ಲಿ ಆಗ್ಗೆ ರಗಳೆಗಿಡುತ್ತದೆ. ಜೀವನಕ್ಕೆ ಸೊಗಸನ್ನು ತುಂಬಿ ಸಂಸ್ಕಾರಗೊಳಿಸಿ ಭವ್ಯತೆಯನ್ನುಂಟುಮಾಡುವ ಸಂಪ್ರದಾಯದ ಅಂಶಗಳನ್ನೆಲ್ಲ ಅಗತ್ಯವಾಗಿ ಕಾಪಾಡಿಕೊಳ್ಳೋಣ. ಆದರೆ, ಅಭ್ಯುದಯಸಾಧನೆಗೇ ಆಗಲಿ, ಪರೀಕ್ಷಾರ್ಥವಾದ ವಿಧವಿಧದ ನೂತನ ಪ್ರಯೋಗಗಳಿಗೇ ಆಗಲಿ ಅವಕಾಶವನ್ನು ತಪ್ಪಿಸಿ ಅಡ್ಡಿಯನ್ನುಂಟುಮಾಡುವ ಸಂಪ್ರದಾಯಬದ್ಧವಾದ ಅಂಶಗಳಿಗೆ ಮಾತ್ರ ನಾವು ಗಮನಕೊಡದೆ ಖಂಡಿತ ಅದರಿಂದ ಮುಖ ತಿರುಗಿಸಲೇಬೇಕು. ಸಮಾಜದಲ್ಲಿ ಒದಗಿರುವ ಪರಿಣಾಮಕರವಾದ ಹೊಸ ಸನ್ನಿವೇಶಗಳನ್ನೂ ಅಂಶಗಳನ್ನೂ ಪಂಡಿತವರ್ಗದವರು ಗಮನಿಸಿ, ಹೊಂದಿಕೆಯಿಂದ ನಡೆಯುವುದಕ್ಕೆ ಪ್ರಬಲವಾದ ಪ್ರಯತ್ನಗಳನ್ನು ಮಾಡಬೇಕು."

ಕನ್ನಡ ಸಾಹಿತಿಗಳಲ್ಲಿ ನವೀನವರ್ಗದವರ ಆಶಯವು ಈ ತೆರನಾಗಿರುವುದರಿಂದ ಪ್ರಾಚೀನವರ್ಗದವರು ಅವರಲ್ಲಿ ಸಹಾನುಭೂತಿ ತೋರಿ ಅವರ ಪ್ರಯತ್ನಗಳಿಗೆ ಮಂಗಳಾಶಾಸನ ಮಾಡಬೇಕೆಂದು ಬೇಡುತ್ತೇನೆ.

ನವೀಕರಣವನ್ನು ಕುರಿತು ನಾನು ಇಷ್ಟು ಹೇಳಿದ್ದರೂ ಪರಿಷತ್ತಿಗೆ ಪ್ರಾಚೀನವಾದದ್ದರಲ್ಲಿ ಅಭಿಮಾನ ಕಡಮೆಯೆಂದು ಯಾರೂ ಭಾವಿಸಲಾರರೆಂದು ತಿಳಿದಿದ್ದೇನೆ. ಪರಿಷತ್ತು ಇದುವರೆಗೆ ಪ್ರಾಚೀನ ಗ್ರಂಥಗಳ ಸಂಶೋಧನೆಗಾಗಿಯೂ ಪ್ರಕಟನೆಗಾಗಿಯೂ ಸಂತತವಾಗಿ ಶ್ರಮಿಸಿದೆ; ಇನ್ನು ಮುಂದೆಯೂ ಪ್ರಾಚೀನ ಸಾಹಿತ್ಯವಿಷಯದಲ್ಲಿ ಈ ಸಂಸ್ಥೆ ಅದೇ ತೆರದ ಶ್ರದ್ಧೆಯನ್ನು ತೋರಿಸುವುದೆಂದು ನಾನು ನಂಬಿಕೊಂಡಿದ್ದೇನೆ. ಪ್ರಾಚೀನಗ್ರಂಥವ್ಯಾಸಂಗದಲ್ಲಿ ಜನಸಾಮಾನ್ಯದ ಅಭಿರುಚಿಯನ್ನು ಹೆಚ್ಚಿಸಿ ಪ್ರಾಚೀನ ಸಾಹಿತ್ಯಜ್ಞಾನವನ್ನು ಪ್ರಚಾರಪಡಿಸುವುದಕ್ಕಾಗಿ ಪರಿಷತ್ತು ಕೈಕೊಳ್ಳಬೇಕೆಂದಿರುವ ಕೆಲಸಗಳು ಬಹುವಾಗಿವೆ. ಅದಕ್ಕೆ ಬೇಕಾದ ಉಪಪತ್ತಿ ದೊರೆತಂತೆಲ್ಲ ಆ ಕಾರ್ಯಗಳನ್ನು ಪರಿಷತ್ತು ಕೈಕೊಂಡೀತು. ಪರಿಷತ್ತು ಈಚೆಗೆ ಪ್ರಾರಂಭಿಸಿರುವ ಆ ಬಗೆಯ ಒಂದು ಕಾರ್ಯವನ್ನು ಈ ಸಂದರ್ಭದಲ್ಲಿ ತಮ್ಮಗಳ ಗಮನಕ್ಕೆ ತರಬಹುದಾಗಿದೆ. ಕನ್ನಡ ಪದ್ಯಕಾವ್ಯಗಳನ್ನು ಕಿವಿಗಿಂಪಾಗುವಂತೆಯೂ ಮನಸ್ಸಿಗೆ ಅರ್ಥಬೋಧೆಯಾಗುವಂತೆಯೂ ಓದುವ ಗಮಕಕಲೆಯಲ್ಲಿ ಶ್ರೀಮಾನ್ ಎಸ್. ಜಿ. ಬಿಂದೂರಾಯರು ಅಗ್ರಗಣ್ಯರೆಂಬುದನ್ನು ಬಹುಶಃ ತಾವೆಲ್ಲರೂ ಬಲ್ಲಿರಿ. ಪರಿಷತ್ತು ಅವರ ಸಹಾಯವನ್ನು ಬೇಡಿ ಗಮಕಕಲಾಭ್ಯಾಸಕ್ಕಾಗಿ ಒಂದು ಗೋಷ್ಠಿಯನ್ನು ಏರ್ಪಡಿಸಿದೆ. ಈ ಗೋಷ್ಠಿಯಲ್ಲಿ ತಯಾರಾದ ಗಮಕಿಗಳು ದೇಶದ ನಾನಾ ಭಾಗಗಳಲ್ಲಿ ಕಾವ್ಯಾಭಿರುಚಿಯನ್ನು ಬೆಳಸಿ, ನಮ್ಮ ಸಾಹಿತ್ಯದ ಸೊಬಗನ್ನು ಊರುಗಳಲ್ಲಿಯೂ ಹಳ್ಳಿಗಳಲ್ಲಿಯೂ ಇರುವ ಜನರಿಗೆ ದೊರಕಿಸಿ, ಸಾಹಿತ್ಯದ ಪ್ರಭಾವವನ್ನು ವಿಸ್ತಾರಪಡಿಸಿಯಾರೆಂದು ಪರಿಷತ್ತು ನಿರೀಕ್ಷಿಸಿಕೊಂಡಿದೆ.

ನಿಜವಾಗಿ ಸಾಹಿತ್ಯತತ್ತ್ವಜ್ಞರಿಗೆ, ಮಿಕ್ಕೆಲ್ಲ ಬಗೆಯ ತತ್ತ್ವದರ್ಶಿಗಳಿಗಿರುವಂತೆಯೇ, ಹಳದು ಹೊಸದು ಎಂಬ ಭೇದವು ಮನಸ್ಸನ್ನಲಂಕರಿಸಲಾರದು. ಅವರ ದೃಷ್ಟಿಗೆ ಹಳದೂ ಹೊಸದೂ ಅನುಸ್ಯೂತವಾಗಿ, ಅಖಂಡ ಪ್ರವಾಹರೂಪವಾಗಿ, ಕಾಣಬರುತ್ತಿರುತ್ತದೆ. ಅವರ ಶ್ರದ್ಧೆಯು ಹಳದು ಹೊಸದುಗಳನ್ನು ಬೇರೆ ವಿಂಗಡಿಸುವುದರಲ್ಲಿ ನಿಲ್ಲುವುದಿಲ್ಲ; ಅವೆರಡನ್ನೂ ಒಂದುಗೂಡಿಸುವುದರಲ್ಲಿರುತ್ತದೆ. ವ್ಯಾಸರು ವೇದಾಂತವಿಚಾರಕ್ಕೆಂದು ಹೇಳಿರುವ—

ತತ್ ತು ಸಮನ್ವಯಾತ್ ||

ಎಂಬ ಸೂತ್ರವನ್ನು ಅವರು ಲೌಕಿಕಜೀವನದ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸುವರು. ಇದು ಹಳದು, ಇದು ಹೊಸದು ಎಂಬ ಸಮಸ್ಯೆ ಈಗ ನಮಗಿರುವುದು ಸಾಹಿತ್ಯಕ್ಷೇತ್ರದಲ್ಲಿ ಮಾತ್ರವೇ ಅಲ್ಲ; ನಮ್ಮ ಸಾಮಾಜಿಕ ಸ್ಥಿತಿ, ನಮ್ಮ ರಾಜ್ಯವ್ಯವಸ್ಥೆ, ನಮ್ಮ ಅರ್ಥಪದ್ಧತಿ, ನಮ್ಮ ವ್ಯವಹಾರ ವಿಧಾನಗಳು, ನಮ್ಮ ಸಮಯಾಚಾರಗಳು—ಈ ಎಲ್ಲ ನಾನಾ ಜೀವನಕ್ಷೇತ್ರಗಳಲ್ಲಿಯೂ ಪ್ರಾಚೀನ ನವೀನಗಳ ಪರಸ್ಪರ ಸ್ಪರ್ಧೆ ವೈಷಮ್ಯಗಳು ಈಗ ಕಾಣಬರುತ್ತಿವೆ. ಈ ಎಲ್ಲ ಕ್ಷೇತ್ರಗಳಲ್ಲಿಯೂ ನಮಗೆ ತಕ್ಕ ನೀತಿ "ತತ್ ತು ಸಮನ್ವಯಾತ್" ಸೂತ್ರದಲ್ಲಿ ಅಡಗಿದೆಯೆಂದು ನನಗೆ ತೋರುತ್ತದೆ. ಭಾಷಾಸಾಹಿತ್ಯಗಳ ವಿಚಾರದಲ್ಲಿ ಈ ಸೂತ್ರದ ಅರ್ಥಕ್ರಮವನ್ನರಿತುಕೊಳ್ಳುವುದಕ್ಕೂ ಅನುಸರಿಸುವುದಕ್ಕೂ ಪರಿಷತ್ತು ಪ್ರಯತ್ನಿಸುತ್ತಿರುವುದೆಂದು ನಾನು ತಿಳಿದುಕೊಂಡಿದ್ದೇನೆ.

## ಗ್ರಂಥಾಭಿವೃದ್ಧಿ

ಹಿಂದಿನ ಸಲದ ಸಾಹಿತ್ಯೋತ್ಸವದಲ್ಲಿ ಅದಕ್ಕೆ ಹಿಂದಿನ ೩೩ ವರ್ಷಗಳಲ್ಲಿ ಆಗಿದ್ದ ಗ್ರಂಥಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಈ ಸಾರಿ ಅಲ್ಲಿಂದೀಚಿನ—ಎಂದರೆ ೧೯೩೪ ನೆಯ ಇಸವಿಯಲ್ಲಾಗಿರುವ—ಗ್ರಂಥಗಳನ್ನು ಸಂಗ್ರಹಿಸಿ ಪ್ರದರ್ಶನ ಮಾಡಿದೆ. ಕಳೆದ ೧೫ ತಿಂಗಳೊಳಗಾಗಿ ಸುಮಾರು ೧೭೦ ಕ್ಕಿಂತ ಹೆಚ್ಚಾಗಿ ಕನ್ನಡ ಗ್ರಂಥಗಳು ಪ್ರಕಟವಾಗಿವೆಯೆಂದು ಗೊತ್ತಾಗುತ್ತದೆ. ಅವುಗಳ ಜಾತಿವಿವರವು ಈ ರೀತಿ ಇರುತ್ತದೆ:

(೧) ನಾಟಕಗಳು ೨೯, (೨) ಪದ್ಯಕಾವ್ಯಗಳು ೨೫, (೩) ಸಣ್ಣಕಥೆ ಮತ್ತು ಚಿಕ್ಕ ಪ್ರಬಂಧಗಳು ೨೧, (೪) ಕಾದಂಬರಿಗಳು ೨೪, (೫) ಚರಿತ್ರೆಗಳು ೪, (೬) ಜೀವನಚರಿತ್ರೆ ೧೦, (೭) ಪ್ರಕೃತಿವಿಜ್ಞಾನ ೫, (೮) ಸಮಾಜವಿಜ್ಞಾನ ೬, (೯) ಮತಾಚಾರ ೨೨ (೧೦) ಸಾಹಿತ್ಯಪ್ರಬಂಧ ೯, (೧೧) ಶಾಲಾ ಪುಸ್ತಕಗಳು ೧೧, (೧೨) ಸಂಕೀರ್ಣವರ್ಗ ೬.

ಇದರಿಂದ ಸರಾಸರಿ ತಿಂಗಳೊಂದಕ್ಕೆ ಹತ್ತು ಗ್ರಂಥಗಳು—ಅಥವಾ ಮೂರುದಿನಕ್ಕೊಂದು ಗ್ರಂಥ—ಪ್ರಕಟವಾಗಿರುವಂತೆ ತೋರಿಬರುತ್ತದೆ. ಗ್ರಂಥ ಸಂಖ್ಯೆಯು ಈ ಬೆಳವಣಿಗೆ ಕನ್ನಡದಲ್ಲಿರುವ ಜೀವಾಳಕ್ಕೆ ಗುರುತಾಗಿದೆ. ಕನ್ನಡಿಗರೆಲ್ಲರೂ ಗ್ರಂಥಗಳನ್ನು ಕೊಂಡು ಓದುವವರಾದರೆ ಅವರಿಗೆ ಪುರ ಸತ್ತಿಲ್ಲದಂತೆ ಮಾಡಲು ಲೇಖಕರಿರುವರೆಂಬುದು ಇದರಿಂದ ಸಿದ್ಧವಾಗುತ್ತದೆ. ಒಟ್ಟಿನಮೇಲೆ, ಬರೆಯುವ ಶಕ್ತಿಯುಳ್ಳವರು ತಮ್ಮ ಜವಾಬುದಾರಿಯನ್ನು ಮರೆತಿಲ್ಲವೆಂದು ಹೇಳಬಹುದು. ಆದರೆ ಓದುವ ಶಕ್ತಿಯುಳ್ಳವರು ಅದಕ್ಕೆ ತಕ್ಕಂತೆ ತಮ್ಮ ಜವಾಬುದಾರಿಯನ್ನು ಅರಿತುಕೊಂಡಿದ್ದಾರೆಂದು ಹೇಳಲು ಆಧಾರ ಕಾಣಬರುವುದಿಲ್ಲ. ಬಹುಮಂದಿ ಗ್ರಂಥಕರ್ತ-ಚಾತಕರು ಇನ್ನೂ ಟೆಕ್ಸ್ಟ್‌ಬುಕ್ ಕಮಿಟಿಯ ಸದಸ್ಯ-ಮೇಘಗಳ ಕೃಪಾವೃಷ್ಟಿಗಾಗಿ ಬಾಯಿ ಬಿಟ್ಟುಕೊಂಡು ಕಾದಿರಬೇಕಾಗಿದೆ. ಈ ಪರಿಸ್ಥಿತಿ ತಪ್ಪಿ, ಪುಸ್ತಕ ಬರೆದವರಿಗೆ ದೇಶದ ಮಹಾಜನರ ಸಂಚಿಯಿಂದ ಮುದ್ರಣವ್ಯಯದಷ್ಟಾದರೂ ಪ್ರತಿಫಲ ಬರುವಂತೆ ವಾಚಕಸಂಖ್ಯೆ ಬೆಳೆದಲ್ಲದೆ ಕನ್ನಡ ಸಾಹಿತ್ಯದ ಭವಿಷ್ಯವು ಪ್ರಕಾಶ ಮಾನವಾಗದು.

ಹುಟ್ಟಿರುವ ಗ್ರಂಥಗಳಲ್ಲಿ ಎಲ್ಲವೂ ಅತ್ಯುತ್ತಮ ತರಗತಿಯವೆಂದು ಹೇಳುವ ಧೈರ್ಯ ನನಗಿಲ್ಲ. ಅವುಗಳಲ್ಲಿ ಎಷ್ಟೋ ಅಂತಸ್ತುಗಳು ಇವೆ. ಅವುಗಳ ಒಳತಿರುಳನ್ನು ಕುರಿತು ಈಗ ನಾನು ಏನೂ ಹೇಳಲಾರೆ. ಬಹು ಪುಸ್ತಕಗಳ ಗಾತ್ರ ಆಕಾರಗಳು ಭಂಡಾರಗಳಿಗೆ ಹೊಂದುವಂತಿಲ್ಲ. ಪ್ರತಿಯೊಂದು ಕನ್ನಡ ಪುಸ್ತಕದ ಕೆಲವು ಪ್ರತಿಗಳಿಗಾದರೂ ಗಟ್ಟಿಯಾಗಿ ರಟ್ಟು ಕಟ್ಟಿಸಿ ಭಂಡಾರಕ್ಕೆ ಯೋಗ್ಯವಾದ ಆಕಾರದಲ್ಲಿ ದೊರಕಿಸಬೇಕೆಂದು ಸೂಚಿಸಬಯಸುತ್ತೇನೆ.

ಹೊಸಹೊಸದಾಗಿ ಪ್ರಕಟವಾಗುವ ಗ್ರಂಥಗಳ ಸಮಾಚಾರವನ್ನು ಆಗಾಗ ಸಂಗ್ರಹವಾಗಿ ಪರಿಷತ್ಪತ್ರಿಕೆಯಲ್ಲಿ ಪ್ರಚುರಗೊಳಿಸಬೇಕೆಂದೂ ವರ್ಷಾಂತ್ಯದಲ್ಲಿ ಸಮಗ್ರ ಪ್ರಕಟರಾಶಿಯ ಸ್ವರೂಪವನ್ನು ಸಮೀಕ್ಷೆಮಾಡಿಸಬೇಕೆಂದೂ ಪರಿ ಷತ್ತಿಗೆ ಆಸೆಯಿದೆ. ಆದರೆ ಇದಕ್ಕೆ ಅನುಕೂಲವಾಗುವಂತೆ ಪ್ರಕಟನೆಗಳ ವಿವರ ವೃತ್ತಾಂತಗಳು ಈಗ ಪರಿಷತ್ತಿಗೆ ಬರುತ್ತಿಲ್ಲ. ಕನ್ನಡದಲ್ಲಿ ಗ್ರಂಥ ಬರೆಯುವ ಮತ್ತು ಪ್ರಕಾಶಗೊಳಿಸುವ ಎಲ್ಲರೂ ತಮ್ಮ ಪ್ರಕಟನೆಗಳ ಸ್ವರೂಪವಿವರಣೆ ಯನ್ನು ಆದಷ್ಟು ಬೇಗ ಪರಿಷತ್ತಿಗೆ ತಿಳುಹಿಸಿ, ಒಂದೊಂದು ಪ್ರತಿಯನ್ನಾದರೂ ಸರಸ್ವತೀ ಭಂಡಾರಕ್ಕಾಗಿ ಕಳುಹಿಸಿದರೆ ಪರಿಷತ್ತು ಅತ್ಯಂತ ಕೃತಜ್ಞತೆಯುಳ್ಳ ದ್ದಾಗಿರುವುದು.

ಗ್ರಂಥಗಳ ವಿಷಯವನ್ನು ನೋಡಿದರೆ ನವೀನತೆಯ ದೃಷ್ಟಿಯಿಂದ ಕೊರತೆಗೆ

ಕಾರಣ ಇನ್ನೂ ಬಹಳವಿದೆ. ಪ್ರತ್ಯಕ್ಷಗೋಳಿಸಬಹುದಾದ ಸೂಕ್ಷ್ಮ ವಿಷಯಗಳನ್ನು ವಿಚಾರಿಸಿ ವಿವರಿಸುವವರಿಗಿಂತಲೂ ಪರೋಕ್ಷ ವಿಷಯಗಳನ್ನು ವರ್ಣಿಸಿ ತೃಪ್ತಿಪಡುವವರು ನಮ್ಮಲ್ಲಿ ಇನ್ನೂ ಹೆಚ್ಚಾಗಿರುವಂತೆ ತೋರುತ್ತದೆ. ಈ ಪರಿಸ್ಥಿತಿ ಬದಲಾಯಿಸುವುದು ಆವಶ್ಯಕವೆಂದು ನನ್ನ ತಿಳಿವಳಿಕೆ. ಭಸ್ಮರುದ್ರಾಕ್ಷಿಗಳ ಮಾಹಾತ್ಮ್ಯವನ್ನೂ ಗೋಪೀಚಂದನ ತುಳಸೀಮಣಿಗಳ ಮಾಹಾತ್ಮ್ಯವನ್ನೂ ತೋರಿಸಿಕೊಡುವ ಗ್ರಂಥಗಳಿಗಿಂತ, ಶಾಸ್ತ್ರೀಯವಾಗಿ ಕಲ್ಲೊಡೆಯುವ ರೀತಿಯನ್ನೂ ಶಾಸ್ತ್ರೀಯವಾಗಿ ಗಾರೆ ಅರೆಯುವ ರೀತಿಯನ್ನೂ ಶಾಸ್ತ್ರೀಯವಾಗಿ ಅಡಿಗೆ ಮಾಡುವ ರೀತಿಯನ್ನೂ ಶಾಸ್ತ್ರೀಯವಾಗಿ ಗಡಿಯಾರ ಸರಿಪಡಿಸುವ ರೀತಿಯನ್ನೂ ಹೇಳಿಕೊಡುವ ಪುಸ್ತಕಗಳು ನಮಗೆ ಹೆಚ್ಚು ಅವಶ್ಯವೆಂದು ನಾನು ತಿಳಿದುಕೊಂಡಿದ್ದೇನೆ. ಹೀಗೆ ಹೇಳುವುದರಿಂದ ಮತಾಚಾರಗಳನ್ನು ನಾನು ಜರೆಯುತಕ್ಕವನೆಂದು ಯಾರೂ ಅನುಮಾನ ಪಡಕೂಡದೆಂದು ಬೇಡಿಕೊಳ್ಳುತ್ತೇನೆ. ಮತಾಚಾರಗಳನ್ನೂ ಅಧ್ಯಾತ್ಮ ವಿಚಾರಗಳನ್ನೂ ಕುರಿತ ಗ್ರಂಥಗಳನ್ನು ನಮ್ಮ ಪೂರ್ವಿಕರು ಹೇರಳವಾಗಿ ಬರೆದಿರಿಸಿದ್ದಾರೆ. ಅವುಗಳನ್ನು ನಾವು ಅರ್ಥಮಾಡಿಕೊಂಡರೆ ಸಾಕಾಗಿದೆ. ನಮ್ಮಲ್ಲಿ ಸಾಕಾದಷ್ಟಿಲ್ಲದಿರುವುದು ನಮ್ಮ ನಿತ್ಯಜೀವನದ ಪ್ರಶ್ನೆಗಳಿಗೂ ವ್ಯವಹಾರಗಳಿಗೂ ಸಂಬಂಧಪಟ್ಟ ಗಟ್ಟಿ ಪ್ರಪಂಚದ ಗ್ರಂಥಗಳು. ಇನ್ನು ಮುಂದೆ ಇಂಥಾ ಗ್ರಂಥಗಳ ಅಭಿವೃದ್ಧಿ ಹೆಚ್ಚಾಗಿ ಆಗುವಂತೆ ನಮ್ಮ ವಿಶ್ವವಿದ್ಯಾಲಯದಿಂದ ತಯಾರಾದ ಆಂಗ್ಲ ವಿಜ್ಞಾನ ವಿದ್ವಾಂಸರು ಸಹಾಯಮಾಡಬೇಕೆಂದು ಬೇಡುತ್ತೇನೆ.

## ವೈಜ್ಞಾನಿಕ ದೃಷ್ಟಿ

(ಉಪಸಂಹಾರ ಭಾಷಣದಿಂದ)

ನಮ್ಮ ದೇಶದ ಜನತೆಯನ್ನೂ ಸಾಹಿತ್ಯವನ್ನೂ ಪರಸ್ಪರ ಹತ್ತಿರ ತರಬೇಕೆಂಬುದು ಪರಿಷತ್ತಿನ ಮುಖ್ಯಉದ್ದೇಶವಾಗಿದೆ. ಈ ತೆರದ ಸಾಹಿತ್ಯೋತ್ಸವಗಳಿಂದ ನಮ್ಮ ಸಾಹಿತ್ಯದಲ್ಲಿ ಹೊಸ ಶಕ್ತಿಯೂ ಕಾಂತಿಯೂ ಉಂಟಾಗಿ, ಆ ಮೂಲಕ ನಮ್ಮ ಜನದ ಜೀವನದಲ್ಲಿ ಒಂದು ಹೊಸ ವೀರ್ಯವೂ ಸೌಂದರ್ಯವೂ ಉಂಟಾದೀತೆಂಬುದು ಪರಿಷತ್ತಿನ ನಿರೀಕ್ಷಣೆಯಾಗಿದೆ. ನಮ್ಮಲ್ಲಿ ಒಂದು ಹೊಸ ದೃಷ್ಟಿಪಿಶಾಲತೆ ನೆಲಸಬೇಕಾಗಿದೆ. ಅದಕ್ಕೆ ನಮ್ಮ ಮನಸ್ಸಿನ ಪ್ರವೃತ್ತಿ ಹೊಸದಾಗಬೇಕು. ವಿವೇಕಾನಂದರವರು ಹೇಳಿದಂತೆ—ನಮ್ಮ ಜನರು ಈಗ ಭೂಮಿಗೆ ಗುಲಾಮರೂ ಸ್ವರ್ಗಕ್ಕೆ ಉಮೇದುವಾರರೂ ಆಗಿದ್ದಾರೆ. ಈ

ಸ್ಥಿತಿಯಿಂದ ನಾವು ಪಾರಾಗಬೇಕಾದರೆ—“ನಮಗೂ ಈ ಪ್ರಪಂಚದಲ್ಲಿ ಬದುಕಲು ಹಕ್ಕಿದೆ; ನಮಗೂ ಬದುಕಲು ಸಾಮರ್ಥ್ಯವಿದೆ; ನಮಗೂ ಜೀವನದಲ್ಲಿ ಒಂದು ಕರ್ತವ್ಯವಿದೆ”—ಎಂಬ ತಿಳಿವಳಿಕೆ ನಮ್ಮಲ್ಲಿ ಪ್ರತಿಯೊಬ್ಬನಿಗೂ ಬರಬೇಕು. ಅಸಾಧ್ಯವಾದ ವೈರಾಗ್ಯದ ಸೋಗಿಗಿಂತ ಸಾಧ್ಯವಾದ ಭೋಗದ ಸಾಧನೆ ಮೇಲೆಂದು ನಾವೆಲ್ಲ ಸ್ಪಷ್ಟವಾಗಿ ಅಂಗೀಕರಿಸಬೇಕು. ನಾವು ಮಾಡುವ ಕೆಲಸದಲ್ಲಿ ಒಂದು ಉತ್ಸಾಹ, ನಿಜವಾದ ಧರ್ಮದಲ್ಲಿ ಒಂದು ಆಸಕ್ತಿ—ಇವು ನಮಗೆ ಆವಶ್ಯಕ. ಇವುಗಳ ಜೊತೆಗೆ ನಿಜವಾದ ಧರ್ಮ ಯಾವುದು ಎಂಬುದನ್ನು ಹುಡುಕಿ ತಿಳಿಯುವ ಶ್ರದ್ಧೆಯೂ ಇರಬೇಕು. ಇದಕ್ಕಾಗಿ ನಮ್ಮ ಬುದ್ಧಿ ಸ್ವತಂತ್ರವಾಗಿ ಸಂಚರಿಸಬೇಕು. ಇದು ಉಂಟಾಗಬೇಕಾದರೆ ಇತರ ದೇಶಗಳವರು ಏನು ಮಾಡುತ್ತಿದ್ದಾರೆಂಬುದನ್ನು ನಾವು ಪರೀಕ್ಷಿಸಿ ತಿಳಿಯಬೇಕು. ಎಂದರೆ ಪಾಶ್ಚಾತ್ಯರು ಹೇಳುವುದನ್ನೆಲ್ಲ ನಾವು ನಂಬಬೇಕೆಂದಲ್ಲ. ಅವರು ಹೇಳುವುದನ್ನು ವಿಚಾರಮಾಡಿ ನಿಜವನ್ನು ತಿಳಿದುಕೊಳ್ಳಬೇಕು.

ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ||

ಇದಕ್ಕೆ ಸಹಾಯಕವಾಗುವುದು ವಿಜ್ಞಾನ. ಆ ಕಾರಣದಿಂದಲೇ ಈ ವಿಶೇಷ ಸಾಹಿತ್ಯೋತ್ಸವದ ಉಪನ್ಯಾಸಮಾಲೆಯಲ್ಲಿ ವೈಜ್ಞಾನಿಕ ಪ್ರಸಂಗಕ್ಕೆ ಹೆಚ್ಚು ಗಮನಕೊಟ್ಟಿರುವುದು.

## ಉಪಾಧ್ಯಾಯರ ಸಾಹಿತ್ಯಸೇವೆ

ಅನೇಕಮಂದಿ ಉಪಾಧ್ಯಾಯರು ತಮಗೆ ಏನಾದರೂ ಬುದ್ಧಿವಾದ ಹೇಳಬೇಕೆಂದು ನನ್ನನ್ನು ಕೇಳಿದ್ದಾರೆ. ಆದರೆ ಬುದ್ಧಿವಾದ ಹೇಳುವುದರಲ್ಲಿ ನನಗೆ ನಂಬಿಕೆಯಿಲ್ಲ. ಉಪಾಧ್ಯಾಯರಿಗೆ ನಾನು ಹೇಳಬಹುದಾದ ಬುದ್ಧಿ ಯಾವುದೂ ನನ್ನಲ್ಲಿಲ್ಲ. ಆದರೆ ಅವರು ಸಾಹಿತ್ಯಕ್ಕೆ ಮಾಡಬೇಕಾದ ಸಹಾಯ ಸ್ವಲ್ಪ ಇದೆ; ಅದನ್ನು ಸ್ವಲ್ಪ ಸೂಚಿಸುತ್ತೇನೆ. ಅವರು ತಮ್ಮ ತಮ್ಮ ಊರುಗಳಲ್ಲಿ ಸಣ್ಣ ಸಣ್ಣ ಕರ್ಣಾಟಕ ಸಂಘಗಳನ್ನು ಸ್ಥಾಪಿಸಬಹುದು. ಅವು ನಿಬಂಧನೆ ಮುಂತಾದ ತೊಡಕುಗಳನ್ನು ಹೆಚ್ಚು ಮಾಡಿಕೊಳ್ಳದೆ, ಕಾರ್ಯಭಾಗಕ್ಕೆ ಹೆಚ್ಚು ಮನಸ್ಸು ಕೊಡಬೇಕು. ಉಪಾಧ್ಯಾಯರು ಸ್ವಲ್ಪ ಸಂಸ್ಕೃತ ಓದಬೇಕೆಂದು ನನಗೆ ಇಷ್ಟ. ಅವರಿಗಿರುವ ಸಂಸ್ಕೃತಜ್ಞಾನವನ್ನು ಕಳೆದುಕೊಳ್ಳಬಾರದು. ಕನ್ನಡದ ಬೆಳವಣಿಗೆಗೆ ಇಂಗ್ಲಿಷಿನಷ್ಟು ಸಹಾಯಮಾಡುವುದು ಸಂಸ್ಕೃತ ಒಂದೇ.

ಹೊಸದಾಗಿ ಪ್ರಕಟವಾಗುವ ಉತ್ತಮ ಕನ್ನಡಕಾವ್ಯಗಳನ್ನೂ ಇಂಗ್ಲಿಷ್ ಕಾವ್ಯಗಳನ್ನೂ ಅವರು ಓದುತ್ತಿರಬೇಕು. ಪಾಠ ಹೇಳುವವರು ತಾವು ಅಧ್ಯಯನ ಮಾಡಬೇಕು. ತಮ್ಮ ಊರು ಜನರಲ್ಲಿ ನಾಲ್ಕಾರು ಮಂದಿಯನ್ನು ಒಂದು ಕಡೆ ವಾರಕ್ಕೊಂದು ಸಲ ಸೇರಿಸಿ, ಅವರಿಗೆ ವಾರಪತ್ರಿಕೆ ಮಾಸಪತ್ರಿಕೆಗಳನ್ನೋದಿ ಹೇಳಿ, ಕಥೆ, ಪದ್ಯ, ವಿಜ್ಞಾನದ ಸಮಾಚಾರ, ಲೋಕವಾರ್ತೆ—ಇವುಗಳನ್ನು ವಿವರಿಸುತ್ತಿದ್ದರೆ, ಅದರಿಂದ ದೇಶಸೇವೆ ಭಾಷಾಸೇವೆಗಳೆರಡೂ ನಿಜವಾಗಿ ನೆರವೇರುವುವು...

ಉಪಾಧ್ಯಾಯರು ಕನ್ನಡ ವ್ಯಾಕರಣಕ್ಕೆ ಹೆಚ್ಚು ಗಮನ ಕೊಡಬೇಕು. ಅದರಲ್ಲಿಯೂ ಮುಖ್ಯವಾಗಿ ಹುಡುಗರಿಗೆ ವ್ಯಾಕರಣವನ್ನು ಚೆನ್ನಾಗಿ ಹೇಳಿಕೊಡಬೇಕು. ಮತ್ತು ಸಮಸ್ತ ಕನ್ನಡಿಗರೂ ಗಮಕವಿದ್ಯೆಯನ್ನು ಕಲಿಯಬೇಕು.

ಕನ್ನಡದಲ್ಲಿರುವ ಉತ್ತಮ ಗ್ರಂಥಗಳ ತಾಳೆಗರಿಯ ಪ್ರತಿಗಳು ಹಳ್ಳಿಗಳಲ್ಲಿ ಇದ್ದರೆ ಅವುಗಳನ್ನು ಪರಿಷತ್ತಿಗೆ ದೊರಕಿಸುವುದು ಉತ್ತಮವಾದ ಭಾಷಾಸೇವೆ. ಅವುಗಳನ್ನು ನೀವೇ ಸ್ವಂತವಾಗಿ ಪಡೆಯಲಾಗದಿದ್ದರೆ ಅವು ಇರುವ ಸ್ಥಳವನ್ನು ನಮಗೆ ತಿಳಿಸಿದರೆ ಪರಿಷತ್ತಿಗೆ ಬಹಳ ಉಪಕಾರಮಾಡಿದ ಹಾಗಾದೀತೆಂದು ನನ್ನ ಭಾವನೆ.

# ೫೪. ನವ್ಯತೆಯೇ ಜೀವನ*

ಈ ವಿಶೇಷ ಸಾಹಿತ್ಯೋತ್ಸವದ ಏರ್ಪಾಟಿನಿಂದ ಉಪಾಧ್ಯಾಯರುಗಳಿಗೂ ವಿದ್ಯಾಪ್ರಚಾರದಲ್ಲಿ ಆಸಕ್ತರಾದ ಇತರ ಜನರಿಗೂ ಕನ್ನಡ ಸಾಹಿತ್ಯ ಸೇವಕರಿಗೂ ಜ್ಞಾನಾಭಿಲಾಷಿಗಳಾದ ಇತರ ಎಲ್ಲರಿಗೂ ಸಹ ಬಹುಮಟ್ಟಿನ ಉಪಯೋಗ ದೊರೆತಿದೆ ಎಂದು ಧಾರಾಳವಾಗಿ ಹೇಳಬಹುದಾಗಿದೆ. ಸರಕಾರದ ವಿದ್ಯಾಪ್ರಚಾರದ ಇಲಾಖೆಯವರಿಂದಲೂ ವಿಶ್ವವಿದ್ಯಾನಿಲಯದಿಂದಲೂ ದೇಶದ ಇತರ ವಿದ್ಯಾಸಂಸ್ಥೆಗಳಿಂದಲೂ ನಮ್ಮ ಜನಕ್ಕೆ ನಡೆಯುತ್ತಿರುವ ಸೇವೆಯ ಜೊತೆಗೆ ಈ ಪರಿಷತ್ತು ನಡಸುತ್ತಿರುವ ವಿಶೇಷೋತ್ಸವವು ಒಂದು ಅನುಬಂಧರೂಪವಾದ ಜ್ಞಾನಪ್ರಸಾರಕಾರ್ಯವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

## ಮುಖ್ಯೋದ್ದೇಶ—ನವೀನತೆ

ಈ ಉತ್ಸವದ ಮುಖ್ಯ ಉದ್ದೇಶಗಳು ಏನೆಂಬುದನ್ನು ಹಿಂದೆ ನಾನು ಮಾಡಿದ ಭಾಷಣಗಳಲ್ಲಿ ತಕ್ಕಮಟ್ಟಿಗೆ ಅರಿಕೆ ಮಾಡಿರುತ್ತೇನೆ. ಕನ್ನಡಕ್ಕೂ ಆ ಮೂಲಕ ಕನ್ನಡ ಜನದ ಮನೋಗತಿಗೂ ಒಂದು ನವೀನತೆಯನ್ನುಂಟು ಮಾಡಿಕೊಡಬೇಕೆಂಬುದು ಈ ಪ್ರಯತ್ನದ ಮುಖ್ಯ ಆಶಯ. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡದ ಮೇಲೆ ಇಟ್ಟುಕೊಂಡಿರುವ ಮಮತೆಯು ಕೇವಲ ಅಭಿಮಾನ ಮಾತ್ರದ್ದಲ್ಲ; ಅದು ಉಪಯೋಗವಿವೇಚನೆಯಿಂದ ಕೂಡಿದ್ದು. ಸ್ವಭಾಷೆಯಮೇಲೆ ಅಭಿಮಾನವಿರುವುದು ಪ್ರತಿಯೊಬ್ಬನಿಗೂ ಸ್ವಾಭಾವಿಕವೇ ಸರಿ. ಈ ಅಭಿಮಾನದ ಜೊತೆಗೆ ಪ್ರಕೃತೋಪಯೋಗದ ಕಾರಣವೂ ಸೇರಿಕೊಂಡಿದ್ದಲ್ಲದೆ ಆ ಅಭಿಮಾನವು ಪೂರ್ಣ ಫಲಕಾರಿಯಾಗಲಾರದು.

ಕನ್ನಡ ಸುಮಾರು ಒಂದು ಕೋಟಿ ಮೂವತ್ತು ಲಕ್ಷ ಜನದ ಭಾಷೆ. ಸಂಖ್ಯಾದೃಷ್ಟಿಯಿಂದ ಇದು ಇಂಡಿಯದ ದೇಶಭಾಷೆಗಳಲ್ಲಿ ಮೊದಲನೆಯ ಹತ್ತರ ಪೈಕಿ ಒಂದಾಗಿದೆ. ಇಂಡಿಯಾ ದೇಶದ ಪ್ರಜೆಯಲ್ಲಿ ಸುಮಾರು

---

* ಕರ್ಣಾಟಕ ಸಾಹಿತ್ಯ ಪರಿಷತ್ತು ಬೆಂಗಳೂರು ನಗರದಲ್ಲಿ ಏರ್ಪಡಿಸಿದ ಮೂರನೆಯ ವಿಶೇಷಸಾಹಿತ್ಯೋತ್ಸವದ (ತಾ || ೬-೫-೧೯೩೫ ರಿಂದ ೧೩-೫-೧೯೩೫ ರ ವರೆಗೆ) ಸಂದರ್ಭದಲ್ಲಿ ಉಪಾಧ್ಯಕ್ಷಸ್ಥಾನದಿಂದ ಮಾಡಿದ ಭಾಷಣದ ಭಾಗಗಳು. (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೨೧, ಸಂ. ೨, ಏಪ್ರಿಲ್-ಜೂನ್ ೧೯೩೬).

ಇಪ್ಪತ್ತೇಳನೆಯ ಒಂದರಷ್ಟು ಭಾಗದ ಜನ ಆಡುವ ಭಾಷೆ ನಮ್ಮದು. ಇಷ್ಟು ದೊಡ್ಡದಾದ ಜನಾಂಗದ ಬುದ್ಧಿಗೆ ತಿಳಿವನ್ನೂ ಮನಸ್ಸಿಗೆ ಬಲವನ್ನೂ ನೀಡಲು ಸಮಗಿರುವ ಉತ್ತಮೋತ್ತಮ ಸಾಧನ ಅವರ ಹುಟ್ಟುನುಡಿಯಾದ ಕನ್ನಡ. ಇಷ್ಟು ವಿಶಾಲವಾದ ಜನಮಂಡಲದ ಜೀವನವನ್ನು ಸುಂದರಗೊಳಿಸಲು ಅನುವಾಗತಕ್ಕದ್ದು ಕನ್ನಡ ಸಾಹಿತ್ಯ. ಈ ಪರಿಷತ್ತು ಕನ್ನಡಕ್ಕೆ ಬೆಲೆ ಕೊಡುತ್ತಿರುವುದು ಈ ಉಪಯೋಗ ದೃಷ್ಟಿಯಿಂದ.

ನಮ್ಮ ಭಾಷೆಯೂ ಸಾಹಿತ್ಯವೂ ಬಹು ಪುರಾತನವಾದದ್ದೆಂಬ ಸಂಗತಿ ಎಲ್ಲರಿಗೂ ತಿಳಿದದ್ದಾಗಿದೆ. ಆದರೆ ಬರಿಯ ಪುರಾತನವಾದದ್ದೆಂಬ ಒಂದು ಕಾರಣದಿಂದಲೇ ಯಾವ ಭಾಷೆಗೂ ಒಂದು ಪ್ರಶಸ್ತಿ ದೊರೆಯಲಾರದು. ಅದು ಜನದ ಅನುದಿನ ಜೀವನಕ್ಕೆ ಬೇಕಾದ ಎಲ್ಲ ಜ್ಞಾನಸಾಮಗ್ರಿಯನ್ನೂ ಎಲ್ಲ ವ್ಯವಹಾರ ಉಪಕರಣಗಳನ್ನೂ ಒದಗಿಸುವ ಶಕ್ತಿಯುಳ್ಳದ್ದಾಗಿರಬೇಕು. ಅಂಥ ಸಂಪತ್ತನ್ನು ಕನ್ನಡಕ್ಕೆ ಸಂಪಾದಿಸಿಕೊಡಬೇಕೆಂಬುದು ನಮ್ಮ ಆಶೆ. ನವ್ಯತೆಯೇ ಜೀವನ; ಹಳಸಿಕೆಯೇ ಸಾವು. ನಮ್ಮ ತೋಟದಲ್ಲಿರುವ ಗಿಡ ಬಳ್ಳಿಗಳು ವರ್ಷವರ್ಷವೂ ಚಿಗುರಿ ವರ್ಷವರ್ಷವೂ ಹೊಸದಾಗಿ ಕಾಣಿಸುವ ರೀತಿಯಲ್ಲಿ, ನಮ್ಮ ಸಾಹಿತ್ಯವೂ ಪದೇ ಪದೇ ಹೊಸ ಹೊಸ ಜೀವಕಾಂತಿಗಳನ್ನು ತೋರಬೇಕು. ಮರ ಹೊಸದಾಗಿ ಚಿಗುರಿಡದೆ ಕರಡುಕಟ್ಟಿ ನಿಂತರೆ ಪುರಾಧಿಕಾರಿಗಳು ಅದನ್ನು ಕಡಿದುಬಿಟ್ಟಾರು. ಭಾಷೆ ನವಜೀವನದ ಹೊಸ ತಳಿರನ್ನು ತಳೆಯಲಾರದೆ ಹೋದರೆ ಲೋಕವು ಅದನ್ನು ನಿರಾಕರಿಸುವುದು ಸ್ವಾಭಾವಿಕವೇ ಆಗಿದೆ. ಭಾಷೆ ಸಾಹಿತ್ಯಗಳು ನವನವೀನತೆಯನ್ನು ತಾಳಲಾರದೆ ಹೋದರೆ ಆ ಭಾಷೆಯನ್ನು ಆಡುವ ನವಜೀವನವೂ ನವೀನತೆಯನ್ನು ತೋರಲಾರದು. ಈ ದೃಷ್ಟಿಯಿಂದ ಪರಿಷತ್ತು ಕನ್ನಡದ ಸ್ಥಿತಿಗತಿಗಳನ್ನು ಆಲೋಚನೆಮಾಡಿ, ಕನ್ನಡವನ್ನು ಪ್ರಕೃತಲೋಕದ ಜೀವನಕ್ಕೆ ಯೋಗ್ಯವನ್ನಾಗಿ ಮಾಡಲು ನಡಸುತ್ತಿರುವ ಪ್ರಯತ್ನಗಳಲ್ಲಿ ಈ ವಿಶೇಷ ಸಾಹಿತ್ಯೋತ್ಸವದ ಏರ್ಪಾಟು ಮುಖ್ಯವಾದದ್ದಾಗಿವೆ. ಒಂದು ಮಾತಿನಲ್ಲಿ—ಈ ಏರ್ಪಾಟು ಕನ್ನಡದ ನವೀಕರಣ ಪ್ರಯತ್ನವಾಗಿದೆ.

ಈ ವರ್ಷದ ವಿಶೇಷೋತ್ಸವದಲ್ಲಿ ಬಹು ಮುಖ್ಯವಾದದ್ದಾಗಿ, ಮೊದಲಿನಿಂದ ನಡೆದುಕೊಂಡು ಬಂದಿರುವ ಅಂಶ ಆಧುನಿಕ ವಿಚಾರೋಪನ್ಯಾಸಗಳದು. ಈ ಉಪನ್ಯಾಸಗಳಲ್ಲಿ ಹೆಚ್ಚು ಸಂಖ್ಯೆಯವು ವಿಜ್ಞಾನಶಾಸ್ತ್ರಗಳಿಗೆ ಸಂಬಂಧಪಟ್ಟವುಗಳಾಗಿರುತ್ತವೆ. ಪರಿಷತ್ತು ನಮ್ಮ ಕಾಲದ ಕನ್ನಡ ಸಾಹಿತ್ಯ ರಚನೆಯಲ್ಲಿ ಪ್ರಕೃತಿವಿಜ್ಞಾನ ಸಮಾಜವಿಜ್ಞಾನಶಾಸ್ತ್ರಗಳಿಗೆ ಪ್ರಧಾನಸ್ಥಾನವನ್ನು

ಸಲ್ಲಿಸುವುದು ಉಚಿತವೆಂದು ಭಾವಿಸಿಕೊಂಡಿದೆ. ಇಂದಿನ ಪ್ರಪಂಚದ ಜೀವನದಲ್ಲಿ ವಿಜ್ಞಾನವು ಎಷ್ಟು ಮಹತ್ತರವಾದ ಪರಿಣಾಮಗಳನ್ನುಂಟುಮಾಡುತ್ತಿದೆ ಎಂಬುದನ್ನು ತಾವೆಲ್ಲ ಬಲ್ಲವರಾಗಿದ್ದೀರಿ. ವಿಜ್ಞಾನವು ನಮ್ಮ ಬಾಹ್ಯಜೀವನದ ಪರಿಕರಗಳನ್ನೂ ಸಂದರ್ಭಗಳನ್ನೂ ಬದಲಾಯಿಸುತ್ತಿರುವುದು ಮಾತ್ರವೇ ಅಲ್ಲದೆ, ನಮ್ಮ ಅಂತರಂಗ ಜೀವನದ ಮತಗಳನ್ನೂ ಸಮಾಜಸಂಪ್ರದಾಯಗಳನ್ನೂ ಸಹ ವ್ಯತ್ಯಾಸಗೊಳಿಸುತ್ತಿದೆ. ಒಂದು ನೂತನಜ್ಞಾನಕುತೂಹಲ, ಒಂದು ನೂತನವಿಮರ್ಶನಕ್ರಮ, ಒಂದು ನೂತನವಿಚಾರಸ್ವಾತಂತ್ರ್ಯ—ಇವೇ ವೈಜ್ಞಾನಿಕ ಬುದ್ಧಿಯ ಲಕ್ಷಣಗಳಾಗಿವೆ. ಈ ಲಕ್ಷಣಗಳು ನಮ್ಮ ಲೌಕಿಕ ವ್ಯವಹಾರದ ವಿಚಾರಗಳಿಗೆ ಮಾತ್ರವೇ ಅಲ್ಲದೆ ನಮ್ಮ ಆಧ್ಯಾತ್ಮಿಕ ತತ್ತ್ವವಿಚಾರಗಳಿಗೂ ವ್ಯಾಪಿಸುತ್ತಿವೆ. ಭರತಖಂಡದ ಪುರಾತನ ನಾಗರಿಕತೆಗೆ ವಿಜ್ಞಾನವು ಮಾಡುತ್ತಿರುವ ಕಸಿಯಿಂದ ಒಂದು ಹೊಸ ನಾಗರಿಕತೆ ಉದ್ಭವಿಸಿ ಜಗತ್ತಿಗೆಲ್ಲ ಸಂಗ್ರಾಹ್ಯವಾದೀತೆಂಬ ಆಶೆ ಅನೇಕರಿಗೆ ತೋರುತ್ತಿದೆ. ಇಷ್ಟು ಪ್ರಬಲವಾದ ಮಹಿಮೆಯುಳ್ಳದ್ದು ವಿಜ್ಞಾನ. ಆದದ್ದರಿಂದ ನಮ್ಮ ಆಧುನಿಕ ವಿಚಾರೋಪನ್ಯಾಸಗಳಲ್ಲಿ ವಿಜ್ಞಾನಕ್ಕೆ ಹೆಚ್ಚು ಮುಖ್ಯತೆಯನ್ನು ಕೊಟ್ಟಿರುವುದು ಉಚಿತವಾಗಿಯೇ ಇದೆ. ಈ ಉಪನ್ಯಾಸಮಾಲಿಕೆಯ ವಿಷಯಗಳಲ್ಲಿ ಪ್ರತ್ಯಕ್ಷವಾಗಿ ವಿಜ್ಞಾನಶಾಸ್ತ್ರಗಳಿಗೆ ಸಂಬಂಧಪಡದೆ ಇರುವವುಗಳೂ ಸಹ ವೈಜ್ಞಾನಿಕಮಾರ್ಗದಲ್ಲಿ—ಎಂದರೆ ಒಂದು ಹೊಸ ಜಿಜ್ಞಾಸಾಕ್ರಮದಲ್ಲಿ, ಒಂದು ಹೊಸ ವಿಚಾರದೃಷ್ಟಿಯಿಂದ—ಉಪಪಾದಿತವಾಗುವುವೆಂಬುದು ಪರಿಷತ್ತಿನ ನಿರೀಕ್ಷಣೆ. ಒಟ್ಟಿನ ಮೇಲೆ ಆಧುನಿಕ ದೃಷ್ಟಿ ಎಂಥಾದ್ದು, ನವನಾಗರಿಕತೆಯ ಮನೋವೃತ್ತಿ ಎಂಥಾದ್ದು, ಪ್ರಕೃತಲೋಕದ ಮೌಲ್ಯವಿವೇಚನೆ ಎಂಥಾದ್ದು ಎಂಬುದನ್ನು ತೋರಿಸಿಕೊಡುವುದು ಈ ಆಧುನಿಕ ವಿಚಾರೋಪನ್ಯಾಸಗಳ ಮುಖ್ಯ ಆಶಯವಾಗಿರುತ್ತದೆ. ಇವುಗಳಿಂದ ನಾವು ಮೂರು ಬಗೆಯ ಪ್ರಯೋಜನಗಳನ್ನು ಅಪೇಕ್ಷಿಸಬಹುದು:

(೧) ಪಾಠಶಾಲೆಗಳಲ್ಲಿ ವಿಜ್ಞಾನಾದಿ ವಿಷಯಗಳಿಗೆ ಸಂಬಂಧಪಟ್ಟ ಪಾಠಗಳನ್ನು ಕಲಿಸುವ ಉಪಾಧ್ಯಾಯರಿಗೆ ಈ ವಿಷಯಗಳಲ್ಲಿ ಹೊಸ ಉತ್ಸಾಹವೂ ಹೊಸ ತಿಳಿವಳಿಕೆಯೂ ಉಂಟಾಗಿ, ಅವರ ಬೋಧನಕ್ರಮಗಳು ಉತ್ತಮಪಡುವುದೊಂದು.

(೨) ಕ್ಲಿಷ್ಟವೂ ಗಹನವೂ ಆದ ಈ ವಿಷಯಗಳನ್ನು ಕುರಿತು ಕನ್ನಡದಲ್ಲಿ ಉಪನ್ಯಾಸಮಾಡುವ ವಾಡಿಕೆ ಪ್ರಬಲಿಸಿ, ಕನ್ನಡದ ಪಾರಿಭಾಷಿಕ ಸಂಪತ್ತೂ ಭಾಷಣಸೌಲಭ್ಯವೂ ಹೆಚ್ಚುವುದು ಇನ್ನೊಂದು.

(೩) ನಮ್ಮ ಸಾಮಾನ್ಯಜನದಲ್ಲಿ ವಿಜ್ಞಾನದ ವಿಷಯದಲ್ಲಿ ಆಸಕ್ತಿ ಹೆಚ್ಚು ಹೆಚ್ಚಾಗಿ ಹರಡಿ, ವಿಜ್ಞಾನಕ್ಕೆ ಸಹಜವಾದ ಸ್ವತಂತ್ರ ವಿಚಾರ ಬುದ್ಧಿಯು ಅವರಲ್ಲಿ ಬೆಳೆದೀತೆಂಬುದು ಮತ್ತೊಂದು.

ಹೀಗೆ ಈ ಆಧುನಿಕ ವಿಚಾರೋಪನ್ಯಾಸಗಳಿಂದ ನಮ್ಮ ದೇಶಕ್ಕೆ ಒಂದು ಅತ್ಯಂತಾವಶ್ಯಕವಾದ ಜ್ಞಾನಸಮಾರಾಧನೆಯಾಗುವುದೆಂದು ನಾವು ನಂಬಿ ಕೊಂಡಿದ್ದೇವೆ.

## ಗ್ರಂಥಗಳ ಬೆಳವಣಿಗೆ

೧೯೩೪ರಲ್ಲಿ ಮಾಡಿದ ಲೆಕ್ಕದಿಂದ ಪರಿಷತ್ತಿನ ಜನ್ಮವರ್ಷವಾದ ೧೯೧೫ ರಿಂದ ೧೯೩೪ ರ ವರೆಗೆ ಒಟ್ಟು ೨,೩೮೭ ಗ್ರಂಥಗಳು ಪ್ರಕಟವಾಗಿದ್ದವೆಂದು ತಿಳಿದುಬಂದಿತ್ತು ;—ಎಂದರೆ ಸರಾಸರಿ ವರ್ಷ ಒಂದಕ್ಕೆ ೧೨೬ ಗ್ರಂಥಗಳು ಪ್ರಕಟವಾಗಿದ್ದವು. ಕಳೆದ ವರ್ಷದ ಪ್ರದರ್ಶನದ ಲೆಕ್ಕದಿಂದ ೧೫ ತಿಂಗಳು ಗಳಲ್ಲಿ ಒಟ್ಟು ೧೭೦ ಕ್ಕಿಂತ ಹೆಚ್ಚಾಗಿ, ಅಥವಾ ವರ್ಷಕ್ಕೆ ೧೨೮ ರಂತೆ, ಗ್ರಂಥಗಳು ಪ್ರಕಾಶಗೊಂಡಂತೆ ತೋರಿತು. ಈ ವರ್ಷದ ಸಂಖ್ಯೆಯೂ ಸುಮಾರು ಅಷ್ಟೇ ಇದೆ. ಇದರಿಂದ ನಾವು ನಿರಾಶರಾಗಬೇಕಾದದ್ದಿಲ್ಲ. ಗ್ರಂಥಗಳ ಬೆಳವಣಿಗೆಯು ವರ್ಷವರ್ಷವೂ ಒಂದೇ ರೀತಿ ಹೆಚ್ಚುವುದು ಅಸ್ವಾಭಾವಿಕ. ನಮ್ಮ ದೇಶದಲ್ಲಿ ಮಳೆ ಬೆಳೆಗಳು ಹೇಗೋ ಪುಸ್ತಕಗಳ ಬೆಳವಣಿಗೆಯೂ ಹಾಗೆಯೇ ವರ್ಷದಿಂದ ವರ್ಷಕ್ಕೆ ಬದಲಾಯಿಸುತ್ತಿರುವುದು ಸ್ವಾಭಾವಿಕವಾಗಿದೆ. ಈ ವಿಚಾರದಲ್ಲಿ ಒಟ್ಟಿನ ಮೇಲೆ ಒಂದು ಟೀಕೆಯ ಮಾತನ್ನು ಹೇಳುವುದು ಅವಶ್ಯವಾಗಿದೆ. ಕನ್ನಡ ಗ್ರಂಥಗಳಿಗೆ ಕನ್ನಡ ಜನ ದಿಂದ ತಕ್ಕಷ್ಟು ಪ್ರೋತ್ಸಾಹ ದೊರೆಯುತ್ತಿಲ್ಲ. ಸ್ಕೂಲು ಕಾಲೇಜುಗಳಲ್ಲಿ ಪಠ್ಯಪುಸ್ತಕವಾಗದೆ ಇದ್ದರೂ ಜೀವಿಸಿಕೊಳ್ಳುವ ಯೋಗ್ಯತೆ ಕನ್ನಡ ಗ್ರಂಥಕ್ಕೆ ಇನ್ನೂ ಬಂದಿಲ್ಲ. ಮಹಾಜನರಲ್ಲಿ ವಾಚನಾಭ್ಯಾಸ ಬೆಳೆದು, ಅವರು ಸ್ವತಂತ್ರವಾಗಿ ಗ್ರಂಥಗಳನ್ನು ಕೊಂಡುಕೊಳ್ಳುವ ಅಭ್ಯಾಸವನ್ನು ಕಲಿತ ಹೊರತು ನಮ್ಮಲ್ಲಿ ಉತ್ತಮ ಸಾಹಿತ್ಯ ಬೆಳೆಯುವ ಆಶೆ ತೋರುವುದಿಲ್ಲ. ಗ್ರಂಥ ಗಳನ್ನು ಕೊಳ್ಳುವವರೂ ಓದುವವರೂ ಹೆಚ್ಚು ಮಂದಿಯಿಲ್ಲದಿರುವಾಗ ಗ್ರಂಥ ರಚನೆಯ ಉತ್ಸಾಹ ಪ್ರತಿಭಾಶಾಲಿಗಳಿಗೆ ಹೇಗೆ ಉಂಟಾದೀತು ? ಮತ್ತು ಪ್ರಕಟನಕರ್ತರಿಗೆ ಹಣ ವೆಚ್ಚಮಾಡುವ ಧೈರ್ಯ ಹೇಗೆ ಬಂದೀತು ? ಗ್ರಂಥ ಕರ್ತರಿಗೂ ಹೊಟ್ಟೆ ಇರುತ್ತದೆ, ಅವರಿಗೂ ಸಂಸಾರಗಳು ಇರುತ್ತವೆ ; ಕಾಗದಕ್ಕೂ ಅಚ್ಚಿಗೂ ತೆರಬೇಕಾದ ಬೆಲೆ ಇರುತ್ತದೆ. ಇದನ್ನು ನಮ್ಮ

ಮಹಾಜನರು ಗಮನದಲ್ಲಿರಿಸಿ ಕನ್ನಡ ಗ್ರಂಥಗಳಿಗೆ ಹೆಚ್ಚು ಉತ್ತೇಜನವನ್ನು ಕೊಡಬೇಕೆಂದು ಬೇಡುತ್ತೇನೆ.*

ನಮ್ಮಲ್ಲಿ ಮದುವೆ, ಮುಂಜಿ, ಹುಟ್ಟಿದ ಹಬ್ಬ ಮೊದಲಾದ ಸಂತೋಷ ಕಾಲಗಳಲ್ಲಿ ಇಷ್ಟಮಿತ್ರರಿಗೆ ನಮ್ಮ ಪ್ರೀತಿಯ ಗುರುತಾಗಿ ಒಡವೆ ವಸ್ತ್ರಗಳನ್ನು ಕೊಡುವ ವಾಡಿಕೆಯುಂಟಷ್ಟೆ? ಅಂಥ ಸಂದರ್ಭದಲ್ಲಿ ಒಳ್ಳೆಯ ಪುಸ್ತಕಗಳನ್ನು ಕೊಡುವ ಪದ್ಧತಿಯು ಇಂಗ್ಲಿಷ್ ಜನರಲ್ಲಿರುವಂತೆ ನಮ್ಮಲ್ಲಿಯೂ ವಾಡಿಕೆಗೆ ಬರಬಹುದಾಗಿದೆ. ಉತ್ತಮ ಗ್ರಂಥವು ಅಕ್ಷರಸ್ಥರಿಗೆ ಒಂದು ಆಭರಣವಾಗಿ, ಅವರ ಮನೆಗೆ ಒಂದು ದೀಪವಾಗಿ ಇರುತ್ತದೆ.

## ಈಗಿನ ಕರ್ತವ್ಯ

ಸಾಹಿತ್ಯವನ್ನು ಪಂಡಿತಗೋಷ್ಠಿಯಿಂದ ಪೇಟೆಯ ಚೌಕಕ್ಕೆ ತರಬೇಕಾದದ್ದು ನಮ್ಮ ಈಗಿನ ಕರ್ತವ್ಯವಾಗಿದೆ. ಪೂರ್ವದಲ್ಲಿ ವಿದ್ವಾಂಸರಾದವರ ವಾಗ್ವಿಜೃಂಭಣೆಗೂ ಪುಣ್ಯವಂತರ ವಿನೋದ ಕಾಲಕ್ಷೇಪಕ್ಕೂ ಅವಕಾಶವನ್ನೊದಗಿಸುವುದು ಸಾಹಿತ್ಯದ ಕೆಲಸವಾಗಿತ್ತು. ಈಗಲಾದರೋ ಬಡವರಿಗೆ ಬದುಕನ್ನು ಸಹ್ಯವನ್ನಾಗಿ ಮಾಡುವುದೂ ಕಷ್ಟಜೀವಿಗಳ ಎದೆಯಲ್ಲಿ ಧೈರ್ಯವನ್ನು ತುಂಬುವುದೂ ಸಾಹಿತ್ಯದ ಕರ್ತವ್ಯವಾಗಿದೆ. ನಮ್ಮ ತೆಲುಗು ಸೋದರರು—

ಪೊದ್ದು ಪೋದು ನಿದುರ ರಾದು ಭಾಮಾಮಣೀ |
ರೆಂಡು ಸುದ್ದುಲೈನ ಚೆಪ್ಪಿ ಪೋವೆ ಭಾಮಾಮಣೀ ||

---

* "ಕನ್ನಡದಲ್ಲಿ ಓದುಗರ ಸಂಖ್ಯೆ ಬೆಳೆಯುತ್ತಿಲ್ಲ. ಪುಸ್ತಕಗಳನ್ನು ಕೊಳ್ಳುವವರ ಸಂಖ್ಯೆ ಬೆಳೆದ ಹೊರತು, ಪುಸ್ತಕಗಳನ್ನು ಬರೆಯುವವರ ಸಂಖ್ಯೆಯಾಗಲಿ ಅಥವಾ ಬರೆದ ಪುಸ್ತಕಗಳ ಯೋಗ್ಯತೆಯಾಗಲಿ ಹೆಚ್ಚಲಾರದು. ಬಹುಮಂದಿ ಓದುವವರು ಸಿಕ್ಕಿಯಾರು, ಶ್ರಮಕ್ಕೆ ತಕ್ಕ ಫಲ ದೊರೆತೀತು—ಎಂಬ ಭರವಸೆ ಕಂಡ ಹೊರತು ಸಮರ್ಥರಾದವರು ಗ್ರಂಥ ಲೇಖನಕ್ಕೆ ಕೈಹಾಕಲಾರರು. ಗಿರಾಕಿಗೆ ತಕ್ಕಂತೆ ಸರಬರಾಯಿ ಎಂಬುದು ಸ್ವತಸ್ಸಿದ್ಧ ನ್ಯಾಯ. ಆದಕಾರಣ, ಕನ್ನಡ ಮಹಾಜನರು ತಮ್ಮ ಭಾಷೆಯ ಮೇಲ್ಮೆಯನ್ನು ಬಯಸುವುದು ದಿಟವಾದರೆ ಅವರಲ್ಲಿ ಅಕ್ಷರಸ್ಥರಾದವರೆಲ್ಲರೂ ತಮ್ಮ ಆದಾಯದಲ್ಲಿ ಒಂದು ಖಚಿತವಾದ ಭಾಗವನ್ನು ಪುಸ್ತಕಸಂಗ್ರಹಕ್ಕಾಗಿ ಮೀಸಲಿಡಬೇಕು. ಸಾಮಾನ್ಯವಾಗಿ ತಿಂಗಳಿಗೆ ೨೦ ರೂಪಾಯಿಗಳ ವರಮಾನ ಇರತಕ್ಕವರು ಅದರಲ್ಲಿ ಎಂಟು ಆಣೆಯನ್ನಾದರೂ ಒಂದು ಗ್ರಂಥಕ್ಕೆ ವಿನಿಯೋಗಿಸಲು ಮನಸ್ಸು ಮಾಡಬೇಕು. ಹಾಗಾದಹೊರತು ಕನ್ನಡ ಸಾಹಿತ್ಯ ಉಚ್ಛ್ರಾಯಸ್ಥಿತಿಗೆ ಬರುವುದೆಂಬ ಆಸೆಗೆ ಕಾರಣವಿರಲಾರದು."

—ನಾಲ್ಕನೆಯ ವಿಶೇಷ ಸಾಹಿತ್ಯೋತ್ಸವದ ಸ್ವಾಗತ ಭಾಷಣದಿಂದ.

ವಿಭಕ್ತಿಗಳ ರೀತಿಯನ್ನೂ, ಕ್ರಿಯಾಪದ ಕಾಲ ರೂಪನಿಷ್ಪತ್ತಿಯನ್ನೂ, ಕರ್ತೃ ಕರ್ಮ ಕ್ರಿಯಾ ಯೋಜನ ವಿವರಗಳನ್ನೂ ಕನ್ನಡದಲ್ಲಿ ಚೆನ್ನಾಗಿ ಕಲಿತುಕೊಂಡವನು ಅದೇ ವ್ಯಾಕರಣಸೂತ್ರಗಳನ್ನು ಇಂಗ್ಲಿಷಿಗೆ ಹೊಂದಿಸಿ ಕೊಳ್ಳುವುದು ಕಷ್ಟವಾಗಲಾರದು. ಹೀಗೆ ಕನ್ನಡದಲ್ಲಿ ಭದ್ರವಾಗಿ ತಳಹದಿ ಕಟ್ಟುವುದು ದೊಡ್ಡ ಕೆಲಸ. ಇಂಗ್ಲಿಷಿನ ಹಿತಚಿಂತಕರು ಕನ್ನಡದಲ್ಲಿ ಭಾಷಾ ಬೋಧನೆಯನ್ನು ಮೊದಲು ಬಲಪಡಿಸಬೇಕು. ಹೀಗೆಂದಮೇಲೆ, ಇಂಗ್ಲಿಷಿನ ಭದ್ರಸ್ಥಿತಿಗೆ ನಮ್ಮ ಪ್ರಾಥಮಿಕ ಪಾಠಶಾಲೆಗಳ ಬೋಧನಕ್ರಮ, ಅಲ್ಲಿಯ ಉಪಾಧ್ಯಾಯರುಗಳ ಭಾಷಾಜ್ಞಾನ—ಇವು ಅತಿ ಮುಖ್ಯ ವಿಷಯ ಗಳಾಗುತ್ತವೆ. ಇಂಗ್ಲಿಷಿನ ಕಾರಣದಿಂದಲೇ ಅಲ್ಲ, ಸ್ವತ ಏವ ಇವು ಮುಖ್ಯ ವಿಷಯಗಳೆಂಬುದನ್ನು ಎಲ್ಲರೂ ಒಪ್ಪಲೇಬೇಕು. ನಮ್ಮಲ್ಲಿ ಮೊದ ಮೊದಲು ಬಾಲಪಾಠಶಾಲೆಗಳ ಬೋಧಕರಾಗಿ ಬಂದವರು ಅಷ್ಟಿಷ್ಟು ಪೂರ್ವ ಕಾಲದ ಸಂಸ್ಕೃತಿಯನ್ನು ಪಡೆದವರಾಗಿರುತ್ತಿದ್ದರು. ಅವರಿಗೆ ಮತ್ತಾವ ವಿಶೇಷ ಪಾಂಡಿತ್ಯವಿರದಿದ್ದರೂ, ಸ್ವಲ್ಪ ಅಮರ, ನೂರಾರು ಶ್ಲೋಕಗಳು, ಪ್ರಸಿದ್ಧ ಪುರಾಣಕಥೆಗಳು, ವ್ಯಾಕರಣದ ಮುಖ್ಯಾಂಶಗಳು—ಇಷ್ಟಾದರೂ ಜ್ಞಾಪಕದಲ್ಲಿರುತ್ತಿದ್ದವು. ನಲವತ್ತು ವರುಷಗಳ ಹಿಂದೆ ನನಗೆ ಕನ್ನಡ ಕಲಿಸಿದ ಮಹಾನುಭಾವರಾದ ಚಂದ್ರಶೇಖರಶಾಸ್ತ್ರಿಗಳವರು ವೇದಾಧ್ಯಯನ ಮಾಡಿದವ ರಾಗಿಯೂ ಸಂಸ್ಕೃತ ಕಾವ್ಯ ವ್ಯಾಸಂಗ ಮಾಡಿದವರಾಗಿಯೂ ಇದ್ದರು. ಅವರು 'ಗಜವದನ ಹೇರಂಬ ಗಣಪತಿ' ಪದ್ಯವನ್ನು ಪಾಠ ಹೇಳಿದರೂ ಸಂಧಿ, ಸಮಾಸ, ಅವಯವಾರ್ಥ, ಅನ್ವಯ, ಆಕಾಂಕ್ಷೆ ಇವುಗಳನ್ನೆಲ್ಲಾ ಕೂಡಿದ ಮಟ್ಟಿಗೂ ವಿದ್ಯಾರ್ಥಿಯ ಬಾಯಿಂದಲೇ ಹೊರಡಿಸಿ, ಸಂಸ್ಕೃತ ಸಂಪ್ರದಾಯದಲ್ಲಿ ಕನ್ನಡವನ್ನು ಹೇಳಿಕೊಡುತ್ತಿದ್ದರು. ಅವರ ಕಾವ್ಯವಾಚನ ಧಾಟಿಯೂ ಹಾಗೆಯೇ ಹೃದಯಂಗಮವಾಗಿರುತ್ತಿತ್ತು. ಅಂಥಾ ಉಪಾ ಧ್ಯಾಯರುಗಳು ಈಗ ವಿರಳರಾಗಿದ್ದಾರೆ. ಉಪಾಧ್ಯಾಯರಿಗಿರುವ ಸಾಹಿತ್ಯ ಬಲವೇ ಸ್ವಲ್ಪದ್ದಾದ ಮೇಲೆ ವಿದ್ಯಾರ್ಥಿಗಳಿಗೆ ದೊರೆಯುವ ಭಾಷಾಪಾಂಡಿತ್ಯ ಎಷ್ಟು ಮಟ್ಟಿನದಾದೀತು? ನಮ್ಮ ವಿದ್ಯಾಪ್ರಚಾರದ ಇಲಾಖೆಯವರೂ ವಿಶ್ವವಿದ್ಯಾಲಯದವರೂ ವಿದ್ಯೋತ್ಸಾಹಿಗಳಾದ ಸರ್ವರೂ ಈ ದೃಷ್ಟಿಯಿಂದ ವಿದ್ಯಾಭ್ಯಾಸಕ್ರಮದ ತಳಪಾಯವನ್ನು ಪರಿಶೋಧಿಸಿ, ಬಾಲ ಪಾಠಶಾಲೆ ಗಳಲ್ಲಿಯೂ ಮಾಧ್ಯಮಿಕ ಶಾಲೆಗಳಲ್ಲಿಯೂ ಸಾಹಿತ್ಯಕ್ಕೆ ಭದ್ರವಾದ ಅಸ್ತಿ ಭಾರವನ್ನು ಹಾಕಬೇಕು. ಆಗ ಕನ್ನಡ ಸಂಸ್ಕೃತ ಸಾಹಿತ್ಯಪಾಠಕ್ಕೆ ಹೊಸ ತೇಜಸ್ಸು ಬರುವುದಲ್ಲದೆ ಇಂಗ್ಲಿಷ್ ಪಾಠವೂ ತೃಪ್ತಿಕರವಾಗುವುದು.

## ಪಾಂಡಿತ್ಯದ "ಹಕ್ಕು"

ಹೀಗೆ ನಿಮ್ಮ ಮುಂದೆ ಅನೇಕ ದೊಡ್ಡ ಪ್ರಶ್ನೆಗಳು ಕಾದುಕೊಂಡಿವೆ. ಅವು ನಿಮ್ಮ ಉದ್ಯೋಗಕ್ಕೆ ಮಾತ್ರವೇ ಅಲ್ಲದೆ ದೇಶದ ಅಭ್ಯುದಯಕ್ಕೂ ಸಂಬಂಧಪಟ್ಟವು. ಅವುಗಳ ಸಮಾಧಾನವು ಸರಕಾರದ ಮತ್ತು ಮಹಾಜನರ ಸಹಕಾರದಿಂದ ಆಗಬೇಕಾಗಿದೆ.

ಪಂಡಿತವರ್ಗಕ್ಕೂ ಪ್ರಭುವರ್ಗಕ್ಕೂ ಇದುವರೆಗೂ ಅಭ್ಯಾಸವಾಗಿರುವ ಪರಸ್ಪರ ಸಂಬಂಧವು ಪೋಷ್ಯ—ಪೋಷಕ ಭಾವದ್ದು. ಪಂಡಿತರು ಯಾಚಕರು, ಪ್ರಭುಗಳು ಅನುಗ್ರಹಕರ್ತರು; ಪಂಡಿತರು ಆಶ್ರಿತರು, ಪ್ರಭುಗಳು ಆಶ್ರಯ ದಾತರು—ಈ ತೆರದ್ದು ಹಳೆಯ ಸಂಬಂಧ. ಈ ಕಾಲದಲ್ಲಿ ಆ ತೆರದ ಸಂಬಂಧ ಗಳು ಅಳಿಸಿಹೋಗುತ್ತಿವೆ. ಈಗಿನ ಸಂಬಂಧ ಪರಸ್ಪರ ನ್ಯಾಯಭಾವದ್ದು,—ಉಪಯೋಗ–ಪ್ರತಿಮೌಲ್ಯರೂಪದ್ದು. ಸರಕಾರವು ಚಿತ್ತ ಬಂದರೆ ಅನುಗ್ರಹಿಸ ಬಹುದು, ಇಲ್ಲದಿದ್ದರೆ ಉಪೇಕ್ಷಿಸಬಹುದು—ಎಂಬ ನೀತಿ ಈ ಕಾಲಕ್ಕೆ ಅನ್ವಯಿಸತಕ್ಕದ್ದಲ್ಲ. ಏಕೆಂದರೆ ಈಗ ಪಂಡಿತರ ಅಸ್ತಿತ್ವವನ್ನುಳಿಸಬೇಕಾದದ್ದು ಸರಕಾರದ ಕೀರ್ತಿಪ್ರತಿಷ್ಠೆಗಳಿಗೋಸ್ಕರವಲ್ಲ, ಪ್ರಜಾಪ್ರಯೋಜನಕ್ಕೋಸ್ಕರ. ಹಿಂದೆ ಪಂಡಿತರು ರಾಜಾಸ್ಥಾನಕ್ಕೆ ಒಂದು ಅಲಂಕಾರ; ರಾಜನ ಮುಖೋಲ್ಲಾಸಕ್ಕೆ ಅವರ ಸಾಂಮುಖ್ಯ (ಹಾಜರಿ) ಅವಶ್ಯ; ರಾಜನ ಗುಣವರ್ಣನೆಯೇ ಅವರ ಕಸಬು. ಈಗ ಹಾಗಿಲ್ಲ. ಲೋಕಬೋಧನೆ ಈಗ ಅವರ ಕರ್ತವ್ಯ. ದೇಶದ ಪ್ರತಿಯೊಂದು ಉದ್ಯೋಗಕ್ಕೂ ಸಲ್ಲಬೇಕಾದ ಹಕ್ಕುಗಳು ಕೆಲವು ಇರುತ್ತವೆ. ಪಂಡಿತವೃತ್ತಿಯೂ ಅಂಥಾದ್ದೊಂದು ಉದ್ಯೋಗ. ಪೊಲೀಸ್, ಮರಾಮತ್, ವೈದ್ಯ—ಮೊದಲಾದ ಇಲಾಖೆಗಳು ಕೆಟ್ಟರೆ ನಷ್ಟಪಡುವವರು ಹೇಗೆ ಪ್ರಜೆಗಳೋ, ಹಾಗೆ ಪಂಡಿತವೃತ್ತಿಯು ಕೆಟ್ಟರೆ ನಷ್ಟಪಡುವವರು ಪ್ರಜೆ ಗಳೇ. ಹೀಗಿರುವುದರಿಂದ ಸರಕಾರಕ್ಕೆ ಮಾತ್ರವಲ್ಲದೆ ಮಹಾಜನರಿಗೂ ಸಹ ನಿಮ್ಮ ಕರ್ತವ್ಯದ ಘನತೆಯೆಂಥದೆಂಬುದನ್ನೂ ನಿಮಗಾಗಬೇಕಾದ ಸೌಕರ್ಯ ಗಳೇನೆಂಬುದನ್ನೂ ಮನಗಾಣಿಸಿಕೊಡುವುದು ನಿಮ್ಮ ಸಂಘದ ಕರ್ತವ್ಯ ವಾಗಿರುತ್ತದೆ.

## ಜನದಲ್ಲಿ ವಿದ್ಯೋತ್ಸಾಹ

ನನ್ನ ಮನಸ್ಸಿಗೆ ತೋರುವ ಒಂದು ಧೈರ್ಯದ ಮಾತಿನಿಂದ ಈ ಉಪ ನ್ಯಾಸವನ್ನು ಮುಗಿಸುತ್ತೇನೆ. ದೇಶದಲ್ಲಿ ಸರ್ವತ್ರ ವಿದ್ಯಾಭಿಲಾಷೆ ಹರಡು ತ್ತಿದೆ. ಎಲ್ಲ ಜಾತಿ ಎಲ್ಲ ವರ್ಗಗಳ ಪ್ರಜಾಜನರೂ ಅಕ್ಷರವಿದ್ಯೆಯನ್ನು

ಅಪೇಕ್ಷಿಸುತ್ತಿದ್ದಾರೆ. ಸರಕಾರವೂ ವಿದ್ಯಾಪ್ರಚಾರವಿಷಯದಲ್ಲಿ ಹೆಚ್ಚು ಹೆಚ್ಚು ಆಸಕ್ತಿಯನ್ನು ತೋರುತ್ತಿದೆ. ಹೀಗೆ ಅಕ್ಷರಜ್ಞಾನವು ಪ್ರಸರಿಸುತ್ತ ಹೋಗುವುದೆಂಬುದು ನಿಸ್ಸಂದೇಹದ ಸಂಗತಿ. ಅಕ್ಷರಜ್ಞಾನದ ಹಿಂದೆಯೇ, ಅದರ ಫಲಿತಾಂಶವಾಗಿಯೇ, ಸಾಹಿತ್ಯಾಭಿರುಚಿಯೂ ಶಾಸ್ತ್ರಕುತೂಹಲವೂ ಹುಟ್ಟಿಬರುತ್ತವೆ. ಈ ಹೊತ್ತು ಓದುಬರಹ ಕಲಿತವನು ನಾಳೆ ಕಥೆ ಕಾವ್ಯ ಗಳನ್ನು ಓದಬೇಕೆನ್ನುತ್ತಾನೆ; ನಾಳಿದ್ದು ವಿಚಾರಮಾಡಹೊರಡುತ್ತಾನೆ. ಈ ಅಕ್ಷರಜ್ಞಾನಮೂಲಕವಾದ ಬುದ್ಧಿವಿಕಸನದಿಂದ ಪಂಡಿತವಿದ್ಯೆಗೆ ಬೆಲೆಯೇರು ವುದು ಸ್ವಾಭಾವಿಕವಾಗಿದೆ. ಹೀಗೆ ನಮಗೆ ಹೊಸ ಆಶಾಕಾರಣ ತೋರಿ ದಂತೆಯೇ ಹೊಸ ಕರ್ತವ್ಯತೆಯೂ ತೋರುತ್ತದೆ. ಅಕ್ಷರಜ್ಞಾನಜನಿತವಾದ ಉತ್ಸಾಹವನ್ನು ಸರಿಯಾದ ಕಾಲುವೆಗಳೊಳಕ್ಕೆ ತಿದ್ದಿ ಹರಿಯಿಸಿ ಸಫಲ ವನ್ನಾಗಿಸುವುದು ನಮ್ಮ ಪಂಡಿತರ ಮತ್ತು ಲೇಖಕರ ಮೇಲಿರುವ ಭಾರ.

## ಕನ್ನಡದ ಪುನರುಜ್ಜೀವನ

ಎರಡನೆಯದಾಗಿ ಈಚೆಗೆ ನಮ್ಮ ದೇಶಾಭಿಮಾನಿ ಸರಕಾರವು ವಿದ್ಯಾ ಪ್ರಚಾರ ಶಾಖೆಯಲ್ಲಿ ಒಂದು ಅತಿಮಹತ್ವದ ಮಾರ್ಪಾಟನ್ನು ನಡಸಿದೆ. ಈಗ ಹೈಸ್ಕೂಲುಗಳಲ್ಲಿ ಪಾಶ್ಚಾತ್ಯವಿಜ್ಞಾನಬೋಧನೆಯೆಲ್ಲ ಕನ್ನಡದ ಮೂಲಕ ಆಗಬೇಕಾಗಿದೆ. ಈ ಮಾರ್ಪಾಟು ಕ್ರಮೇಣ ವ್ಯಾಪಿಸಿ ಮುಂದೆ ವಿಶ್ವ ವಿದ್ಯಾಲಯಕ್ಕೂ ಹರಡಬಹುದಾಗಿದೆ. ಆ ಸಂಸ್ಥೆಯೂ ದೇಶಭಾಷೆಯ ಪ್ರಾಧಾನ್ಯವನ್ನಂಗೀಕರಿಸಿ, ಗ್ರಂಥಪ್ರಕಟನೆಯ ಮೂಲಕವೂ ಇತರ ವಿಧ ಗಳಲ್ಲಿಯೂ ಕನ್ನಡದ ಉದ್ಧಾರಕ್ಕಾಗಿ ದುಡಿಯುತ್ತಿದೆ. ಹೀಗೆ ಸರಕಾರದ ವಿದ್ಯಾಪ್ರಚಾರಪದ್ಧತಿಯಲ್ಲಿ ಕನ್ನಡದ ಸ್ಥಾನವು ವಿಶಾಲವಾಗಿ ಭದ್ರಪಡು ತ್ತಿದೆ. ಇದರ ಜೊತೆಗೆ ವಾರ್ತಾಪತ್ರಿಕೆಗಳೂ ವಿವಿಧ ಸಾಹಿತ್ಯ ಪತ್ರಿಕೆಗಳೂ ಹರಡಿಕೊಂಡು ಕನ್ನಡವನ್ನು ಬೆಳಸುತ್ತಿವೆ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಯತ್ನದಿಂದಲೂ, ಎಲ್ಲೆಲ್ಲೂ ಪ್ರವರ್ಧಮಾನವಾಗಿರುವ ಕರ್ಣಾಟಕ ಸಂಘ ಗಳ ಚಳವಳಿಗಳಿಂದಲೂ ಜನದಲ್ಲಿ ಕರ್ಣಾಟಕೋತ್ಸಾಹವು ಹಬ್ಬಿ ಹುರಿಯಾಗು ತ್ತಿದೆ. ಇದು ಪಂಡಿತವರ್ಗಕ್ಕೆ ಪ್ರೋತ್ಸಾಹಕಾರಕವಾದ ಸಂಗತಿ. ಈ ನಾನಾ ಪ್ರಯತ್ನಗಳನ್ನು ತಾವು ಸಹಾನುಭೂತಿಯಿಂದಲೂ ಸ್ನೇಹದಿಂದಲೂ ನೋಡಿ, ಕನ್ನಡದಲ್ಲಿ ಆಧುನಿಕ ವಿಚಾರಸಾಹಿತ್ಯ ಬೆಳೆಯುವಂತೆಯೂ ವಿಜ್ಞಾನಬೋಧ ನೆಗೆ ಕನ್ನಡ ಒದಗಿಬರುವಂತೆಯೂ ಸಹಾಯ ಕೊಡುವುದು ತಮ್ಮಗಳಿಗೆ ಕರ್ತವ್ಯವೆಂದು ನಾನು ತಿಳಿದುಕೊಂಡಿದ್ದೇನೆ.

## ಉತ್ತಮ ಸಾಹಿತ್ಯದಿಂದ ಉತ್ತಮ ರಾಜಕೀಯ

ಮೂರನೆಯದಾಗಿ, ಸರಕಾರಗಳು ಎಲ್ಲೆಲ್ಲೂ ಪ್ರಜಾಯತ್ತವಾಗುತ್ತಿವೆ. ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ರಾಜ್ಯಸೂತ್ರಗಳು ಸಾರ್ವಜನಿಕರಿಗೆ ಹಸ್ತಗತವಾಗುತ್ತಿವೆ. ದೇಶದ ಶಾಸನವ್ಯವಸ್ಥೆಗಳೂ ಆಡಳಿತಗಳೂ ಏರ್ಪಾಟುಗಳೂ ಕೊಂಚಕೊಂಚವಾಗಿಯಾದರೂ ಜನಸಾಮಾನ್ಯದ ಅಭಿಪ್ರಾಯವನ್ನು ಅನುಸರಿಸಬೇಕಾಗುತ್ತಿದೆ. ಈ ಮಾರ್ಪಾಟು ಹಿತಕರವಾಗಿರಬೇಕಾದರೆ ಪ್ರಜಾಸಾಮಾನ್ಯದ ಮನೋಬುದ್ಧಿಗಳು ಸುಸಂಸ್ಕೃತಗಳಾಗಿರಬೇಕೆಂಬುದು ಸ್ವತಸ್ಸಿದ್ಧವಾಗಿದೆ. ನಮ್ಮ ದೇಶದ ಜೀವನಕ್ಕೆ ಚಿರಜ್ಯೋತಿಗಳಾಗಿರುವ ಸಾಹಿತ್ಯರತ್ನಗಳನ್ನು ಕಾಣದಿರುವವರು,—ರಾಮನ ಪ್ರತಿಜ್ಞೆಯನ್ನರಿಯದವರು, ಯುಧಿಷ್ಠಿರನ ಸಂಕಟವನ್ನರಿಯದವರು, ನಳನ ಪರೀಕ್ಷೆಯನ್ನರಿಯದವರು, ಹರಿಶ್ಚಂದ್ರನ ಸ್ಥೈರ್ಯವನ್ನರಿಯದವರು—ಇಂಥವರು ಶಾಸನಸಭೆಗಳಲ್ಲಿ ಪ್ರಜಾಪ್ರತಿನಿಧಿಗಳಾಗಿ ಬಂದು ಕುಳಿತರೆ, ಅವರಿಂದ ಎಂಥ ಉದಾರಶಾಸನಗಳು ನಡೆದಾವು, ಎಂಥ ನಿರ್ಮಲನೀತಿಗಳು ಹೊರಟಾವು? ಈಗ ಬರುತ್ತಿರುವ ಈ ಹೊಸ ಪ್ರಜಾಧಿಕಾರದ ಪ್ರವಾಹವು ದೇಶೋಪದ್ರವಕಾರಿಯಾಗದೆ ಕಲ್ಯಾಣಕಾರಕವಾಗಬೇಕಾದರೆ, ಪ್ರಜಾಪ್ರತಿನಿಧಿಗಳು ಮಾತ್ರನೇ ಅಲ್ಲ, ಅವರನ್ನಾರಿಸಿ ಆ ಅಧಿಕಾರಪಟ್ಟವನ್ನು ಕಟ್ಟುವ ಪ್ರಜಾಜನರೂ ಸಹ ನೀತಿಸೂಕ್ಷ್ಮದರ್ಶಿಗಳಾಗಿಯೂ ಉದಾತ್ತಹೃದಯರಾಗಿಯೂ ಇರಬೇಕು. ಈ ಸಂಸ್ಥಿತಿಯನ್ನುಂಟುಮಾಡಬಲ್ಲ ಶಕ್ತಿಯಿರುವುದು ಉತ್ತಮ ಸಾಹಿತ್ಯಕ್ಕೆ. ಕಲ್ಲೆದೆಯನ್ನು ಕರಗಿಸುವ ಅದ್ಭುತವೂ, ಮಣ್ಣೆದೆಯನ್ನು ವಜ್ರವಾಗಿಸುವ ಅದ್ಭುತವೂ ಮಹಾಕಾವ್ಯದ ರಸಕ್ರಿಯೆ. ಈ ಕ್ರಿಯೆ ನಡೆದಲ್ಲದೆ ನಮ್ಮ ಸ್ವಭಾವಗಳು ಪರಿಷ್ಕೃತವಾಗುವ ಬಗೆ ತೋರುವುದಿಲ್ಲ. ಹೀಗೆ ನಮ್ಮ ರಾಜಕೀಯದ ಉತ್ತಮತೆಗೆ ಪರಮ ಸಾಧನವಾದದ್ದು ಸಾಹಿತ್ಯಪ್ರಚಾರ. ಈ ಸಂಗತಿಯಲ್ಲಿಯೂ ಪಂಡಿತಲೇಖಕರ ಉತ್ಸಾಹಕ್ಕೆ ಕಾರಣವು ಈಗ ಪ್ರತ್ಯಕ್ಷ ಕಾಣುತ್ತದೆ.

## ಜಗತ್ತಿನ ವ್ಯಾಧಿಗೆ ಕಾವ್ಯಸಂಜೀವನಿ

ಇವೆಲ್ಲಕ್ಕಿಂತ ಮೇಲಿನದಾದ ದೃಷ್ಟಿಯೊಂದಿದೆ. ಅದು ಲೋಕಸಂಸ್ಥಿತಿಯ ದೃಷ್ಟಿ. ಈ ಕ್ಷಣದಲ್ಲಿ ಮಾನವಪ್ರಪಂಚದ ಸ್ಥಿತಿ ಭಯಂಕರವಾಗಿದೆ. ಎಲ್ಲೆಲ್ಲಿಯೂ ಸಂಕ್ಷೋಭೆ; ಎಲ್ಲೆಲ್ಲಿಯೂ ಕ್ರಾಂತಿ. ದೇಶ ದೇಶಕ್ಕೆ

ಕಲಹ; ವರ್ಗ ವರ್ಗಕ್ಕೆ ಕಲಹ; ಜಾತಿ ಜಾತಿಗೆ ಕಲಹ. ಯಾರಿಗೂ ಯಾರಲ್ಲಿಯೂ ವಿಶ್ವಾಸವಿಲ್ಲ. ಯಾರಿಗೂ ಯಾವುದರಲ್ಲಿಯೂ ಪೂಜ್ಯ ಬುದ್ಧಿಯಿಲ್ಲ. ಭೂಮಂಡಲವೆಲ್ಲ ಮಾರಿಗುಡಿಯ ಅಂಗಳವಾಗಿದೆ. ಇಂಥಾ ಕಾಲದಲ್ಲಿ ಜನಕ್ಕೆ ಒಂದು ನೆಮ್ಮದಿಯನ್ನು, ಒಂದು ಚಿತ್ತಸ್ವಾಸ್ಥ್ಯವನ್ನು, ಒಂದು ಸಹನೆಯನ್ನು, ಒಂದು ಭರವಸೆಯನ್ನು ತಂದೊದಗಿಸುವುದೇ ಒಂದು ಮಹೋಪಕಾರ. "ಮಾನವಹೃದಯಾಂತರಾಳದಲ್ಲಿ ಒಂದು ದಿವ್ಯಾಂಶವುಂಟು, ಒಂದು ಅಮೃತಕಣವುಂಟು, ಒಂದು ಧರ್ಮಬೀಜವುಂಟು. ಆ ಅಂತಸ್ಸಂಪತ್ತನ್ನು ಹೊರಕ್ಕೆ ತೆಗೆದಲ್ಲದೆ ಸಂತೋಷ ಶಾಂತಿಗಳಿಲ್ಲ"—ಎಂದು ಜನವನ್ನು ಸಾಂತ್ವನಗೊಳಿಸಬಲ್ಲ ವಾಣಿ ಮಹಾಕವಿಯದು. ಪರದೈವಶ್ರದ್ಧೆಯನ್ನೂ ಆತ್ಮಸಂಯಮಪೂರ್ವಕವಾದ ಆತ್ಮವಿಶ್ವಾಸವನ್ನೂ ಪುನರುಜ್ಜೀವನಗೊಳಿಸಬಲ್ಲ ದಿವ್ಯವಾಣಿಯೇ,—ಭಗವಾನ್ ವ್ಯಾಸಮಹರ್ಷಿಗಳು ನಮಗೆ ದೊರಕಿಸಿರುವಂಥ ಸಂಕ್ಷುಬ್ಧ ಲೋಕಸಂದರ್ಶನವೇ,—ನಮ್ಮ ಇಂದಿನ ವ್ಯಾಧಿಗೆ ಪರಮ ಸಂಜೀವನಿ. ಈ ಔಷಧವನ್ನು ಉಚಿತಪ್ರಮಾಣಗಳಲ್ಲಿ, ತಕ್ಕ ತಕ್ಕ ಅನುಪಾನಗಳಲ್ಲಿ, ಒದಗಿಸಿಕೊಡಬಲ್ಲವರು ಉಪಾಧ್ಯಾಯ ಪಂಡಿತರು. ಈ ಉದಾತ್ತವಾದ ಕರ್ತವ್ಯದೃಷ್ಟಿಗಿಂತ ಮಿಗಿಲಾದ ಸ್ಫೂರ್ತಿಸ್ಥಾನವೂ ಉತ್ಸಾಹಹೇತುವೂ ಪಂಡಿತರಿಗೂ ಲೇಖಕರಿಗೂ ಬೋಧಕರಿಗೂ ಇನ್ನೆಲ್ಲಿಯೂ ಇರಲಾರದು. ಮನುಷ್ಯಕುಲದ ಬಹಿರಂಗದ ಪೀಡೆಗಳನ್ನು ಇತರರು ಪರಿಹರಿಸುವವರಾದರೆ ಮನುಷ್ಯನ ಅಂತರಂಗವನ್ನು ಚೊಕ್ಕಟಗೊಳಿಸಿ ಆತ್ಮದ ಸೊಟ್ಟುಗಳನ್ನು ನೆಟ್ಟಗೆ ಮಾಡುವ ಕೆಲಸ ಸಾಹಿತ್ಯಬೋಧಕರದು. ಈ ಒಂದು ಯೋಗದ ಧ್ಯಾನವೇ ಪಂಡಿತರ ಸಮಾಧಾನ ಉತ್ಸಾಹಗಳಿಗೆ ಸಾಕಾದಷ್ಟು ಪರಿಪೋಷಕವೆಂದು ನಾನು ನಂಬಿದ್ದೇನೆ.

# ೮. ಕಾವ್ಯದಲ್ಲಿ ಜೀವನತತ್ತ್ವದರ್ಶನ*

ಸಾಹಿತ್ಯವೆಂದರೆ ಸರಸವಾದ ಗ್ರಂಥ. ರಸವುಳ್ಳದ್ದು ಸರಸ. ರಸವೆಂದರೆ 'ಇನ್ನೂ ಬೇಕು, ಇನ್ನೂ ಬೇಕು' ಎಂದೆನಿಸುವಂಥ ರುಚಿಯುಳ್ಳ ದ್ರವ್ಯ. ಸರಸವಾಗಿ ಬಂದ ವಾಕ್ಯಕ್ಕೆ ಕಲ್ಲಿನಂತಿರುವ ಮನಸ್ಸನ್ನು ಕರಗಿಸುವ ಶಕ್ತಿಯಿರುತ್ತದೆ. ನಾವು ಕಥೆ, ಕಾದಂಬರಿ, ನಾಟಕಗಳನ್ನು ಓದಿ ಕಂಬನಿ ಸುರಿಸುತ್ತೇವೆ—ಅವುಗಳಲ್ಲಿಯ ದುಃಖದ ಸನ್ನಿವೇಶಗಳ ಕಾರಣದಿಂದ. ಆದರೆ ಸಾಹಿತ್ಯಕ್ಕೆ ಕಂಬನಿ ಸುರಿಸುವುದೊಂದೇ ಗುಣವಲ್ಲ. ಸಾಹಿತ್ಯವು ದುಃಖವನ್ನು ಮರೆಯಿಸಿ ನಮ್ಮನ್ನು ನಗಿಸಲೂ ಬಲ್ಲುದು; ಅಳುನಗುಗಳೆರಡಕ್ಕಿಂತ ಮೇಲ್ಮಟ್ಟಕ್ಕೆ ನಮ್ಮನ್ನೊಯ್ದು ಸಮಾಧಾನಪಡಿಸಲೂ ಬಲ್ಲುದು. ಮನಸ್ಸನ್ನು ಪರಿಪಕ್ವಗೊಳಿಸಿ ಆತ್ಮವನ್ನು ದೃಢಪಡಿಸುವ ಉದಾತ್ತ ದರ್ಶನವನ್ನು ಒಳಗೊಂಡಿರುವುದೇ ಶ್ರೇಷ್ಠಸಾಹಿತ್ಯ. ಮನಸ್ಸನ್ನು ಎಷ್ಟೇ ಗಟ್ಟಿಮಾಡಿಕೊಂಡು ಕೂತು ಓದುವ ವಜ್ರಹೃದಯದ ವಾಚಕನೂ ಭಾವೋದ್ರೇಕದ ಸ್ಥಿತಿಗೆ ಬರುವಂತೆ ಅವನನ್ನು ಕದಲಿಸಿಬಿಡುವ ಚೈತನ್ಯವು ಶ್ರೇಷ್ಠಸಾಹಿತ್ಯಕ್ಕಿರುತ್ತದೆ. ಹಾಗೆ ಕದಲಿಸಿದ ಬಳಿಕ ಅದು ಅವನಿಗೆ ಒಂದು ಸಮಾಧಾನಸ್ಥಾನದ ದಾರಿಯನ್ನೂ ತೋರಿಸಬಲ್ಲದ್ದಾಗಿರುತ್ತದೆ.

## ಅಂತರಂಗದ ಅನುಭವದ ವರದಿ

ಇಂಥ ಪರಿಣಾಮಕಾರಿಯಾದ ಸಾಹಿತ್ಯವನ್ನು ಬರೆಯುವವನು ಮೊದಲು ತಾನು ಸುಸಂಸ್ಕೃತನಾಗಿರಬೇಕು. ಅವನಲ್ಲಿ ಆಳವಾದ ಅನುಭವವಿರಬೇಕು. ಅವನು ಜನದ ಜೀವನ ಕಷ್ಟ, ಮೃತ್ಯು, ವಿಯೋಗ,—ಲೋಕಕ್ಕೆ ತಟ್ಟಿದ ಹಾನಿ, ಲೋಕದ ಉದ್ಧಾರಕ್ಕೆ ಆಗಬೇಕಾದ ಪ್ರಯತ್ನಗಳು,—ಇವುಗಳ ಅನುಭವವನ್ನು ಪಡೆದವನಾಗಿ, ಪ್ರಕೃತಿಯನ್ನು ನೋಡಿದ್ದರಿಂದ ತನ್ನ ಮನಸ್ಸಿನಲ್ಲಾದ ವಿವಿಧ ಭಾವನೆಗಳನ್ನೂ, ತನ್ನ ಅಂತರಂಗದಲ್ಲಿ ಮೂಡಿದ ಶುಭದರ್ಶನವನ್ನೂ ಸರಸವಾಗಿ ವರದಿ ಮಾಡಿದರೆ ಅದು ಸಾಹಿತ್ಯವಾಗುತ್ತದೆ. ಈ ವರದಿಯು ಪದ್ಯದ ರೂಪವನ್ನಾದರೂ ತಳೆಯಬಹುದು, ಗದ್ಯದ ರೂಪ

* ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದಲ್ಲಿ ತಾ|| ೨೩-೧-೧೯೪೧ನೆಯ ಗುರುವಾರ ಮಾಡಿದ ಭಾಷಣದ ಸಾರಾಂಶ. (ಕನ್ನಡ ನುಡಿ, ಜನವರಿ ೧೯೪೧).

ವನ್ನಾದರೂ ತಿಳಿಯಬಹುದು. ಗದ್ಯವು ಸಾಹಿತ್ಯವಾಗದೆ ಇರಬೇಕಾದದ್ದಿಲ್ಲ; ಬರೆದ ಪದ್ಯವೆಲ್ಲ ಸಾಹಿತ್ಯವಾಗಬೇಕೆಂಬ ವಿಧಿಯೂ ಇಲ್ಲ.

ವೀಣೆಯೂ ಹಾರ್ಮೋನಿಯಂ ವಾದ್ಯವೂ ಒಂದೆಡೆ ಇದ್ದರೆ, ಅಲ್ಲಿ ಎಷ್ಟೇ ತೆಳ್ಳಗೆ ಗಾಳಿ ಸುಳಿದರೂ ವೀಣೆಯ ತಂತಿಗಳು ಮಿಡಿಯುತ್ತವೆ, ಮಿಡಿದು ಮಧುರನಾದವನ್ನು ಹೊಮ್ಮಿಸುತ್ತವೆ. ಮಿಕ್ಕ ವಾದ್ಯಕ್ಕೆ ಈ ಯೋಗ್ಯತೆ ಇರುವುದಿಲ್ಲ. ಉತ್ತಮ ಸಾಹಿತಿಯ ಲಕ್ಷಣವೂ ಇದರಂತೆ. ಅವನಿಗೆ ಪ್ರತಿಭೆಯೂ ಸೂಕ್ಷ್ಮವೇದನೆಯೂ ಅತ್ಯಾವಶ್ಯಕ. ಆ ವಿಶೇಷ ಶಕ್ತಿಗಳಿಂದ ಅವನು ಲೋಕಸ್ವಾರಸ್ಯವನ್ನು ಗ್ರಹಿಸುತ್ತಾನೆ.

ಹೀಗೆ ವೀಣೆ ತಂಬೂರಿಗಳಂತೆ ಸೂಕ್ಷ್ಮಜೀವಿಯಾದ ಸಾಹಿತಿಯ ನೋಡುವ ಕಣ್ಣು, ಕೇಳುವ ಕಿವಿ, ಸವಿಯುವ ನಾಲಗೆ, ಮಿಡಿಯುವ ಎದೆ-- ಎಲ್ಲ ಅತಿ ಸೂಕ್ಷ್ಮವಾಗಿರುತ್ತವೆ.

ಅವನಿಗೆ ಶಬ್ದಪ್ರಯೋಗದ ಮೇಲೆ ಅಂಕೆಯಿದ್ದು, ಸವಕಲು ನಾಣ್ಯದಂತೆ ಹಳೆಯವಾದ ಮಾತುಗಳನ್ನು ಬಿಟ್ಟು, ಹೊಸ ಹೊಸ ಮಾತುಗಳನ್ನು ಅರ್ಥವತ್ತಾಗಿ, ರಸವತ್ತಾಗಿ ಪ್ರಯೋಗಿಸುವ ಜಾಣ್ಮೆಯೂ ಜಾಗರೂಕತೆಯೂ ಇರಬೇಕು; ಕಾವ್ಯದ ಲಕ್ಷಣನಿಯಮಗಳ ಪರಿಜ್ಞಾನವಿರಬೇಕು.

ಈ ಕಾಲೇಜಿನಲ್ಲಿ ಇಂಗ್ಲಿಷ್ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಪಾಠ ನಡೆಯುತ್ತಿರುವುದರಿಂದ ತುಲನಾತ್ಮಕ ಪರೀಕ್ಷೆಯ ಅಭ್ಯಾಸಕ್ಕೆ ಇಲ್ಲಿ ಬೇಕಾದಷ್ಟು ಅವಕಾಶವಿದೆ. ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯಗಳಲ್ಲಿ ಯಾವ ಯಾವ ಕೃತಿ ಯಾವ ಯಾವ ಮಟ್ಟದ್ದು, ಈ ಉಭಯ ಸಾಹಿತ್ಯಗಳಲ್ಲಿ ಪರಸ್ಪರ ಸರಿತೂಗಬಲ್ಲ ಗ್ರಂಥಗಳಾವುವು—ಎಂಬುದನ್ನು ಪರೀಕ್ಷೆಮಾಡಲು ನಿಮಗೆ ಬೇಕಾದಷ್ಟು ಸಂದರ್ಭಗಳು ಒದಗುತ್ತಿರುತ್ತವೆ.

## ಟಿಂಟರ್ನ್ ಮಠದ ಬಳಿ

ಉತ್ತಮ ಸಾಹಿತ್ಯದಲ್ಲಿ ಇರಬೇಕಾದ ಗುಣಗಳಲ್ಲಿ ಕೆಲವನ್ನು ಹೇಳಿದೆನಲ್ಲವೆ? ನೀವು ಓದುತ್ತಿರುವ ಇಂಗ್ಲಿಷ್ ಕವನಗಳಲ್ಲಿ ಒಂದಾದ ವರ್ಡ್ಸ್‌ವರ್ತ್ (Wordsworth) ಕವಿ ಬರೆದ 'ಟಿಂಟರ್ನ್ ಆಬೆ' *Tintern Abbey* ಎಂಬ ಕವಿತೆಯಲ್ಲಿರುವ ಉದಾತ್ತ ಭಾವನೆಗಳನ್ನು ಸ್ವಲ್ಪ ವಿವೇಚಿಸೋಣ. ಪ್ರಕೃತಿಗೂ ಮಾನವನಿಗೂ ಕವಿ ಇಲ್ಲಿ ಹೇಗೆ ಸಂಬಂಧವನ್ನು ಕಲ್ಪಿಸಿದ್ದಾನೆ! ಈ ಕವಿತೆಯಲ್ಲಿ ಕಾಣಬರುವ ನದಿ ಗುಡ್ಡ ವನಗಳ ಕೂಟಪ್ರಭಾವದ ವರ್ಣನೆಗೆ ಸರಿತೂಗಬಲ್ಲ ವರ್ಣನೆಗಳು ನಮ್ಮ ಕಾವ್ಯಗಳಲ್ಲಿ ಇವೆಯೆ?

ವರ್ಡ್ಸ್‌ವರ್ತ್ ಕವಿಯ ವರ್ಣನೆಗಳಿಂದ ನಮ್ಮ ಮನಸ್ಸಿನ ಮೇಲೆ ಆಗುವ ತೆರದ ಪರಿಣಾಮ ಹಿಂದಿನ ಕನ್ನಡ ಕಾವ್ಯಗಳಲ್ಲಿ ಬರುವ ವರ್ಣನೆಗಳಿಂದ ಆಗುವುದು ಅಪರೂಪವೆನ್ನಬಹುದು. ಈ ಕವಿತೆಯಲ್ಲಿ ತೋರಿರುವ ಸನ್ನಿವೇಶವೂ ಆ ಸನ್ನಿವೇಶದಲ್ಲಿ ನವನೀತದಂತೆ ಹುದುಗಿಕೊಂಡಿರುವ ಭಾವನೆಗಳೂ ನಮ್ಮ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ನೀಡುತ್ತವೆ. ಆದದ್ದರಿಂದಲೇ ಈ ಕವನ ಭಾರತೀಯರ ಮನೋಧರ್ಮಕ್ಕೆ—ಅವರ ವೇದಾಂತ ಪ್ರವೃತ್ತಿಗೆ,—ಬಹು ಮೆಚ್ಚಿಕೆಯಾಗಿರುತ್ತದೆ.

......These beauteous forms,
......'mid the din
Of towns and cities,—I have owed to them,
In hours of weariness, sensations sweet,
Felt in the blood, and felt along the heart;
And passing even into my purer mind,
With tranquil restoration: feelings. . .
As have no slight or trivial influence
On that best portion of a good man's life,
......I may have owed another gift,
Of aspect more sublime; that blessed mood
In which the burthen of the mystery,
In which the heavy and the weary weight
Of all this unintelligible world,
Is lightened:—that serene and blessed mood,
In which the affections gently lead us on,—
Until, the breath of this corporeal frame
And even the motion of our human blood
Almost suspended, we are laid asleep
In body, and become a living soul:
......And I have felt
A presence that disturbs me with the joy
Of elevated thoughts;......
......Therefore am I still
......well pleased to recognise
In nature and the language of the sense,

The anchor of my purest thoughts, the nurse,
The guide, the guardian of my heart, and soul
Of all my moral being.

ಅನುಭವಾಮೃತಕ್ಕೆ ಈ ಕವಿತೆ ಉತ್ತಮ ಉದಾಹರಣೆ. ಇಂಥ ಉತ್ಕೃಷ್ಟದಶೆಯ ಸ್ಫೂರ್ತಿಯುಳ್ಳದ್ದು ಶ್ರೇಷ್ಠಕಾವ್ಯ.

## ಕಾವ್ಯಲೋಕದ ಅನುಭವ

ಇನ್ನೊಂದು ಉದಾಹರಣೆಯನ್ನಿಲ್ಲಿ ಕೊಡಬಹುದು :

ಸಂಸಾರ ತಾಪತ್ರಯದಲ್ಲಿ ಸಿಕ್ಕಿದ ಒಬ್ಬ ಮನುಷ್ಯನಿಗೆ ಬಾಳುವೆ ಬೇಸರವಾಗಿ, ಅವನು ತನ್ನ ಬಂಧನಗಳನ್ನು ಈಡಾಡಿ, ಊರು ಬಿಟ್ಟು ಓಡಿಹೋಗುತ್ತಾನೆ. ಜನ್ಮವನ್ನು ಕಳೆದುಕೊಳ್ಳಲೆಂದೋ ಏನೋ ಸಮುದ್ರದ ಅಂಚಿನ ವರೆಗೆ ಓಡಿಹೋಗಿ ಅಲ್ಲಿ ಥಟ್ಟನೆ ನಿಲ್ಲುತ್ತಾನೆ. ಹಾಗೆಯೇ ನೋಡುತ್ತಾನೆ. ಕಡಲ ನಡುವೆ ಕಾಣಿಸುತ್ತದೆ ಒಂದು ದ್ವೀಪ. ಅಲ್ಲಿ ಗುಡ್ಡ ; ಬೆಟ್ಟ, ಮರ, ಹಸಿರು, ಹಕ್ಕಿ, ಹುಲ್ಲೆ—ಇವು ಕಾಣಿಸುತ್ತವೆ. ಸರಿ; ಆ ದೂರದ ಸೊಗಸನ್ನು ನೋಡುತ್ತ ಅವನು ಭಾವನಾಪ್ರಪಂಚದಲ್ಲಿ ಮೈಮರೆಯುತ್ತಾನೆ. ಆ ದ್ವೀಪದಲ್ಲಿ ಒಬ್ಬ ಋಷಿ ಪ್ರವಚನ ನಡಸುತ್ತಿರಬಹುದಲ್ಲವೆ? ಗಂಧರ್ವನು ಗಾನಮಾಡುತ್ತಿರಬಹುದಲ್ಲವೆ? ತನ್ನ ದುಃಖ ಮರೆಯಲು ಅದು ತಕ್ಕ ಸ್ಥಳವೆಂದು,—ಕದಡಿದ ಎದೆಗೆ ಅಲ್ಲಿ ಶಾಂತಿ ದೊರೆಯಬಹುದೆಂದು,—ಅವನು ನಿರೀಕ್ಷೆಮಾಡಿಕೊಳ್ಳುತ್ತಾನೆ. ಇದರಂತೆಯೇ ಕಾವ್ಯದ ಅನುಭವ. ಈ ಲೋಕದಿಂದ ನಮ್ಮ ಮನಸ್ಸು ಕವಿ ತೋರುವ ಲೋಕಕ್ಕೆ ಯಾತ್ರೆ ಹೋಗುತ್ತದೆ. ಆ ಕಾವ್ಯಲೋಕದ ಜೀವನವನ್ನನುಭವಿಸಿ, ಅದರ ಸ್ವಭಾವವನ್ನು ಮಾನವಲೋಕದ ಸ್ವಭಾವದೊಡನೆ ಹೋಲಿಸಿ,—ವಿಜ್ಞಾನಿಯಂತೆ ಅದರ ಸೂಕ್ಷ್ಮಾಂಶ ವಿಭಜನೆಯಲ್ಲಿ ತೊಡಗಿ,—ಬಾಳಿಗೆ ಲೇಸನ್ನು ತಂದುಕೊಳ್ಳಲು ಯತ್ನಿಸುವುದು ಕಾವ್ಯಪಾಠದಿಂದ ನಮಗಾಗುವ ಮಹಾ ಪ್ರಯೋಜನ.

## ಮಹಾಕಾವ್ಯದ ದಿವ್ಯದರ್ಶನ

ಪ್ರಪಂಚದಲ್ಲಿ ಇಂದು ಯುದ್ಧ ನಡೆಯುತ್ತಿದೆ. ವ್ಯಾಸರು ಮಹಾಭಾರತದಲ್ಲಿ ಚಿತ್ರಿಸಿರುವ ಸನ್ನಿವೇಶವನ್ನು ಇಂದು ನಾವು ಕಣ್ಣಮುಂದೆ ಕಾಣುತ್ತಿದ್ದೇವೆ. ಎಲ್ಲೆಲ್ಲೂ ಯುದ್ಧಸನ್ನದ್ಧತೆ. ಎರಡು ಕಡೆಯವರೂ ಶಂಖ ಊದಿ ರಣಾಂಗಣದಲ್ಲಿ ತಮ್ಮ ಬಲಾಬಲಗಳನ್ನು ಪರೀಕ್ಷಿಸಿಕೊಳ್ಳುತ್ತಿದ್ದಾರೆ.

ಅಂದು ಭಾರತದಲ್ಲಾದ ಯುದ್ಧಸನ್ನಿವೇಶದಲ್ಲಿ ಹೋರಾಡಬೇಕಾದ ವೀರ ಪಾರ್ಥನು ಶಸ್ತ್ರಸಂನ್ಯಾಸಮಾಡಿ, ತನ್ನ ಗುರುಗಳೂ ಗೆಳೆಯರೂ ನಂಟರೂ ಇಷ್ಟರೂ ಸಾಯುವುದಕ್ಕೆ ತಾನು ಹೊಣೆಯಾಗತಕ್ಕದ್ದಲ್ಲವೆಂದು ಹೇಳುತ್ತ ವಿಷಾದಪಡುತ್ತಾನೆ. ಇಂದು ಹಿಟ್ಲರ್ ಮುಸ್ಸೊಲೀನಿಗಳಿಗೆ ಬಾರದ ಕಳವಳವೂ ಉದ್ವೇಗವೂ ಸಂಕಟವೂ ಕರುಣೆಯೂ ಅಂದು ಅರ್ಜುನನ ಹೃದಯದಲ್ಲಿ ಉಕ್ಕಿಬಂದವು. ಕೃಷ್ಣನು ಅರ್ಜುನನ ಮನಸ್ಸಿನ ಸ್ಥಿತಿಯನ್ನು ಅರಿತುಕೊಳ್ಳುತ್ತಾನೆ. ಅವನ ಸಂದೇಹಗಳನ್ನು ಪರಿಹರಿಸಲು ಯುಕ್ತಿಗಳನ್ನು ಹೇಳಿ ಕರ್ತವ್ಯವನ್ನು ಬೋಧಿಸುತ್ತಾನೆ. 'ನಾನು ಹೇಡಿಯೆನಿಸಿಕೊಂಡರೂ ಸರಿ; ಕೊಲ್ಲುವುದಕ್ಕಿಂತ ನರಕವೂ ಲೇಸೇ; ಕೊಲ್ಲುವ ಬುದ್ಧಿ ಮಾತ್ರ ಹೇಳಬೇಡ'—ಎನ್ನುತ್ತಾನೆ ಅರ್ಜುನ. ಇಬ್ಬರಿಗೂ ವಾದ ಬೆಳೆಯಿತು, ಬೆಳೆಯಿತು. ಯುದ್ಧಮಾಡಲು ತಾವು ಕಳಕ್ಕಿಳಿದಿದ್ದದ್ದು ಇಬ್ಬರಿಗೂ ಒಂದು ಕ್ಷಣ ಮರೆತುಹೋಯಿತು. ಆ ಮರೆವಿನಲ್ಲಿ ಇಬ್ಬರೂ ಒಂದು ದೊಡ್ಡ ಬೋಧನೆಯನ್ನು,—ಒಂದು ಜೀವನದ ರಹಸ್ಯವನ್ನು,—ಹೊರಕ್ಕೆ ತೆಗೆದು ಜಗತ್ತಿಗೆ ನೀಡಿದರು. ಯಾವ ತತ್ತ್ವಕ್ಕೆ ಯಾವ ಹಿನ್ನೆಲೆ!

ಮಹಾಭಾರತದಲ್ಲಿ ಗೀತೋಪದೇಶದ ಘಟ್ಟವು, —ಅದರಲ್ಲಿಯೂ ವಿಶ್ವರೂಪ ದರ್ಶನವು,—ಅದರ ಬೆಲೆಯನ್ನು ಹೆಚ್ಚಿಸಿದೆ. ಕಾವ್ಯವು ಶ್ರೇಷ್ಠವಾಗಬೇಕಾದರೆ ಅದರಲ್ಲಿ ವಿಶ್ವತತ್ತ್ವಪ್ರಕಾಶನ (Revelation) ಬೇಕು. ಕನ್ನಡ ಸಾಹಿತ್ಯ ಹೀಗೆ ಲೋಕಕ್ಕೆ ಶ್ರೇಯಸ್ಸನ್ನುಂಟುಮಾಡುವ ದಿವ್ಯದರ್ಶನಗಳಿಂದ ತುಂಬಿ ಬೆಳೆಯಲಿ.

## ಸಾಹಿತ್ಯದ ಪ್ರಳಯಶಕ್ತಿ

ಸಾಹಿತ್ಯವು ಪ್ರಪಂಚದ ಮಹಾಶಕ್ತಿಗಳಲ್ಲಿ ಒಂದು. ಬಿಸಿಲು ಮಳೆ ಬಿರು ಗಾಳಿ ಭೂಕಂಪಗಳು ಮನುಷ್ಯನ ಹೊರಗಣ ಪ್ರಕೃತಿಶಕ್ತಿಗಳು. ಸಾಹಿತ್ಯವು ಅವನೊಳಗಣ ಸಹಜಶಕ್ತಿ; ಅದು ಪೌರುಷದ ಒಂದು ರೂಪ. ಆ ಪೌರುಷ ಪ್ರಕಾಶದಲ್ಲಿ ಒಂದು ಭಾಗವು ಬಾಹ್ಯಸೃಷ್ಟಿಯನ್ನು ಕುರಿತ ವಿಜ್ಞಾನ ಅಥವಾ ಶಾಸ್ತ್ರಸಾಹಿತ್ಯ; ಇನ್ನೊಂದು ಭಾಗವು ಅಂತರಂಗ ಪರಿಪಾಕವನ್ನು ಕುರಿತ ಕಾವ್ಯಸಾಹಿತ್ಯ ಅಥವಾ ಕಲೆ. ಒಟ್ಟಿನಲ್ಲಿ ಮನುಷ್ಯನ ಮನೋಭಾವ, ಬುದ್ಧಿ ಪರಿಶ್ರಮ, ತಿಳಿವಳಿಕೆ, ನಂಬಿಕೆ, ಆಶೆ, ಅನುಭವ, ಆಲೋಚನೆ, ಅಭಿಪ್ರಾಯ, ಮತ, ಚಿಂತೆ, ಸಿದ್ಧಾಂತ—ಇವು ಸಾಹಿತ್ಯದ ಸಾರಾಂಶ. ಅದು—ಒಂದು ಮಾತಿನಲ್ಲಿ, ಜ್ಞಾನಾಂಶ ಅಥವಾ ಅದರಿಂದ ಹುಟ್ಟಿದ ಭಾವನಾಂಶ,—

ಇಂಗ್ಲಿಷಿನ 'ಐಡಿಯ' (Idea). ಈ ಜ್ಞಾನಾಂಶ ಭಾವನಾಂಶಗಳೇ ನಮ್ಮ ಜೀವಮಾನದಲ್ಲಿ ಮಹಾ ಪರಿಣಾಮಕಾರಿಗಳಾದ ಶಕ್ತಿಗಳು. ನಾವು ಏನನ್ನು ನಂಬಿದ್ದೇವೋ ಅದು ನಮ್ಮ ಬಾಳಿಗೆ ರೂಪ ಕೊಡುತ್ತದೆ; ಒಳನಂಬಿಕೆಯ ಪ್ರಭಾವ ಹೊರ ಸಂದರ್ಭಕ್ಕಿಂತ ಹೆಚ್ಚಿನದು. ಹೀಗೆ ಮನುಷ್ಯಜೀವನದಲ್ಲಿ ಪೌರುಷಶಕ್ತಿಯು ಪಾಂಚಭೌತಿಕ ಶಕ್ತಿಗಿಂತ ಕಡಮೆಯಾದದ್ದಲ್ಲ. ವಿದ್ಯುಚ್ಛಕ್ತಿ ಭೌತಾಣು (ಆ್ಯಟಮ್) ಶಕ್ತಿಗಳು ಹೇಗೋ ಮಹಾಕಾವ್ಯವು ಹಾಗೆ ನಮ್ಮ ಮನಃಪ್ರವೃತ್ತಿಗಳನ್ನೂ ನಮ್ಮ ಪುರೋದೃಶ್ಯಗಳನ್ನೂ ಮಾರ್ಪಡಿಸಬಲ್ಲದ್ದು. ಭೌತಶಕ್ತಿಯ ಕಾರ್ಯ ತತ್ಕ್ಷಣದ್ದು; ಸಾಹಿತ್ಯದ ಕಾರ್ಯ ಸಾವಕಾಶದ್ದು. ಎರಡು ಕಾರ್ಯಗಳೂ ನಿಜವಾದುವೇ. ವಿದ್ಯುಚ್ಛಕ್ತಿ ಭೌತಾಣುಶಕ್ತಿಗಳು ಭಯೋತ್ಪಾದನೆಯಿಂದ ನಮ್ಮ ನಯನೀತಿಗಳಲ್ಲಿ ಪರಿವರ್ತನೆಯನ್ನುಂಟು ಮಾಡಿದರೆ, ಕಾವ್ಯಕಲೆಗಳು ಹೃದಯಾನುಭವ ಜೀವಪರಿಪಾಕಗಳ ಮೂಲಕ ಅದೇ ವಿಷಯಗಳಲ್ಲಿ ಪರಿಷ್ಕಾರ ಮಾಡಿಸುತ್ತವೆ. ಅಣುಗೋಲ (ಬಾಂಬು) ಸಿಡಿದು ಶತ್ರುದೇಶವನ್ನು ಸುಟ್ಟರೆ, ಹೊಸ ಜ್ಞಾನವೊಂದರ ಆಸ್ಫೋಟನವು ಹಳೆಯ ಮೌಢ್ಯವೊಂದನ್ನು ನಾಶಗೊಳಿಸೀತು. ಹೊಸ ಭಾವನೆಯೊಂದು ತಲೆಯೆತ್ತಿ ಹಳೆಯ ಪ್ರಪಂಚವೊಂದನ್ನು ತೊಡೆದುಹಾಕೀತು. ಸಾಕ್ರಟೀಸನೇ ಸಾಕ್ಷಿ. ಹೀಗೆ ಸಾಹಿತ್ಯದಲ್ಲಿಯೂ ಉತ್ಪಾತಶಕ್ತಿಗಳು ಅಡಗಿರುತ್ತವೆ. ಆದದ್ದರಿಂದಲೇ ನಿರಂಕುಶ ಪ್ರಭುವಿಗೆ ಕವಿ ತಾತ್ತ್ವಿಕರ ವಿಷಯದಲ್ಲಿ ಶಂಕೆ. ವಾಗ್ದೇವಿ ವೀಣೆ ನುಡಿಸಿ, ಕಾಳಿಯಿಂದ ಕರವಾಳವನ್ನಾಡಿಸಿಯಾಳು.

# ೯. ಕನ್ನಡ ಜನತೆಗೋಸ್ಕರ ಕನ್ನಡ*

ಈ ಹೊತ್ತು ನಮಗೆಲ್ಲ ಬಹು ಸಂತೋಷದ ದಿವಸ; ಹೇಗೆ ಸಂತೋಷದ ದಿವಸವೋ ಹಾಗೆಯೇ ಕೃತಜ್ಞತೆಯ ದಿವಸ; ಹೇಗೆ ಕೃತಜ್ಞತೆಯ ದಿವಸವೋ ಹಾಗೆಯೇ ಪ್ರತಿಜ್ಞೆಯ ದಿವಸ. ನಮ್ಮ ಸಂಘದ ಇಪ್ಪತ್ತೈದು ವರ್ಷಗಳ ಅಭಿವೃದ್ಧಿಗಾಗಿ ಸಂತೋಷ; ಅದಕ್ಕೆ ಕಾರಣಕರ್ತರೂ ಉಪಕಾರಿಗಳೂ ಆದವರಿಗೆ ಧನ್ಯವಾದ ಸಮರ್ಪಣೆ; ಅದರ ಉದ್ದೇಶಗಳೂ ಸಂಕಲ್ಪಗಳೂ ಮುಂದೆ ಇನ್ನೂ ಚೆನ್ನಾಗಿ ನೆರವೇರಲೆಂದು ದೃಢಪ್ರತಿಜ್ಞೆ—ಈ ತೆರನಾದವು ಈ ಹೊತ್ತು ನಮ್ಮೆಲ್ಲರ ಮನಸ್ಸುಗಳಲ್ಲಿ ತುಂಬಿರುವ ಭಾವನೆಗಳು.

ಈಗ ನಮ್ಮ ದೇಶದಲ್ಲಿ ಕರ್ಣಾಟಕ ಸಂಘವೆಂಬ ಹೆಸರಿನ ಸಂಸ್ಥೆಗಳು ಹತ್ತಾರಿವೆ. ಅಂಥವು ಇನ್ನೂ ಹೊಸ ಹೊಸವು ಹುಟ್ಟುತ್ತ ಕನ್ನಡ ನಾಡಿನಲ್ಲೆಲ್ಲಾ ವ್ಯಾಪಿಸುತ್ತಿವೆ. ನನಗೆ ತಿಳಿದಿರುವ ಮಟ್ಟಿಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವೇ ಅವುಗಳಲ್ಲೆಲ್ಲಾ ಮೊದಲನೆಯದು. ವಯೋದೃಷ್ಟಿಯಿಂದ ಇದು ಹಿರಿಯದಾಗಿರುವಂತೆ ಕಾರ್ಯದೃಷ್ಟಿಯಿಂದ ಇದು ಎಲ್ಲ ಸಂಘಗಳಿಗೂ ಇದುವರೆಗೂ ಮಾರ್ಗದರ್ಶಿಯಾಗಿ ನಡೆದಿದೆಯೆಂದು ಹೇಳಿದರೆ ಆ ಮಾತನ್ನು ಯಾರೂ ನಿಷೇಧಿಸಲಾರರೆಂದು ನನಗೆ ಭರವಸೆ ಇದೆ.

## ಯುವಜನ ಪ್ರಯತ್ನ

ಈ ಸಂಘ ಹುಟ್ಟಿದಾಗಿನ ವಿದ್ಯಮಾನಗಳು ನನಗೆ ಚೆನ್ನಾಗಿ ಜ್ಞಾಪಕದಲ್ಲಿವೆ. ಆಗ್ಗೆ ಸಾಹಿತ್ಯ ಪರಿಷತ್ತು ಹುಟ್ಟಿ ೩-೪ ವರ್ಷವಾಗಿತ್ತು. ಅದು ನಾಡ ಹಿರಿಯರು ಮಾಡಿದ್ದ ಸಂಸ್ಥೆ. ಆದರೆ ಕರ್ಣಾಟಕದ ಪುನರುಜ್ಜೀವನ ಸಂರಂಭ ಬಹು ವಿಸ್ತಾರವಾದದ್ದು; ಬಹು ಮಹತ್ತ್ವದ್ದು. ಅದಕ್ಕೆ ಪ್ರೌಢಪರಿಣತ ಜನರ ಶ್ರದ್ಧೆಯ ಪ್ರಯತ್ನ ಅವಶ್ಯವಾದಂತೆಯೇ ತರುಣ ಜನರ ಉತ್ಸಾಹ ಸಹಕಾರವೂ ಅವಶ್ಯವೆಂಬುದನ್ನು ಕಂಡುಕೊಂಡವರು ಶ್ರೀಮಾನ್ ಎ. ಆರ್.

---

* ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ರಜತೋತ್ಸವ ಸಭೆಯಲ್ಲಿ (ತಾ|| ೧೬-೧-೧೯೪೪) ಮಾಡಿದ ಅಧ್ಯಕ್ಷ ಭಾಷಣದಿಂದ. (ಪ್ರಬುದ್ಧ ಕರ್ಣಾಟಕ, ಸಂ. ೨೫-೪.)

ಕೃಷ್ಣಶಾಸ್ತ್ರಿಗಳು ಮತ್ತು ಅವರ ಸ್ನೇಹಿತರು ಕೆಲವರು. ಈ ಹೊತ್ತು ನಾಂದೀ ಪೀಠದಲ್ಲಿ ಕುಳಿತು ನಮ್ಮಿಂದ ಅಭಿನಂದನೆಗಳನ್ನು ಪಡೆಯಬೇಕಾದವರು ಶ್ರೀ ಕೃಷ್ಣಶಾಸ್ತ್ರಿಗಳು. ಅವರು ಈ ಸಭೆಗೆ ಬರಲು ಅನುಕೂಲಿಸದೆ ಹೋದದ್ದರ ವ್ಯಾಕುಲ ನಮ್ಮೆಲ್ಲರ ಮನಸ್ಸುಗಳಲ್ಲಿ ಆಳವಾಗಿ ತುಂಬಿಕೊಂಡಿದೆ. ಅವರು ನೆಟ್ಟ ಸಸಿ ಈಗ ಬೆಳೆದು, ಹೆಮ್ಮರವಾಗಿ ಹರಡಿ, ಕೊಂಬೆ ಬಿಳಲುಗಳನ್ನು ಹಬ್ಬಿಸಿದೆ. ಅದರ ಬಿತ್ತದಿಂದ ಹತ್ತಾರು ಬೇರೆ ಸಸಿಗಳು ಮೊಳೆತು ಬೆಳೆಯುತ್ತಿವೆ. ಇದನ್ನು ನೋಡುವ ಅವರ ಸಂತೋಷ ಅತಿಶಯವಾದ ಸಂತೋಷ,—ಕೃತಾರ್ಥತೆಯ ಸಂತೋಷ.

ಒಂದು ಸಂಸ್ಥೆಯ ಇಪ್ಪತ್ತೈದು ವರ್ಷಗಳ ಬೆಳವಣಿಗೆ ನಮ್ಮ ದೇಶಕ್ಕೆ ಸಾಮಾನ್ಯ ಸಂಗತಿಯಲ್ಲ. ನಮ್ಮ ಉತ್ಸಾಹಗಳು ಸಾಮಾನ್ಯವಾಗಿ ಅಲ್ಪಾಯುಷ್ಯದವು. ಇಂಥ ಸಂಘದ ಸ್ಥಾಪನೆಯ ದಿವಸವೇ ನಮ್ಮಲ್ಲಿರುವ ಸಂಭ್ರಮ ಶಕ್ತಿಯೆಲ್ಲ ವೆಚ್ಚವಾಗಿಹೋಗುತ್ತದೆ. ನಮ್ಮ ಸಂಘದ ಸಂಸ್ಥಾಪಕರೂ ಅದರ ಮೊದಲನೆಯ ಅಧ್ಯಕ್ಷರೂ ಆಗಿದ್ದ ಪುಣ್ಯಶ್ಲೋಕರಾದ ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು ಅನೇಕ ಸಂಘ ಸಂಸ್ಥೆಗಳ ಅನುಭವವಿದ್ದವರು. ಅವರು 'ಆರಂಭಶೂರಾಃ ಖಲು ದಾಕ್ಷಿಣಾತ್ಯಾಃ' ಎಂದು ನಮಗೆ ಚುಚ್ಚಿ ಚುಚ್ಚಿ ಹೇಳದೆ ಇದ್ದ ವಾರ ವರ್ಷದ ೫೨ ವಾರಗಳಲ್ಲಿ ಒಂದಾದರೂ ಇರಲಿಲ್ಲ; ವರ್ಷವರ್ಷವೂ ಹಾಗೆಯೇ. ಇಂಥಾದ್ದರಲ್ಲಿ ಈ ಸಂಘ ಇಷ್ಟು ದೀರ್ಘಕಾಲ ಉಳಿದಿರುವುದು ಮಾತ್ರವೇ ಅಲ್ಲದೆ, ತಕ್ಕಷ್ಟು ಚಟುವಟಿಕೆಯಿಂದ ಕೆಲಸಮಾಡಿ ತನ್ನ ಉದ್ದೇಶಗಳನ್ನು ಸಾಧಿಸಿ ಪ್ರಭಾವಶಾಲಿಯೆನಿಸಿದೆ.

## ಕೆಲವು ನೆನಪುಗಳು

ಶ್ರೀ ಕೃಷ್ಣಶಾಸ್ತ್ರಿಗಳು ಈ ಸಂಘದ ಸ್ಥಾಪನೆಗೂ ಇದರ ಚರಮೂರ್ತಿಯಾದ 'ಪ್ರಬುದ್ಧ ಕರ್ಣಾಟಕ'ದ ಪ್ರಕಟನೆಗೂ ಕೈಹಚ್ಚಿದಾಗ ಅವರಿಗೆ ದೊರೆತ ಪ್ರೋತ್ಸಾಹ ಯಥೇಷ್ಟವಾಗೇನೂ ಇರಲಿಲ್ಲ. ಶ್ರೀ ಎನ್. ಎಸ್. ಸುಬ್ಬರಾಯರವರು ಆಗ ಈ ವಿಷಯದಲ್ಲಿ ಅಷ್ಟೇನೂ ಆಶಾವಾದಿಗಳಾಗಿರಲಿಲ್ಲವೆಂದು ನಾನು ಕೇಳಿದ್ದೇನೆ. ನಾನು ಕೂಡ ಶಾಸ್ತ್ರಿಗಳಿಗೆ ಹೆಚ್ಚು ಭರವಸೆ ಕೊಟ್ಟಹಾಗೆ ಜ್ಞಾಪಕವಿಲ್ಲ. ಆಗ್ಗೆ ಶ್ರೀ ವೆಂಕಟನಾರಣಪ್ಪನವರೂ ನಾನೂ ಇಂಥಾ ಒಂದೆರಡು ಪ್ರಶ್ನೆಗಳಲ್ಲಿ ಕೈಸುಟ್ಟುಕೊಂಡಿದ್ದೆವು. ಆದರೆ ಶ್ರೀ ಕೃಷ್ಣಶಾಸ್ತ್ರಿಗಳು ತಮ್ಮ ವಿದ್ಯಾರ್ಥಿಗಳ ಮಹಿಮೆಯನ್ನು ನಮಗಿಂತ ಚೆನ್ನಾಗಿ

ಕಂಡುಕೊಂಡಿದ್ದರು. ಆಗಿನ ವಿದ್ಯಾರ್ಥಿಗಳು ನಾಲ್ಕಾರು ಮಂದಿ ಮಾಡಿದ ಕೆಲಸವನ್ನು ನಾನು ಕಣ್ಣಾರ ನೋಡಿದ್ದೇನೆ. ಶ್ರೀ ಸಿ. ಕೆ. ವೆಂಕಟರಾಮಯ್ಯ ನವರು 'ಪ್ರಬುದ್ಧ ಕರ್ಣಾಟಕ'ದ ಮೊದಮೊದಲನೆಯ ಸಂಚಿಕೆಗಳಲ್ಲಿ ಬರೆದಿದ್ದದ್ದು ನನಗೆ ಜ್ಞಾಪಕವಿದೆ. ಶ್ರೀ ಎಸ್. ವಿ. ರಂಗಣ್ಣನವರ ಆಗಿನ ಪ್ರಬಂಧಗಳನ್ನು ನಾನು ಮರೆತಿಲ್ಲ. ಈಗ ಸಿಕಂದರಾಬಾದಿನಲ್ಲಿರುವ ಶ್ರೀ ಸಿ. ಎನ್. ರಂಗಾಚಾರ್ಯರವರು ಶ್ರೀ ಸರ್ ಎಂ. ವಿಶ್ವೇಶ್ವರಯ್ಯನವರ ವರ್ಷವರ್ಧಂತಿಗಾಗಿ ಜನೋಪಕಾರಿ ದೊಡ್ಡಣ್ಣಶೆಟ್ಟರವರ ಸಭಾಭವನದಲ್ಲಿ ಉತ್ಸವಸಭೆ ಸೇರಿಸಿದ್ದದ್ದೂ, ಆ ಪ್ರಚಂಡ ಸಭೆಯಲ್ಲಿ ದಿವಂಗತ ಶ್ರೀ ಕೆ. ಎಚ್. ರಾಮಯ್ಯನವರು ಭಾಷಣಮಾಡುತ್ತ, ಶ್ರೀ ವಿಶ್ವೇಶ್ವರಯ್ಯನವರನ್ನು 'ಫಿಲಡೆಲ್ಫಿಯ' ರೆಯಿಲ್ವೇ ಎಂಜಿನ್ ಯಂತ್ರಕ್ಕೂ ಮೈಸೂರು ಜನವನ್ನು ಎಮ್ಮೆಕೋಣದ ಒಡ್ಡ ಬಂಡಿಗೂ ಹೋಲಿಸಿದ್ದೂ, ಆ ಎಂಜಿನ್ ವೇಗವು ಆ ಹಳೆಯ ಬಂಡಿಗೆ ತಗುಲಿದಾಗ ಆದ ಡಕ್ಕಾಮುಕ್ಕಿಯನ್ನು ಆತ ಅಂಗಾನುಕರಣದೊಡನೆ ವರ್ಣಿಸಿದ್ದೂ, ಆಗ ನಾವೆಲ್ಲ ಹೊಟ್ಟೆಬಿರಿಯ ನಕ್ಕದ್ದೂ ನನಗೆ ಚೆನ್ನಾಗಿ ಜ್ಞಾಪಕವಿದೆ. ಶ್ರೀ ನಿಟ್ಟೂರು ಶ್ರೀನಿವಾಸರಾಯರು 'ಪ್ರಬುದ್ಧ ಕರ್ಣಾಟಕ'ದ ಕಟ್ಟುಗಳನ್ನು ಬೈಸಿಕಲ್ಲಿಗೆ ಕಟ್ಟಿಕೊಂಡು ಭೂಮ್ಯಾಕಾಶಗಳಲ್ಲೆಲ್ಲ ಸುತ್ತಿ ಸುತ್ತಿ ಚಂದಾ ವಸೂಲುಮಾಡಿ ತಂದದ್ದೂ ಜ್ಞಾಪಕವಿದೆ. ಶ್ರೀ ಡಿ. ಗುರುರಾಯರ ಭಾರತವಾಚನದ ಕುತೂಹಲವೂ ಜ್ಞಾಪಕದಲ್ಲಿದೆ. ಶ್ರೀ ಎಸ್. ಡಿ. ಗಣೇಶ ರಾಯರು, ಶ್ರೀ ಭೂಪಾಲಂ ಚಂದ್ರಶೇಖರಯ್ಯನವರು, ಡಾಕ್ಟರ್ ಪಿ. ಕೃಷ್ಣ ರಾಯರು, ಶ್ರೀ ಟಿ. ಗೋವಿಂದರಾಯರು, ಶ್ರೀ ಎಂ. ನರಸಿಂಹಮೂರ್ತಿಗಳವರು—ಇನ್ನೂ ಅನೇಕ ಮಂದಿ ಕಾರ್ಯದರ್ಶಿಗಳೂ ಕಾರ್ಯಕರ್ತರೂ ಮಾಡಿದ ಸೇವೆಸಾಹಸಗಳು ನನ್ನ ನೆನಪಿನಲ್ಲಿವೆ. ಈಗ ಈ ಕಾಲೇಜಿನಲ್ಲಿರುವ ವಿದ್ಯಾರ್ಥಿಗಳು ಉತ್ಸಾಹದಲ್ಲಿಯೂ ಕಾರ್ಯನಿಷ್ಠೆಯಲ್ಲಿಯೂ ಆ ಪೂರ್ವಿಕರ ಮಟ್ಟವನ್ನು ಇಳಿಸದೆ ಉಳಿಸಿಕೊಂಡಿದ್ದಾರೆಂದು ನಾನು ನಂಬಿದ್ದೇನೆ. 'ಆಗಿನ ಕಾಲಸ್ಥಿತಿಗಳು ಅನುಕೂಲವಾದವು; ಆಗಿನಂತೆ ವಿದ್ಯಾರ್ಥಿಗಳು ಕೂಟ ಕಟ್ಟುವುದು ಈಗ ಸಾಧ್ಯವಿಲ್ಲ'—ಎಂದು ಯಾರಾದರೂ ಹೇಳುವುದಾದರೆ ನಾನು ಒಪ್ಪಿಕೊಳ್ಳುವವನಲ್ಲ. ಈಗ ಉಪಾಹಾರದ ಅಂಗಡಿಗಳಲ್ಲಿ ಬೆಲೆ ಮಿತಿ ಮೀರಿ ಹೋಗಿದೆ ಎಂದು ವಾದಿಸಿದರೂ ಪ್ರಯೋಜನವಿಲ್ಲ. ಆಗಿನವರಿಗೂ ಅನನುಕೂಲತೆಗಳು ಎಷ್ಟೋ ಇರಲೇ ಇದ್ದವು. ಆಗ ಯೂನಿವರ್ಸಿಟಿ ಯೂನಿಯನ್ನೂ ಅದರ ರೆಸ್ಟುರೆಂಟೂ ಇರಲಿಲ್ಲ. ಆದರೂ ಹೇಗೋ ಅವರು ಕಷ್ಟಗಳನ್ನು ನಿರ್ವಹಿಸಿ, ಕರ್ಣಾಟಕ ಸಂಘದ ಹೆಸರಿನ ಗೋಷ್ಠೀಸಮಾರಂಭ

ಗಳನ್ನು ಉತ್ಸಾಹದೊಡನೆ ನಡಸಿಕೊಂಡು ಬಂದರು. ಇಂದಿನ ವಿದ್ಯಾರ್ಥಿಗಳು ಹಿಂದಿನವರ ಆ ದಿವ್ಯೋದಾಹರಣೆಯನ್ನು ಸರ್ವದಾ ಗಮನದಲ್ಲಿರಿಸಿಕೊಂಡು, ಅಭಿಮಾನದಿಂದ ಈ ಸಂಘದ ಪುರೋವೃದ್ಧಿಯನ್ನು ಸಾಧಿಸಿಯಾರೆಂದು ನಾನು ನೆಚ್ಚಿಗೆ ಇಟ್ಟುಕೊಂಡಿದ್ದೇನೆ.

## ಶ್ರೀ ವೆಂಕಟನಾರಣಪ್ಪನವರು

ಸಂಘದ ಮೂಲಪುರುಷರಲ್ಲಿ ಇಬ್ಬರನ್ನು ಪ್ರತ್ಯೇಕ ಸ್ಮರಣೆಗಾಗಿ ಉಳಿಸಿಕೊಂಡಿದ್ದೇನೆ. ಒಬ್ಬರು ಅಧ್ಯಕ್ಷರಾಗಿದ್ದ ಪವಿತ್ರಚರಿತ್ರರಾದ ಶ್ರೀ ಬೆಳ್ಳಾವೆಯ ವೆಂಕಟನಾರಣಪ್ಪನವರು, ಇನ್ನೊಬ್ಬರು ಆಮೇಲೆ ಅಧ್ಯಕ್ಷ ರಾಗಿದ್ದ ಸರ್ವಪ್ರಿಯರಾದ ಟಿ. ಎಸ್. ವೆಂಕಣ್ಣಯ್ಯನವರು.

ಶ್ರೀ ವೆಂಕಟನಾರಣಪ್ಪನವರು ಪ್ರಾರಂಭದಿಂದ ಸುಮಾರು ೧೨–೧೩ ವರ್ಷ ಅಧ್ಯಕ್ಷರಾಗಿದ್ದರು. ತಾವು ಸೇರಿದ್ದ ಯಾವ ಸಂಸ್ಥೆಯಲ್ಲಿಯೂ ಅವರು 'ನಿದ್ರಾಮುದ್ರಿತ' ಸದಸ್ಯರಾಗಿದ್ದವರಲ್ಲ. ಎಲ್ಲಿದ್ದರೂ ಅವರು ಒಂದು ವಿದ್ಯುತ್ತಿನ ಪಂಜು. ಎಲ್ಲ ಕಾರ್ಯಭಾಗಗಳ ಮೇಲೂ ಅವರ ಕಣ್ಣು; ಎಲ್ಲ ಆಡಳಿತಗಳಲ್ಲಿಯೂ ಅವರ ಕೈವಾಡ. ಯಾವುದರಲ್ಲಿಯಾದರೂ ಸ್ವಲ್ಪ ಚ-ತು ತಪ್ಪಿತೆಂದರೆ ಶಪಥ; ಸ್ವಲ್ಪ ಪ್ರಮಾದವಾಯಿತೆಂದರೆ ಆತ್ಮ ಪ್ರಾಯಶ್ಚಿತ್ತ. ಈಗಣ ಕಾಲದವರ 'ಹೇಗೆಂದರೆ ಹಾಗೆ' ಎನ್ನುವ ನಡವಳಿಕೆಗಳನ್ನು ನೋಡಿದಾಗ ನಮಗೆ ನಂಬಲಾಗದೆನ್ನಿಸುವಷ್ಟುಮಟ್ಟಿನ ಸೂತ್ರನಿಷ್ಠೆ ವೆಂಕಟನಾರಣಪ್ಪನವರದು. ಕೃಷ್ಣಶಾಸ್ತ್ರಿಗಳವರ ಸ್ವಭಾವವೂ ಆ ವಿಚಾರದಲ್ಲಿ ಅದೇ ವೀರಪಂಥದ್ದೇ. ಅವರಿಬ್ಬರೂ ಒಟ್ಟುಗೂಡಿದ ಮೇಲೆ ಸಂಘದ ಕಾರ್ಯರೀತಿಯಲ್ಲಿ ಕ್ರಮ ವಿಚಕ್ಷಣೆಗಳು ಎದ್ದುಕಾಣು ತ್ತಿದ್ದದ್ದು ಸುನಿರೀಕ್ಷಿತವಾಗಿಯೇ ಇತ್ತು. ಒಂದು ಮೀಟಿಂಗ್ ನೋಟೀಸ್ ಅಚ್ಚಾಗಬೇಕಾದರೂ ವೆಂಕಟನಾರಣಪ್ಪನವರು ಖುದ್ದು ಅದನ್ನು ನೋಡ ಬೇಕು. ಅದರಲ್ಲಿ 'ಘಂಟೆ' ಅಂತ ಇರಬೇಕೆ? 'ಗಂಟೆ' ಅಂತ ಇರ ಬೇಕೆ? 'ನಡಿಯುತ್ತದೆ' ಅಂತ ಇರಬೇಕೆ? 'ನಡೆಯುತ್ತದೆ' ಅಂತ ಇರಬೇಕೆ? ಅಥವಾ 'ನಡೆಯುವುದು' ಅಂತ ಇರಬೇಕೆ? 'ನಡೆಯುವದು' ಅಂತ ಇರಬೇಕೆ? ಇಂಥಾ ಚರ್ಚೆಗಳು ನೂರಾರು ನಡೆಯಬೇಕು ಅವರಲ್ಲಿ. "ಶ್ರೀಶೈಲಾದಿಪ್ರಸಿದ್ಧಂ" ಎಂಬ ಸಮಾಸಪದವನ್ನು ಮೂರಾಗಿ ಬಿಡಿಸಿ ಬಿಡಿಸಿ ಅಚ್ಚುಮಾಡಬೇಕೆ? ಅಥವಾ ಒಂದುಂಡೆಯಾಗಿ ತೋರಿಸಬೇಕೆ? ವಾಚನಸೌಲಭ್ಯವೆ, ವ್ಯಾಕರಣವಿಧಿಯೆ? ಕರ್ಪೂರ ಎಂಬ ಮಾತಿನ ಬರೆಹದಲ್ಲಿ

'ಪೂ' ಬರೆದು ಅರೆಕಾವತ್ತು ಕೊಡಬೇಕೆ? 'ರೂ' ಬರೆದು ಅದಕ್ಕೆ 'ಪ' ವತ್ತು ಕೊಡಬೇಕೆ? ಸಂಸ್ಕೃತದ 'ಕರ್ಪೂರ'ದಲ್ಲಿಯ ಅಕ್ಷರಸಂಯೋಜನೆ ಕನ್ನಡದ 'ಏರ್ಪಾಟಿ'ಗೂ ಸರಿಯಾದೀತೆ? 'ಕರ್ಣಾಟಕ'ವೆ? 'ಕರ್ನಾಟಕ'ವೆ? ಇಂಥಾ ಸಂದೇಹಗಳೂ ಪ್ರಶ್ನೆಗಳೂ ವೆಂಕಟನಾರಣಪ್ಪನವರಿಗೆ ದಿಕ್ಕುದಿಕ್ಕಿನಲ್ಲಿಯೂ ಎದ್ದು ಕಾಣುತ್ತಿದ್ದವು. ತಾಳ್ಮೆಯಿಲ್ಲದವರು ಅವರ ವ್ರತಚರ್ಯೆಯನ್ನು ಒಣ ಛಾನಸವೆಂದು ಕರೆಯಬಹುದು. ಭಾಷೆ ಪವಿತ್ರವಸ್ತುವೆನ್ನುವವರು ಅದನ್ನು ಧರ್ಮೇಂದ್ರಿಯಜಾಗೃತಿಯೆನ್ನಬಹುದು. ಅವರ ಮನಸ್ಸಿಗೆ ಭಾಷೆಯೆಂಬುದು ಒಂದು ಸಜೀವಪದಾರ್ಥ. ಅದು ಸರಸ್ವತಿಯ ಶರೀರ. ಅಪಶಬ್ದಗಳನ್ನೂ ಅಸಾಧುರೂಪಗಳನ್ನೂ ವಾಕ್ಯದಲ್ಲಿ ಪ್ರಯೋಗಮಾಡಿದರೆ ಸರಸ್ವತಿಯ ಮೈಕೈಗಳನ್ನು ತಿರುಚಿ ನೋಯಿಸಿದಂತೆ ಎಂದು ಅವರ ಭೀತಿ. ಅದು ಹೇಗಾದರಿರಲಿ. ಅಂಥವರ ಎದುರಿನಲ್ಲಿ ಕುಳಿತರೆ ತೂಕಡಿಕೆಗೆ ಮಾತ್ರ ಅವಕಾಶ ದೊರೆಯದು. ಸಂಘದ ಒಂದೆರಡು ಪ್ರಕಟನೆಗಳನ್ನು ಅಚ್ಚು ಮಾಡಿಸುವ ಕಾಲದಲ್ಲಿ—ಪುಸ್ತಕದ ಆಕಾರ, ಅಕ್ಷರದ ಮಾಟ, ಕಾಗದದ ನುಣುಪು, ರಟ್ಟಿನ ಅಂದ, ಚಿತ್ರಗಳ ಸೊಗಸು, ಕರಡುಪ್ರತಿಗಳ ಶೋಧನೆ—ಈ ನಾನಾ ಸಣ್ಣ ಸಣ್ಣ ವಿವರಗಳಿಗೆ ಅವರು ಸಲ್ಲಿಸುತ್ತಿದ್ದ ಪೂರ್ವಾಲೋಚನೆ, ಜಾಗರೂಕತೆ, ಮುಹೂರ್ತಪಾಲನೆ—ಇವು ಯಜ್ಞಶಾಲೆಯ ನಿಯಮಕಲಾಪವನ್ನು ಜ್ಞಾಪಕಕ್ಕೆ ತರುತ್ತಿದ್ದವು. ಇಷ್ಟೆಲ್ಲ ಅವರು ಈ ಸಂಘಕ್ಕಾಗಿ ಶ್ರಮಪಡುತ್ತಿದ್ದರೂ ಯಾರಾದರೂ ಅವರ ಅಧ್ಯಕ್ಷದಕ್ಷತೆಯನ್ನು ಪ್ರಶಂಸೆ ಮಾಡಿದರೆಂದರೆ, ಅವರು ಕೊಡುತ್ತಿದ್ದ ಜವಾಬೇನು? 'ಗುಡಿಯ ಗೋಪುರವನ್ನು ನೋಡಿದ್ದೀರೋ? ಗೋಪುರದ ತಳದಲ್ಲಿ ಶಿಲ್ಪಿಯು ಗುಜ್ಜುಭೇತಾಳಗಳ ಸಾಲನ್ನು ಇಟ್ಟಿರುತ್ತಾನೆ. ಗೋಪುರದ ಭಾರವನ್ನೆಲ್ಲ ಆ ಭೇತಾಳ ಬೊಂಬೆಗಳೇ ಹೆಗಲಮೇಲೆ ಹೊತ್ತಿರುವಂತೆ ಅವುಗಳ ಮೈಬಾಗು ಕೈಸನ್ನೆಗಳಿಂದ ತೋರುತ್ತದೆ. ನಾನು ಅಂಥ ಗುಜ್ಜುಗೊಂಬೆ. ಗೋಪುರದ ನಿಜವಾದ ಆಧಾರ ಕೃಷ್ಣಶಾಸ್ತ್ರಿಗಳು, ವೆಂಕಣ್ಣಯ್ಯನವರು.' ಹೀಗೆ ಹೇಳುತ್ತಿದ್ದ ನಮ್ರತಾರೂಪದ ದೊಡ್ಡತನ ವೆಂಕಟನಾರಣಪ್ಪನವರದು. ಅಂಥವರ ಸ್ನೇಹಾನುಗ್ರಹದ ಮಹಿಮೆ ಹಾಗಿರಲಿ, ಅವರೊಡನೆ ಆಡಿದ ಜಗಳವೂ ಸಹ ಒಂದು ವಿದ್ಯಾಭ್ಯಾಸ. ಅವರ ಸಹವಾಸವೇ ಪ್ರಾಮಾಣಿಕತೆಯಲ್ಲಿ ಒಂದು ಪಾಠ. ಅವರ ವಿಶ್ವಾಸ ಒಂದು ಭಾಗ್ಯ. ಅವರ ಆಕ್ಷೇಪಣೆಯೂ ಆಶೀರ್ವಾದವೇ. ಅವರ ಈ ಭಾವಚಿತ್ರವು ಸಾಂಘಿಕರ ತಲೆಮೊರೆ ತಲೆಮೊರೆಗೂ ಮನಃಪ್ರಸಾದಕರವಾಗಿ, ಕರ್ತವ್ಯನಿಷ್ಠಾಪ್ರೇರೇಪಕವಾಗಿ, ಪುಣ್ಯಸ್ಮೃತಿಸಾಧನವಾಗಲಿ.

## ಶ್ರೀ ವೆಂಕಣ್ಣಯ್ಯನವರು

ವೆಂಕಣ್ಣಯ್ಯನವರ ಹೆಸರು ಹೇಳುವಾಗ ಕಣ್ಣು ಒದ್ದೆಯಾಗದೆ ಇರುವುದು ನನಗೆ ಇನ್ನೂ ಅಸಾಧ್ಯವಾಗಿದೆ. ನನ್ನ ಜೀವನದ ಒಂದು ಭಾಗಕ್ಕೆ ಆತನ ಪ್ರಭಾವ ಸೂರ್ಯರಶ್ಮಿಯಂತೆ ಇತ್ತು. ಆತ ಸದ್ದು ಗದ್ದಲದ ಮನುಷ್ಯನಲ್ಲ. ಆತನಲ್ಲಿ ಎಲ್ಲ ಸೌಮ್ಯ, ಎಲ್ಲ ಸೌಜನ್ಯ, ಎಲ್ಲ ಸೌಕುಮಾರ್ಯ. ಆತ ಯಾವ ಗೋಷ್ಠಿಗೆ ಬಂದರೂ 'ಋತುಗಳ ರಾಜ' ಬಂದಹಾಗೆ:

ಶಾಂತಾ ಮಹಾನ್ತೋ ನಿವಸನ್ತಿ ಸನ್ತಃ
ವಸಂತವಲ್ಲೋಕಹಿತಂ ಚರನ್ತಃ||

ಮರ ಈ ಹೊತ್ತೆಲ್ಲ ಒಣಗಿ ಸೌದೆಯಾದಂತೆ ತೋರುತ್ತದೆ. ನಾಳೆ ನೋಡಿದರೆ ಅದರಲ್ಲಿ ಚಿಗುರು ಒಡೆದಿರುತ್ತದೆ. ಬಳ್ಳಿ ಈ ಸಂಜೆ ಕಸದ ಕಡ್ಡಿಯಂತೆ ಕಾಣಿಸುತ್ತದೆ; ಬೆಳಗಾಗ ಅದರಲ್ಲಿ ಮೊಗ್ಗು ಕುಚ್ಚು ಕುಚ್ಚಾಗಿ ಹೊಮ್ಮಿರುತ್ತದೆ. ರಾತ್ರಿಯ ಮೌನದಲ್ಲಿ ನಡೆದಿರುತ್ತದೆ ಈ ನೂತನ ಸೃಷ್ಟಿ; ಅದು ವಸಂತ ಮಾಯಿಗನ ಕೈಮಾಟ. ವೆಂಕಣ್ಣಯ್ಯ ಇದ್ದ ಕಡೆ ಹಾಗೆ: ಮೂಕನೂ ಮಾತನಾಡುತ್ತಾನೆ, ಮಂಕನೂ ಗೆಲುವಾಗುತ್ತಾನೆ. ವೆಂಕಣ್ಣಯ್ಯನ ಸ್ನೇಹದ ಕಣ್ಣು, ಅರ್ಥ ತುಂಬಿದ ನಗು, ಮರ್ಯಾದೆಯ ನವುರಿನ ಅಂಗಭಾವ, ಆರಿಸಿದ ತೂಗಿಸಿದ ಆಳದ ಮಾತು—ಇವಿಷ್ಟೇ ಬಹುಜನದಿಂದ ಬಹು ಸುಕೃತಗಳನ್ನು ಮಾಡಿಸಿವೆ. ಆತನಿಗೆ ಕರ್ಣಾಟಕ ಸಂಘದ ಮತ್ತು 'ಪ್ರಬುದ್ಧ ಕರ್ಣಾಟಕ'ದ ಋಣ ಎಷ್ಟು ಮುಟ್ಟಿನದೆಂಬುದು ಎಣಿಕೆಗೆ ಸಿಕ್ಕಲಾರದ ಲೆಕ್ಕ.

'ಪ್ರಬುದ್ಧ ಕರ್ಣಾಟಕ'ದ ಪ್ರಸ್ತಾವದಲ್ಲಿ ಶ್ರೀಮಾನ್ ಎನ್. ಎಸ್. ಸುಬ್ಬರಾಯರವರನ್ನು ಸ್ಮರಿಸದಿದ್ದರೆ ಕೃತಜ್ಞತಾಲೋಪವೇ ಸರಿ. ಈ ಸಂಘ ತಾನು ಹೊರಡಿಸಿ ನಡಸುತ್ತಿದ್ದ ಪತ್ರಿಕೆಯನ್ನು ವಿಶ್ವವಿದ್ಯಾನಿಲಯದ ಅಧಿಕಾರ ಮಂಡಲಕ್ಕೆ ವಹಿಸಿಕೊಟ್ಟದ್ದರ ಉಪಯುಕ್ತತೆಯ ವಿಷಯದಲ್ಲಿ ಅಭಿಪ್ರಾಯ ಭೇದ ಇನ್ನೂ ಇದ್ದೇ ಇದೆ. ಅದರ ತೀರ್ಮಾನ ಹೇಗಾದರಿರಲಿ, ಪತ್ರಿಕೆ ವಿಶ್ವವಿದ್ಯಾನಿಲಯದ್ದಾದ ಮೇಲೆ ಶ್ರೀಮಾನ್ ಸುಬ್ಬರಾಯರು ವೈಸ್-ಚಾನ್ಸಲರಾಗಿ ಅದರ ವಿಷಯದಲ್ಲಿ ತೋರಿದ ಆದರೌದಾರ್ಯಗಳು ಪ್ರಶಂಸನೀಯವಾಗಿವೆ.

*   *   *

## ಕಾರ್ಯದೀಕ್ಷಾ ಯುಗ

ಕಳೆದ ೨೫-೩೦ ವರ್ಷಗಳಲ್ಲಿ ಕನ್ನಡಕ್ಕಾಗಿ ಆಗಿರುವ ಕೆಲಸವನ್ನು ಒಂದೇ ಮಾತಿನಲ್ಲಿ ವರ್ಣಿಸಬೇಕೆಂದರೆ ಅದನ್ನು ಉತ್ಸಾಹದ ಯುಗವೆಂದು ಕರೆಯಬಹುದಾಗಿ ನನಗೆ ತೋರುತ್ತದೆ. ಕನ್ನಡ ಜನದಲ್ಲಿ ಸ್ವಭಾಷಾ ಪ್ರೇಮವನ್ನು ಜ್ವಾಲೆಯೆಬ್ಬಿಸಬೇಕು; ಅವರಲ್ಲಿ ಸ್ವಾಭಿಮಾನವನ್ನು ನೆಲೆಗೊಳಿಸಬೇಕು; ಅವರಿಗೆ ಸ್ವೇತಿಹಾಸ, ಸ್ವಸಂಸ್ಕೃತಿ ಸ್ವಜನಾಂಗ ಶಕ್ತಿಗಳ ಹಿರಿಮೆಯನ್ನು ಮನದಟ್ಟುಮಾಡಿಕೊಟ್ಟು, ಅವರಲ್ಲಿ ಒಂದು ಹೊಸಚೈತನ್ಯವೂ ಹೊಸ ಜೀವನೋತ್ಸಾಹವೂ ಅಂಕುರಿಸುವಂತೆ ಪ್ರಚಾರಕಾರ್ಯ ನಡಸಬೇಕು—ಎಂಬುದು ನಮ್ಮ ಇದುವರೆಗಿನ ಆಶಯವಾಗಿತ್ತು. ಸಾಹಿತ್ಯ ಪರಿಷತ್ತಿನ, ವಿದ್ಯಾವರ್ಧಕ ಸಂಘದ, ನಮ್ಮ ಕರ್ಣಾಟಕ ಸಂಘದ ಮತ್ತು ಹತ್ತಾರು ಇಂಥ ಸಂಘ ಸಂಸ್ಥೆಗಳ, ಮತ್ತು ನಾನಾ ವಿದ್ಯಾ ಇಲಾಖೆಗಳ, ಮತ್ತು ಈಚೆಗೆ ಹರಡುತ್ತಿರುವ ಅಕ್ಷರ ಪ್ರಚಾರ ಸಮಾರಂಭದ ಸಂತತ ಪ್ರಯತ್ನದಿಂದಲೂ, ನಮ್ಮ ವೃತ್ತಪತ್ರಿಕೆಗಳ, ಗ್ರಂಥಲೇಖಕರ, ಭಾಷಣಕಾರರ ಮತ್ತು ಇತರ ವಿದ್ವಜ್ಜನರ ಪ್ರತಿಬೋಧನಪ್ರಭಾವದಿಂದಲೂ ಜನ ಈಗ ಎಚ್ಚತ್ತವರಾಗಿದ್ದಾರೆ. ಇನ್ನು ಪುನಃ ಅವರು ತೂಕಡಿಸಿ ಮೈಮರೆತಾರೆಂಬ ಭೀತಿಗೆ ಕಾರಣ ತೋರುವುದಿಲ್ಲ. ಯಾವ ಆರೋಗ್ಯದ ಹಸಿವು ನಮ್ಮ ಜನತೆಯಲ್ಲಿ ಹುಟ್ಟಬೇಕೆಂದು ನಾಡ ಹಿರಿಯರು ಆಶೆಪಟ್ಟುಕೊಂಡಿದ್ದರೋ ಅದರ ಸೂಚನೆಗಳು ಈಗ ವಿಶದವಾಗಿ ಕಾಣಬರುತ್ತಿವೆ. 'ಕನ್ನಡದಲ್ಲಿ ಓದಲು ಏನೇನಿದೆ? ಇನ್ನೇನಿದೆ? ಇನ್ನೂ ಏನೇನಿದೆ?' ಎಂದು ಜನ ವಿಚಾರಿಸುವ ದಿನ ಬಂದಿದೆ. ಕನ್ನಡವು ವ್ಯಾಸಂಗಕ್ಕೆ ಅರ್ಹವಾದ ಭಾಷೆ,—ಪ್ರಪಂಚದ ಗಮನಕ್ಕೆ ಯೋಗ್ಯವಾದ ಭಾಷೆ,—ಎಂಬುದನ್ನು ನಾವು ಈಗ ರುಜುವಾತುಪಡಿಸಬೇಕಾಗಿದೆ. ಉತ್ಸಾಹರಗಳೆಯ ಯುಗ ಮುಗಿದಿದೆ; ವ್ಯವಸಾಯದೀಕ್ಷೆಯ ಯುಗ ಆರಂಭಿಸಿದೆ.

## ಕನ್ನಡ ಜನದ ಬದುಕಿಗೆ ಕನ್ನಡ ಸಾಹಿತ್ಯ

ಈಗ ನಮ್ಮ ದೇಶದವರೆಲ್ಲ—ವಿದ್ಯಾರ್ಥಿಗಳೂ, ಅಧಿಕಾರಸ್ಥರೂ, ಎಲ್ಲ ಪ್ರಭಾವಶಾಲಿಗಳೂ—ಒಂದು ತತ್ತ್ವವನ್ನು ಮನಸ್ಸಿನಲ್ಲಿ ಸ್ಫುಟವಾಗಿ ಧರಿಸಬೇಕಾಗಿದೆ. ನಮ್ಮ ಕನ್ನಡದ ಉತ್ಸಾಹ ಕೇವಲ Sentiment—ಎಂದರೆ ಭಾವಾತಿರೇಕದ ಉದ್ಗಾರವಲ್ಲ. ಅದು ವಿಚಾರಪೂರ್ವಕವಾದ ತತ್ತ್ವ

ಸಿದ್ಧಾಂತ, ಮತ್ತು ಸದ್ಯಃಪ್ರಯೋಜನದೃಷ್ಟಿಯ ನೀತಿನಿರ್ಣಯ. ಈ ವಿಚಾರದಲ್ಲಿ ಮೊಟ್ಟಮೊದಲನೆಯ ಸಂಗತಿಯೇನೆಂದರೆ,—ಕನ್ನಡ ಈಹೊತ್ತು ಸರಿಸುಮಾರು ಎರಡು ಕೋಟಿ ಪ್ರಜೆಯಲ್ಲಿ ಜೀವಂತವಾಗಿರುವ ಭಾಷೆ, ಅವರ ದಿನಚರಿಯ ಬದುಕಿನ ಭಾಷೆ. ಇಷ್ಟು ಬಹುತೆಯ ಜನದ ನಿತ್ಯವ್ಯವಹಾರ, ಅವರ ಜ್ಞಾನಾರ್ಜನೆ, ಅವರ ಸುಖಸಂಪತ್ಸಾಧನೆ, ಅವರ ಸಾಹಸ ಶೌರ್ಯಗಳು, ಅವರ ಇಹಲೋಕಯಾತ್ರೆ, ಅವರ ಬಂಧವಿಮೋಚನೆ, ಅವರ ಜನ್ಮಸಾರ್ಥಕ್ಯ—ಇದೆಲ್ಲ ಕನ್ನಡದ ಮೂಲಕವೇ ಆಗಬೇಕಾಗಿದೆ. ಮನುಷ್ಯಪ್ರಪಂಚದ ಇಷ್ಟೊಂದು ದೊಡ್ಡ ಪಂಗಡಕ್ಕೆ ಕನ್ನಡವೇ ಇರುವ ಜೀವನೋತ್ಕೃಷ್ಟತಾ ಸಾಧನ. ನಾವು ಕನ್ನಡಕ್ಕೆ ಬೆಲೆ ಕೊಡತಕ್ಕದ್ದು ಈ ಗಟ್ಟಿ ಕಾರಣದಿಂದ; ಅವಿಚಾರ ವ್ಯಾಮೋಹದಿಂದಲ್ಲ. ನಮ್ಮದು Practical ಎಂದರೆ ಪ್ರತ್ಯಕ್ಷಫಲದ ಯೋಜನೆ. ಕನ್ನಡದ ಕೂಗನ್ನು ಬರಿಯ ಮೋಹ ಭ್ರಾಂತಿಯೆಂದು ತಾತ್ಸಾರಮಾಡುವ ಪದವೀಗರ್ವಿಷ್ಠರು ಈ ತತ್ತ್ವವನ್ನು ಗ್ರಹಿಸಬೇಕು. ನೂರಾರು ಲಕ್ಷ ಸಂಖ್ಯೆಯ ಜನರ ಉದ್ಧಾರಕ್ಕೆ ಕನ್ನಡದ ಹೊರತು ಬೇರೆ ಸಾಧಕವಾವುದೂ ಇಲ್ಲ. ಕನ್ನಡ ಭಾಷೆಯ ಶ್ರೇಯಸ್ಸು ಎಂದರೆ ಕನ್ನಡ ಜನತೆಯ ಶ್ರೇಯಸ್ಸು; ಕನ್ನಡ ಜನದ ಶ್ರೇಯಸ್ಸಿಗಾಗಿ ಕನ್ನಡ ಭಾಷೆಯ ಶ್ರೇಯಸ್ಸು.

## ನಾಲ್ಕು ದೊಡ್ಡ ಕಾರ್ಯಭಾಗಗಳು

ಕನ್ನಡದ ಕ್ಷೇಮಸಂಪಾದನೆಗಾಗಿ ಆಗಬೇಕಾಗಿರುವ ಕಾರ್ಯ ಬಹುಮುಖವಾಗಿದೆ. (೧) ಮೊದಲು ಕನ್ನಡಿಗರ ಸಂಖ್ಯೆಯೂ ಕನ್ನಡನಾಡಿನ ವಿಸ್ತೀರ್ಣವೂ ಬೆಳೆಯಬೇಕು. ಗ್ರಂಥೋತ್ಪತ್ತಿಯೂ ಕಲಾಪ್ರಚಾರವೂ ಜನಬಲವನ್ನು ಅವಲಂಬಿಸಿಕೊಂಡಿರುತ್ತವೆ. ವಾಚಕರ ಸಂಖ್ಯೆ ವಿಸ್ತರಿಸಿದಂತೆಲ್ಲ ಲೇಖಕರ ಸಂಖ್ಯೆ ಬೆಳೆದು, ಲೇಖನಗುಣವೂ ಮೇಲ್ಮಟ್ಟಕ್ಕೆ ಏರುತ್ತದೆ. (೨) ಎರಡನೆಯದಾಗಿ,—ಕನ್ನಡನಾಡಿನ ಸರಕಾರಗಳು ಕನ್ನಡವನ್ನು ಸ್ವಭಾಷೆಯೆಂದು ಅಂಗೀಕರಿಸಿದವುಗಳಾಗಬೇಕು. ನಮ್ಮ ರಾಜಕೀಯ ಸಭೆ ಸಂಸ್ಥೆಗಳ ನಡವಳಿಕೆಗಳೂ ಕೋರ್ಟು ಕಚೇರಿಗಳ ಆಡಳಿತಗಳೂ ಕನ್ನಡದಲ್ಲಿಯೇ ನಡೆಯಬೇಕು. ನಮ್ಮ ಸಾರ್ವಜನಿಕ ಜೀವನ ಸುಗಮವಾಗುವುದಕ್ಕೂ, ನಮ್ಮ ಭಾಷೆ ಸಹಸ್ರಮುಖವಾಗಿ ಬೆಳೆದು ಬಗೆಬಗೆಯ ಕೆಲಸಗಳಿಗೆ ಒದಗಿಬರುವುದಕ್ಕೂ ಸಹ ಇದು ಅವಶ್ಯ. (೩) ಮೂರನೆಯದಾಗಿ,—ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ಕನ್ನಡ ಪ್ರದೇಶಗಳು ಏಕೀಕೃತವಾಗಿ ಒಂದು ರಾಷ್ಟ್ರವೆನಿಸಬೇಕು. ಮೊದಲು

ಬ್ರಿಟಿಷ್ ಇಂಡಿಯದ ಕನ್ನಡ ಜಿಲ್ಲೆ ತಾಲ್ಲೂಕು ಹಳ್ಳಿಗಳೆಲ್ಲ ಒಂದು ರಾಜಕೀಯ ಪ್ರಾಂತವಾಗಿ ಒಂದು ಸರಕಾರದಲ್ಲಿ ಸೇರಬೇಕು. (೪) ನಾಲ್ಕನೆಯದಾಗಿ, ಕನ್ನಡ ಜನಕ್ಕೆಲ್ಲ ಒಂದು ಪ್ರೌಢವಿದ್ಯಾಕೇಂದ್ರ ಏರ್ಪಡಬೇಕು. ಇವೆಲ್ಲ ನಮ್ಮ ಹಿರಿಯರ ಗಮನಕ್ಕೆ ತಕ್ಕ ವಿಚಾರಗಳು.

ವಿದ್ಯಾರ್ಥಿಗಳೇ ವಿಶೇಷವಾಗಿ ಸಾಧಿಸಬೇಕಾದ ಕಾರ್ಯ ಬೇರೆ ಇದೆ. ಅದು ಉಪಯೋಗದ ಮುಖ್ಯತೆಯಲ್ಲಿ ಮೇಲೆ ಹೇಳಿದ ನಾಲ್ಕು ಅಂಶಗಳಿಗಿಂತ ಕಡಮೆಯಾದದ್ದಲ್ಲ. ಅದು ಸಾಹಿತ್ಯಯೋಗ್ಯತಾಸಂಪಾದನೆ.

## ಸರ್ವತೋಮುಖ ಸಾಹಿತ್ಯ

ಸಾಹಿತ್ಯವೆಂದರೆ ಬರಿಯ ಮಾತಿನ ಚಮತ್ಕಾರವೆಂದು ಯಾರೂ ತಿಳಿದುಕೊಂಡಿರಲಾರರು. ಒಂದೆರಡು ಸಣ್ಣ ಕಥೆಗಳನ್ನು ಬರೆದು, ಅಥವಾ ಒಂದೆರಡು ಪದ್ಯಗಳನ್ನು ಹೊಸೆದು, ತನ್ನ ಸಾಹಿತ್ಯಸೇವೆ ಮುಗಿಯಿತೆಂದು ಯಾರೂ ಭಾವಿಸತಕ್ಕದ್ದಲ್ಲ. ಕಥೆ, ಪದ್ಯ, ಹಾಡು, ನಾಟಕ—ಇವೆಲ್ಲ ಸ್ವಾರಸ್ಯವಾದದ್ದೇ. ಅವು ಸಾಹಿತ್ಯವಲ್ಲವೆಂದು ಯಾರೂ ಹೇಳುವುದಿಲ್ಲ. ಸಣ್ಣ ಕತೆ ಸಣ್ಣ ಪದ್ಯಗಳಲ್ಲಿ ಮಹಾಸಾಹಿತ್ಯ ಅಡಗಿರುವುದು ಅಸಂಭವವಲ್ಲ. ಇಂಥ ಕೃತಿಗಳು ಶೀತಾಳಿ ಗಿಡಗಳ (Orchid) ಹೂಗಳಂತೆ. ಅವುಗಳ ಆಕಾರಚಿತ್ರವೂ ವರ್ಣರೇಖಾವಿನ್ಯಾಸವೂ ಪರಿಮಳಭಾರವೂ ಅತ್ಯಂತ ಮನೋಹರವಾದವು ಮತ್ತು ಅನೇಕ ದಿನ ನಿಲ್ಲತಕ್ಕವು. ಸಸ್ಯಪ್ರಪಂಚದಲ್ಲಿ ಶೀತಾಳಿಯೇ ರಚನಾಚಮತ್ಕೃತಿಯ ಪರಾಕಾಷ್ಠೆಯೆಂದು ಸಸ್ಯಶಾಸ್ತ್ರಜ್ಞರು ಹೇಳುತ್ತಾರಂತೆ! ಆದರೆ ಬರಿಯ ಶೀತಾಳಿ ಗಿಡಗಳಿಂದ ಮಾತ್ರವೇ ಒಂದು ಮಹಾರಣ್ಯವಾಗುವುದಿಲ್ಲ. ಅರಣ್ಯದಲ್ಲಿ ಶೀತಾಳಿ ಜಾತಿ ಒಂದು ಅಂಶ; ಅಷ್ಟೇ. ಕಥೆ ಪದ್ಯಗಳ ಜಾತಿಯ ಕಲ್ಪನಸಾಹಿತ್ಯ ನಮ್ಮಲ್ಲಿ ಈಗ ಸೊಂಪಾಗಿಯೇ ಬೆಳೆಯುತ್ತಿದೆ; ಅತಿ ಸೊಂಪಾಗಿ ಬೆಳೆಯುತ್ತಿದೆಯೆಂದು ಹೇಳುವವರೂ ಕೆಲವರಿದ್ದಾರು. ಹಾಗೆಯೇ ಅದರ ಗಾತ್ರ ಪರಿಮಾಣ ತಕ್ಕಷ್ಟು ಇದ್ದರೂ, ಅದರಲ್ಲಿಯ ಗುಣ ಸೌಭಾಗ್ಯ ಒಂದು ಮಟ್ಟದ್ದಾಗಿಲ್ಲವೆಂದು ಹೇಳುವವರೂ ಉಂಟು. ಕೆಲವು ಕೃತಿಗಳು ಸಾಹಿತ್ಯರತ್ನ ಪ್ರಾಯವಾದವು; ಕೆಲವು ತೀರಾ ಸಾಮಾನ್ಯವಾದುವು. ಈ ಭಾಗದಲ್ಲಿ ಸಾಮಾನ್ಯ ವಾಚಕರ ವಿಮರ್ಶನಶಕ್ತಿಯೂ ಇನ್ನೂ ಒಂದು ಸೂಕ್ಷ್ಮವಾದ ಹದಕ್ಕೆ ಬರಬೇಕಾಗಿದೆ. ವಾಚಕ ಜನದಲ್ಲಿ ಅಭಿರುಚಿ ವಿವೇಚನೆ ಪಕ್ವವಾದಹಾಗೆಲ್ಲ, ಅವರಿಗೆ ಲೇಖಕರು ದೊರಕಿಸುವ ಸಾಹಿತ್ಯದಲ್ಲಿ ಗುಣ ಉತ್ತಮಗೊಳ್ಳುತ್ತ ಹೋಗುವುದೆಂದು ನಂಬಬಹುದಾಗಿದೆ.

ಆದರೆ ಕಲ್ಪನಸಾಹಿತ್ಯ ಮಾತ್ರದಿಂದಲೇ ಅಥವಾ 'ಶುದ್ಧ' ಸಾಹಿತ್ಯ ಮಾತ್ರದಿಂದಲೇ, ಭಾಷಾಸಂಪತ್ತಾಗಲಿ, ಜನಜೀವಿತವಾಗಲಿ ಮೇಲ್ಮಟ್ಟಕ್ಕೆ ಏರಲಾರದು. ಪ್ರಾಚೀನ ಕಾಲಕ್ಕೂ ಪ್ರಕೃತ ಕಾಲಕ್ಕೂ ಇರುವ ಒಂದು ಮಹಾ ವ್ಯತ್ಯಾಸವನ್ನು ನಾವು ಜ್ಞಾಪಕದಲ್ಲಿರಿಸಿಕೊಳ್ಳಬೇಕು. ಮನುಷ್ಯ ಜೀವನದ ಮಹಾ ನದೀಪ್ರವಾಹ ಬರಬರುತ್ತ ಸಹಸ್ರಮುಖವಾಗುತ್ತಿದೆ. ಹಿಂದೆ ಹತ್ತು ಧಾರೆ ಹರಿಯುತ್ತಿದ್ದದ್ದು ಈಗ ನೂರು ಧಾರೆಯಾಗಿ ಹರಿಯುತ್ತಿದೆ. ಈ ತೆರದ ನಾನಾಮುಖತೆಯೂ ಜಟಿಲತೆಯೂ ಮಾನವಪ್ರಗತಿಯ ಲಕ್ಷಣಗಳು. ಹೀಗೆ ಸಹಸ್ರಮುಖವಾಗುತ್ತಿರುವ ಜನಜೀವನಕ್ಕೆ ಅವಶ್ಯವಾದ ಎಲ್ಲ ಜ್ಞಾನಸಾಮಗ್ರಿಯೂ ಕನ್ನಡದಲ್ಲಿ ದೊರೆಯುವಂತಾಗಬೇಕು. ಒಂದು ಭಾಷೆ ಹೇಗೆ ಮೇಲಕ್ಕೇಳುತ್ತದೆ,—ಮತ್ತು ಒಂದು ಜನ ಹೇಗೆ ಮೇಲಕ್ಕೇರುತ್ತದೆ ಎಂಬುದನ್ನು ನೀವು ಪ್ರತ್ಯಕ್ಷವಾಗಿ ಕಂಡುಕೊಳ್ಳಬೇಕಾದರೆ ಕಬ್ಬನ್ ಪಾರ್ಕಿನಲ್ಲಿರುವ ಪಬ್ಲಿಕ್ ಲೈಬ್ರರಿಯಲ್ಲಿ ನಿಂತು ನಾಲ್ಕು ಕಡೆಯೂ ಇಟ್ಟಿರುವ ಅಲಮಾರುಗಳನ್ನು ನೋಡಿರಿ. ಮನುಷ್ಯನ ಇಹ ಜೀವನಕ್ಕೆ ಸಂಬಂಧಪಟ್ಟ ಯಾವ ವಿಷಯವನ್ನು ತಿಳಿದುಕೊಳ್ಳಬೇಕೆಂದು ನಿಮಗೆ ಇಚ್ಛೆ ಇದೆ? ಪರಲೋಕವಿಚಾರದಲ್ಲಿ ಕೂಡ ಏನನ್ನು ತಿಳಿದುಕೊಳ್ಳಲು ನಿಮಗೆ ಕುತೂಹಲವಿದೆ? ನಿಮ್ಮ ಎಲ್ಲ ಪ್ರಶ್ನೆಗಳಿಗೂ ಮನುಷ್ಯ ಕೊಡಬಹುದಾದ ಉತ್ತರಗಳು ಆ ಅಲಮಾರುಗಳಲ್ಲಿ ಸಿದ್ಧವಾಗಿ ಕುಳಿತಿವೆ—ಇಂಗ್ಲಿಷ್ ಭಾಷೆಯಲ್ಲಿ. ನಿಮಗೆ ಯಾವ ವಿಚಾರ ಬೇಕು—ರಾಜ್ಯಾಂಗರಚನೆಯೆ? ಯಂತ್ರ ರಚನೆಯೆ? ಶಾಸನವಿಧಾನವೆ? ಸೆನ್ಸಸ್ ಅಂಕಿಗಳೆ? ಅರ್ಥಪರಿಸ್ಥಿತಿಯೆ? ವ್ಯವಹಾರ ಧರ್ಮಶಾಸ್ತ್ರವೆ? ನಾನಾ ಸಮಾಜ ವರ್ಣನೆಯೆ? ಭೌತಶಾಸ್ತ್ರ, ಜೀವಶಾಸ್ತ್ರ, ಮೊದಲಾದ ವಿಜ್ಞಾನ ಪ್ರಭೇದಗಳೆ? ಅಂತರಿಕ್ಷ ವಿವರಣೆಯೆ? ಜ್ಯೋತಿರ್ಮಂಡಲ ಪರೀಕ್ಷೆಯೆ? ದೈವತತ್ತ್ವ ಜಿಜ್ಞಾಸೆಯೆ? ಯಾವ ಶಾಸ್ತ್ರ ವಿಚಾರ ನಿಮಗೆ ಬೇಕಾದರೂ ಅದನ್ನು ಕುರಿತ ಪ್ರಮಾಣಭೂತವಾದ ಗ್ರಂಥ ನಿಮಗೆ ಇಂಗ್ಲಿಷಿನಲ್ಲಿ ದೊರೆಯುತ್ತದೆ. ಇಂಗ್ಲಿಷ್ ಗ್ರಂಥಗಳಲ್ಲಿಯ ವಿಷಯ ನಿರೂಪಣಕ್ರಮವೇ ಒಂದು ಸೊಗಸು. ಬಹಳ ಕ್ಲಿಷ್ಟವಾದ ಶಾಸ್ತ್ರವಿಷಯಗಳನ್ನು ಸಹ ಅಲ್ಲಿ ವಿಶದವಾಗಿ ಸರಸ ರೀತಿಯಲ್ಲಿ ಪ್ರತಿಪಾದಿಸಿರುತ್ತಾರೆ. ಪದನಿಷ್ಕರ್ಷೆ, ವಾಕ್ಯಪರಿಷ್ಕಾರ, ವಿಷಯದ ಅನುಕ್ರಮ, ಉಪಕ್ರಮೌಚಿತ್ಯ, ಉಪಸಂಹಾರಸಾರ್ಥಕ್ಯ—ಈ ನಾನಾ ಗುಣಗಳು ಇಂಗ್ಲಿಷ್ ಶಾಸ್ತ್ರಗ್ರಂಥಗಳನ್ನು ಹೃದಯಂಗಮವಾಗಿಸಿವೆ. ಹೀಗೆ ಬುದ್ಧಿಸಂಸ್ಕಾರಪ್ರಧಾನವಾದ ವಿವಿಧ ಶಾಸ್ತ್ರಸಾಹಿತ್ಯ ಬೆಳೆದಾಗಲ್ಲವೆ ಕನ್ನಡದ ಉದ್ಧಾರದ ಭರವಸೆ ನಮಗೆ

ಸಕಾರಣವೆನಿಸತಕ್ಕದ್ದು? ಕನ್ನಡ ಜನಕ್ಕೆ ಏನೇನು ಬೇಕೋ, ಅವರ ಪ್ರತಿ ದಿನದ ಬದುಕಿಗೆ ಏನೇನು ಅವಶ್ಯವೋ, ಅದೆಲ್ಲ ಕನ್ನಡದಲ್ಲಿರಬೇಕು. ಈಚೆಗೆ ಇಂಥ ಗ್ರಂಥಗಳೂ ಹುಟ್ಟುತ್ತಿವೆ.

## ಕನ್ನಡದ ಕೃತಯುಗ ಇನ್ನು ಮುಂದೆ

ಕನ್ನಡ ಸಾಹಿತ್ಯ, ಕರ್ಣಾಟಕ ಸಂಸ್ಕೃತಿ—ಎಂದು ನಾವು ಪದೇ ಪದೇ ಹೆಮ್ಮೆ ಹೇಳಿಕೊಳ್ಳುತ್ತೇವಷ್ಟೆ? ಅದರಲ್ಲಿ ಅನುಚಿತವೇನೂ ಇಲ್ಲ. ಭಾಷಾ ದೃಷ್ಟಿಯಿಂದ ನಮಗೆ ಸೋದರಪ್ರಾಯರಾದ ತಮಿಳು ತೆಲುಗುಗಳವರ, ಅಥವಾ ಮರಾಠಿ ಹಿಂದಿಗಳವರ, ಸಾಹಿತ್ಯ ಸಂಸ್ಕೃತಿಗಳೊಡನೆ ನಮ್ಮದನ್ನು ಹೋಲಿಸಿ ನೋಡಿದರೆ ನಾವು ತಲೆ ತಗ್ಗಿಸಬೇಕಾದೀತೆಂಬುದೇನೂ ಇಲ್ಲ. ನಮ್ಮದು ಪುರಾತನ ಭಾಷೆ. ನಮ್ಮ ಕಾವ್ಯಸಂಪತ್ತು ಸಾವಿರಾರು ವರ್ಷಗಳ ಹಿಂದಿನಿಂದ ಬೆಳೆದುಕೊಂಡು ಬಂದಿರುವಂಥಾದ್ದು. ಅದರ ರಾಶಿ ವಿಸ್ತಾರ ವಾಗಿದೆ. ಗುಣವೈವಿಧ್ಯವೂ ಅದರಲ್ಲಿ ತಕ್ಕಮಟ್ಟಿಗಿದೆ. ಒಟ್ಟಿನ ಮೇಲೆ, ಸರಕು ಗಿರಾಕಿಗೆ ತಕ್ಕಂತೆ—ಎಂಬ ಅಂಗಡಿಪೇಟೆಯ ನ್ಯಾಯವು ಸಾಹಿತ್ಯಕ್ಕೂ ಅನ್ವಯಿಸತಕ್ಕದ್ದೇ. ನಮ್ಮ ದೇಶಚರಿತ್ರೆಯ ನಾನಾ ಯುಗಗಳಲ್ಲಿ ಆಯಾ ಕಾಲದ ವಾಚಕಜನರ ಅಧಿಕಾರ ಅಭಿರುಚಿಗಳಿಗೆ ತಕ್ಕಂತೆ ಆಗಾಗಿನ ಗ್ರಂಥ ಗಳು ಆದುವು. ವೀರರಿಗೆ ವೀರ; ಶೃಂಗಾರಿಗಳಿಗೆ ಶೃಂಗಾರ; ಧಾರ್ಮಿಕರಿಗೆ ಧರ್ಮಪ್ರಬಂಧ.

ಆದರೆ 'ಕನ್ನಡ ಸಾಹಿತ್ಯದ ಕನಕಯುಗ ಹಿಂದೆ ಎಂದೋ ಮುಗಿದು ಹೋಯಿತು; ಈಚೆಗೆ ಹುಟ್ಟುತ್ತಿರುವುದೂ ಇನ್ನು ಮುಂದೆ ಹುಟ್ಟಬಹು ದಾದದ್ದೂ ಕಲಿಯುಗ ಸಾಹಿತ್ಯ, ಕಬ್ಬಿಣದ ಸಾಹಿತ್ಯ' ಎಂದು ಯಾರೂ ಭಾವಿಸಿಲ್ಲವೆಂದು ನಾನು ನಂಬಿದ್ದೇನೆ. ಕನ್ನಡದ ಭವಿಷ್ಯತ್ತು ಭೂತ ವರ್ತಮಾನಗಳಿಗಿಂತ ತೇಜಸ್ವಿಯಾಗಬೇಕು. ವ್ಯವಸಾಯಕ್ಕೆ ಹೊಸಭೂಮಿ ಯಲ್ಲಿ ಸಾರ ಹೆಚ್ಚೆಂದು ಹೇಳುವುದುಂಟು. ಕನ್ನಡ ಜನದ ಮನಸ್ಸು ಎಷ್ಟೋ ಬಗೆಯ ಕೃಷಿಗಳಿಗೆ ಇನ್ನೂ ನೂತನ ಕ್ಷೇತ್ರದಂತಿದೆ. ಈ ಜನ ಎಚ್ಚತ್ತು ಉದ್ಯಮಿಸಿದರೆ ಲೋಕಮಾನ್ಯರಾಗಲಾರರೇನು? ಇದುವರೆಗೆ ಕನ್ನಡಕ್ಕೆ ಇದ್ದ ಬೆಲೆ ಪ್ರಾದೇಶಿಕವಾದದ್ದು. ಅದು ಸಾರ್ವಪ್ರಾಪಂಚಿಕವಾಗಬಾರದೇನು?

ಈಗ ಕಾಲಸಂದರ್ಭ ಬದಲಾಯಿಸಿದೆ. ಇಂದಿನ ಲೋಕಪರಿಸ್ಥಿತಿ ಹಿಂದಿನ ಯಾವುದಕ್ಕೂ ಹೋಲಿಸಲಾಗದ್ದು. ಈಗ ನಮಗೆ ಎಲ್ಲ ಜೀವನಕ್ಷೇತ್ರ ಗಳಲ್ಲಿಯೂ ಸಂಪೂರ್ಣವಾಗಿ ಹೊಸದಾದ ಸಾಹಿತ್ಯ ಬೇಕಾಗಿದೆ. ಇದು

ಬೇಕಾಗಿರುವುದು ಹಳೆಯ ಸಾಹಿತ್ಯಕ್ಕೆ ಪ್ರತಿಯಾಗಿ ಅಲ್ಲ; ಅದಕ್ಕೆ ಜೊತೆಯಾಗಿ. ಹಳೆಯದೇನೋ ಒಳ್ಳೆಯದೇ, ದೊಡ್ಡದೇ ; ಆದರೆ ಅದಷ್ಟೇ ನಮಗೆ ಸಾಲದು. ಅದರಷ್ಟು ಒಳ್ಳೆಯದು, ಅದರಷ್ಟು ದೊಡ್ಡದು—ಸಾಧ್ಯವಾದರೆ ಅದಕ್ಕಿಂತ ಒಳ್ಳೆಯದು, ಅದಕ್ಕಿಂತ ದೊಡ್ಡದು,—ಕನ್ನಡದಲ್ಲಿ ಇನ್ನೂ ಹುಟ್ಟಬೇಕಾಗಿದೆ. ಇದುವರೆಗೂ ಕನ್ನಡಿಗರಿಗೋಸ್ಕರ ಮಾತ್ರ ಕನ್ನಡದಲ್ಲಿ ಸಾಹಿತ್ಯ ಹುಟ್ಟಿತು. ಇನ್ನುಮುಂದೆ ಹುಟ್ಟುವ ಕನ್ನಡ ಸಾಹಿತ್ಯ ಕನ್ನಡಿಗರ ಎಲ್ಲ ಜೀವಿತಕರ್ತವ್ಯಗಳಿಗೂ ಸಾಕಾಗುವಷ್ಟಾಗಬೇಕು; ಅಲ್ಲದೆ ಕನ್ನಡಿಗರಲ್ಲದ ಇತರ ಭಾಷೆಗಳವರಿಗೂ ಉಪಕಾರಕವೆನಿಸುವಷ್ಟು ಗುಣವುಳ್ಳದ್ದಾಗಬೇಕು. ಕನ್ನಡ ಸಾಹಿತ್ಯದ ಕೃತಯುಗ ಹಿಂದೆ ಮುಗಿದುಹೋಗಿಲ್ಲ; ಮುಂದೆ ಬರಬೇಕಾಗಿದೆ. ಕನ್ನಡಿಗರಿಂದ ಮಾತ್ರವೇ ಅಲ್ಲದೆ ಇತರ ದೇಶಗಳಿಂದಲೂ ಮನ್ನಣೆ ಪಡೆಯಬಲ್ಲ ಕವಿಗಳೂ, ಕಲಾವಿದರೂ, ವಿಜ್ಞಾನಿಗಳೂ, ತತ್ತ್ವವೇತ್ತರೂ ಕನ್ನಡದಲ್ಲಿ ಹುಟ್ಟಬೇಕು. ಅಂಥಾ ಪ್ರತಿಭೆಯೂ ಸ್ಫೂರ್ತಿಯೂ ತೇಜಸ್ಸೂ ನಮ್ಮಲ್ಲಿ ಅಂಕುರಿಸಬೇಕಾದರೆ ನಮ್ಮ ತಪಸ್ಸು ಎಂಥಾದ್ದಾಗಿರಬೇಕೆಂಬುದನ್ನು ವಿವರಿಸಿ ಹೇಳಬೇಕೆ? ವಿವರಿಸಲು ಶಕ್ಯವೆ? ಅದನ್ನು ಪ್ರತಿಯೊಬ್ಬರೂ,—ಮನಸ್ಸಿನಲ್ಲಿ ಶ್ರದ್ಧೆಯಿದ್ದರೆ,—ತಮ್ಮೊಳಗೆ ತಾವೇ ಊಹಿಸಿ ಕಂಡುಕೊಳ್ಳಲಾದೀತು.

* * * *

## ಸತ್ಯದಿಂದ ಮಹಾಸಾಹಿತ್ಯ, ತಪಸ್ಸಿನಿಂದ ಸತ್ಯದರ್ಶನ

ಈ ಸಂದರ್ಭದಲ್ಲಿ ಸಂಗತವಾಗಿರುವ ಒಂದು ಮಾತನ್ನು ಈಗಿನ ಪ್ರೌಢ ವಿದ್ಯಾರ್ಥಿಗಳಿಗೆ ನಾನು ವಿಶೇಷವಾಗಿ ಬಿನ್ನಯಿಸಬೇಕಾಗಿದೆ. ಸಾಹಿತ್ಯ ಸೇವೆಗೆ ಅಭಿಮಾನ ಮಾತ್ರವೇ ಸಾಲದು,—ಉತ್ಸಾಹ ಮಾತ್ರವೇ ಸಾಲದು. ಉತ್ಸಾಹ ಅಭಿಮಾನಗಳು ಅತ್ಯಂತ ಅವಶ್ಯವೆಂಬುದು ಸ್ವತಃ ಸಿದ್ಧವಾಗಿದೆ. ಅವುಗಳ ಜೊತೆಗೆ ಅಧ್ಯವಸಾಯವೂ ಸೇರಬೇಕು. ದೊಡ್ಡ ಸಾಹಿತ್ಯವೆಂಬುದು ದೊಡ್ಡ ತಪಸ್ಸಿನ ಫಲ. ಅದರ ಜೀವಾಳ ಸತ್ಯಸಂದರ್ಶನ. ತಪಸ್ಸು ಮಾಡದೆ, ಮಿದುಳನ್ನು ಆಯಾಸಪಡಿಸದೆ, ರಾತ್ರಿ ನಿದ್ದೆ ಕೆಡದೆ, ಪುಸ್ತಕದ ಭಾರವನ್ನು ಹೊರದೆ, ಲೀಲಾಜಾಲವಾಗಿ ಮಹಾಸಾಹಿತ್ಯವನ್ನು ರಚಿಸುವೆನೆನ್ನುವವನು ಮಹಾಸಾಹಿತ್ಯದ ಸ್ವರೂಪವನ್ನು ಕಾಣದವನು.

ನಮ್ಮ ಈಗಿನ ದಿವಸದಲ್ಲಿ ಮಹತ್ತ್ವದ್ದನ್ನು ಸುಲಭದಲ್ಲಿ ಸಾಧಿಸುವ ಆಶೆ ಸರ್ವಸಾಮಾನ್ಯವಾಗುತ್ತಿದೆ. ಈ ಹೊತ್ತು ನಿರ್ಭಾಗ್ಯ ದಾಮೋದರನಾಗಿದ್ದವನೊಬ್ಬನು ನಾಳೆ ಬೆಳಗ್ಗೆ ಮದರಾಸಿಗೋ ಬೊಂಬಾಯಿಗೋ ಹೋಗುತ್ತಾನೆ.

ಶೀಎಯ ಉಡುಪು ಧರಿಸಿ ಮೋಟಾರಿನಲ್ಲಿ ಕುಳಿತು ಹೋಗಿ ಯಾರನ್ನೋ ನೋಡಿ ಹತ್ತು ನಿಮಿಷ ಮಾತನಾಡುತ್ತಾನೆ; ಸರಿ; ಅಲ್ಲಿಗೆ ಮುಗಿಯಿತು ಅವನ ದಾರಿದ್ರ್ಯದ ಚರಿತ್ರೆ. ಮಾರನೆಯ ದಿನ ಅವನು ಒಂದು ಲಕ್ಷ ರೂಪಾಯಿ ನೋಟುಗಳನ್ನು ಜೇಬಿನಲ್ಲಿಟ್ಟುಕೊಂಡು ಬೆಂಗಳೂರಿಗೆ ಹಿಂದಿರುಗುತ್ತಾನೆ. ಅಥವಾ ಈ ಮಧ್ಯಾಹ್ನ ನಿರುದ್ಯೋಗಿಯಾಗಿದ್ದ ಅನಾಮಧೇಯನು ಯಾವ ಪ್ರೇರಣೆಯಿಂದಲೋ ನಾಳೆ ಬೆಳಗ್ಗೆ ಒಂದು ವ್ಯಾಪಾರದ ಕಂಪೆನಿಯ ಅಥವಾ ಕಂಟ್ರಾಕ್ಟಿನ ಹೂಟವನ್ನು ಹೂಡುತ್ತಾನೆ; ಆಫೀಸಾಗುತ್ತದೆ; ಕುರ್ಚಿ ಮೇಜು ಟೈಪ್‌ರೈಟರುಗಳು ಸಿದ್ಧವಾಗುತ್ತವೆ. ನಾಳೆ ಮಧ್ಯಾಹ್ನ ಅವನು ಆ ಆಫೀಸಿನಿಂದ ಅಟ್ಟಹಾಸಮಾಡುತ್ತ ಟೆಲಿಫೋನ್ ಮೂಲಕ ಯಾರೊಡನೆಯೋ ಐದು ನಿಮಿಷ ಮಾತನಾಡುತ್ತಾನೆ. ಇನ್ನೈದು ನಿಮಿಷಗಳೊಳಗಾಗಿ ಅದು ಹೇಗೋ ಅವನ ಹೆಸರಿಗೆ ಬ್ಯಾಂಕಿನಲ್ಲಿ ಒಂದು ಲಕ್ಷ ರೂಪಾಯಿ ಪಾವತಿಯಾಗಿರುತ್ತದೆ. ಇಂಥಾದ್ದು ಈ ಕಾಲದ ಅದ್ಭುತ. ಈಗಿನ ದಿವಸಗಳಲ್ಲಿ ಚಿಲ್ಲರೆ ಚಿಲ್ಲರೆಯ ಹತ್ತು ರೂಪಾಯಿ ಮಾತೂ ನೂರು ರೂಪಾಯಿ ಮಾತೂ ಹೋಯಿತು. ಎಲ್ಲಾ ಸಹಸ್ರಗಳು, ಲಕ್ಷಗಳು, ಕೋಟಿಗಳು. ಎಲ್ಲಾ ಕಣ್ಣುರೆಪ್ಪೆಯ ವೇಗದ ಇಂದ್ರಜಾಲ. ವ್ಯಾಪಾರದಲ್ಲಿಯೂ ಧನಪ್ರಪಂಚದಲ್ಲಿಯೂ ಈಗ ಎದ್ದು ಕಾಣುತ್ತಿರುವವರು ಇಂಥ ಅದ್ಭುತ ಸಾಹಸಿಗರು. ತಾಳ್ಮೆಯಿಂದ ದುಡಿದು, ಕಾಸಿಗೆ ಕಾಸು ಕೂಡಿಟ್ಟು, ಒಂದರಿಂದ ಹತ್ತು, ಹತ್ತರಿಂದ ಇಪ್ಪತ್ತು, ಇಪ್ಪತ್ತರಿಂದ ಮೂವತ್ತು—ಈ ರೀತಿ ಕೊಂಚ ಕೊಂಚವಾಗಿ ಕ್ರಮಕ್ರಮವಾಗಿ ಬೆಳಸುವ ಕಾಲ ಜನಕ್ಕೆ ಮರೆತುಹೋಗುತ್ತಿದೆ. ಕಾಲುನಡಿಗೆ ಅವರಿಗೆ ಬೇಸರ; ಮೋಟರುವೇಗ ವಿಮಾನವೇಗಗಳ ಆತುರ ಜನಕ್ಕೆ ಬರುತ್ತಿದೆ. ಆದರೆ ಉತ್ತಮ ಸಾಹಿತ್ಯವಿಜ್ಞಾನಗಳ ಸಿದ್ಧಿಗೆ ಇಂಥ ಸುಲಭೋಪಾಯಗಳಿಲ್ಲ. ಆ ರಾಜ್ಯಗಳಲ್ಲಿ ನಾವು ಸಾವಕಾಶವಾಗಿಯೇ,—ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟೇ,—ನಡೆಯಬೇಕಾಗಿದೆ. ಮಂತ್ರವಾದಿ ಮಾವಿನ ಕಾಯನ್ನು ತಯಾರುಮಾಡಿದಂತೆ ಕವಿ ಮಹಾಕಾವ್ಯ ರಚಿಸಲಾಗುವುದಿಲ್ಲ; ವಿಜ್ಞಾನಶೋಧಕನು ಅಷ್ಟು ಬೇಗ ಬೇಗ ನೂತನ ಸಿದ್ಧಾಂತಗಳನ್ನು ನಿರ್ಮಾಣ ಮಾಡಲಾಗುವುದಿಲ್ಲ. ಹುಡುಕಬೇಕು,—ಹುಡುಕಾಡಬೇಕು,—ಬೇಸರಪಡದೆ ಹುಡುಕಬೇಕು,—ತಾಳ್ಮೆಯಿಂದ ಹುಡುಕುತ್ತಲೇ ಇರಬೇಕು; ನಿಲುಕಡೆಯಿಲ್ಲದ, ನಿಟ್ಟುಸಿರಿನಿಂದ ಕೂಡಿದ, ಹುಡುಕಾಟವೇ ಜ್ಞಾನಾರ್ಥಿಯ ಹಣೆಯ ಬರಹ. ಅದರಿಂದಲೇ ಸತ್ಯಸಂದರ್ಶನ. ವಿಜ್ಞಾನಿಯಾಗಲಿ, ಸಾಹಿತಿಯಾಗಲಿ, ದೊಡ್ಡವನಾಗಬೇಕೆಂದರೆ ತಪಶ್ಚರ್ಯೆಯೊಂದೇ ಅವನಿಗಿರುವ ಮಾರ್ಗ.

ಕನ್ನಡ ಸಾಹಿತ್ಯ ನಿರ್ಮಾಣಕ್ಕೆ ದೀಕ್ಷೆ ತೊಡಬೇಕೆನ್ನುವವರು ನಾಲ್ಕು ತೆರನಾದ ಸಾಧನಸಂಪತ್ತನ್ನು ಪಡೆದುಕೊಳ್ಳಬೇಕು. ಒಂದನೆಯದು ಭಾಷಾಜ್ಞಾನ, ಎರಡನೆಯದು ಶಾಸ್ತ್ರಶಿಕ್ಷೆ, ಮೂರನೆಯದು ಲೋಕಸಂಸರ್ಗ, ನಾಲ್ಕನೆಯದು ಜೀವನೋದಾತ್ತತೆ.

## ಸಾಧನ ಚತುಷ್ಟಯ

ಭಾಷಾಪರಿಜ್ಞಾನವಿಚಾರದಲ್ಲಿ ಸಂಸ್ಕೃತ ಇಂಗ್ಲಿಷುಗಳ ಸಹಾಯ ಕನ್ನಡ ಲೇಖಕನಿಗೆ ಅಮೂಲ್ಯವಾದದ್ದೆಂಬ ಅಂಶವನ್ನು ಒತ್ತೊತ್ತಿ ಹೇಳಬೇಕಾಗಿದೆ. ಅಲ್ಪಸ್ವಲ್ಪವಾದರೂ ಸಂಸ್ಕೃತದ ಪರಿಚಯವಿಲ್ಲದಿದ್ದಲ್ಲಿ ಕನ್ನಡದ ಪ್ರಯೋಗಗಳೂ ಧಾಟಿಯೂ ಸಾಧುವಾಗಲಾರವು. ಸಂಸ್ಕೃತ ವಾಙ್ಮಯ ನಮ್ಮ ಭಾರತೀಯತೆಗೇ ಮಾತೃಭೂತವಾದದ್ದೆಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಈ ದೃಷ್ಟಿಯಿಂದಲೂ ಸಂಸ್ಕೃತ ನಮಗೆ ಪ್ರಿಯತಮವೂ ಪೂಜ್ಯವೂ ಆಗಿದೆ. ಸಂಸ್ಕೃತದಿಂದ ಕನ್ನಡಕ್ಕೆ ತರಬೇಕಾಗಿರುವ ಸಾಹಿತ್ಯಭಾಗ ಇನ್ನೂ ಅಪಾರವಾಗಿದೆ.

ಇಂಗ್ಲಿಷಿನ ಬೆಲೆಯನ್ನು ಕುರಿತು ಒಂದು ಮಾತನ್ನು ವಿಶೇಷವಾಗಿ ಹೇಳುವುದು ಅವಶ್ಯವೆಂದು ನನಗೆ ತೋರುತ್ತದೆ. ಇಂಡಿಯ ದೇಶದಲ್ಲಿ ನಾವು ಈಗ ಹೆಚ್ಚಾಗಿ ಕಾಣುತ್ತಿರುವುದು ಇಂಗ್ಲಿಷ್ ಜನರ ಅಧಿಕಾರಸ್ವಭಾವವನ್ನ,—ಅವರ ನಿಜವಾದ ಸಂಸ್ಕೃತಿಸ್ವರೂಪವನ್ನಲ್ಲ. ನಮಗೆ ಕಾಣಸುತ್ತಿರುವ ಅವರ ಪ್ರತಾಪಗುಣವು ಪಾಲ್ಯ-ಪಾಲಕ ಸಂಬಂಧದಿಂದ, ಅಥವಾ ಅಧಿಕಾರಿ-ಅಧೀನ ಸಂಬಂಧದಿಂದ, ಉತ್ಪನ್ನವಾದದ್ದು. ಆದರೆ ಇಂಗ್ಲಿಷ್ ಸಾಹಿತ್ಯವು ಇಂಡಿಯಕ್ಕೋಸ್ಕರವೇನೂ ನಿರ್ಮಿತವಾದದ್ದಲ್ಲ; ಅದು ಇಂಗ್ಲಿಷ್ ಜನರಿಗೋಸ್ಕರವಾಗಿಯೇ ನಿರ್ಮಿತವಾದದ್ದು—ಎಂದರೆ ಕೃತ್ರಿಮವಿಲ್ಲದೆ, ಅವರ ಸ್ವಂತ ಪ್ರಯೋಜನೈಕದೃಷ್ಟಿಯಿಂದ ಹುಟ್ಟಿದ್ದು. ಇಂಗ್ಲಿಷ್ ಕವಿ-ವಿಜ್ಞಾನಿಗಳ ಅತ್ಯುತ್ತಮ ಪ್ರಭಾವಗಳೆಲ್ಲ ಇಂಗ್ಲಿಷ್ ಸಾಹಿತ್ಯದಲ್ಲಿ ಸೈಜವಾಗಿ ರೂಪುಗೊಂಡಿವೆ. ನಮ್ಮ ಪಾಲಿಗಾದರೋ ಇಂಗ್ಲಿಷ್ ಭಾಷೆ ಪ್ರಪಂಚದ ನೂರಾರು ಭಾಷೆಗಳಲ್ಲಿ ಯಾವುದೋ ಒಂದಾನೊಂದು ಭಾಷೆಯಲ್ಲ. ನಮ್ಮ ಪಾಲಿಗೆ ಅದು ಸಕಲ ಪ್ರಪಂಚದೊಡನೆ ಮಾತನಾಡುವ ಭಾಷೆ. ಅದು ಸಮಸ್ತ ಜಗತ್ತನ್ನೂ ನಮ್ಮ ಕಣ್ಣೆದುರಿಗೆ ತಂದಿರಿಸುವ ದೂರದರ್ಶಕ ಯಂತ್ರ. ಇಂಗ್ಲಿಷ್ ಎಂಬ ಕಿಟಿಕಿಯ ಮೂಲಕ ನಾವು ಸಮಸ್ತ ಮಾನವಲೋಕವನ್ನು ನೋಡಲಾಗುತ್ತದೆ. ಈ ಕಾರಣದಿಂದ ಇಂಗ್ಲಿಷಿನ ಬೆಲೆ ನಮಗೆ ಗಣನೆಯನ್ನು

ಮೀರುವಷ್ಟಾಗಿದೆ. ತುಲನಾತ್ಮಕವಾದ, ಎಂದರೆ ಹೋಲಿಕೆಯ ಮೂಲಕವಾದ, ವಿಮರ್ಶನ ವ್ಯಾಸಂಗಕ್ಕೂ ಇಂಗ್ಲಿಷ್ ಸಾಹಿತ್ಯಜ್ಞಾನ ಸಹಕಾರಿಯಾಗುತ್ತದೆ. ಕನ್ನಡ ಸಾಹಿತ್ಯಕ್ಕೆ ಉಪಕಾರ ಮಾಡಬೇಕೆಂದಿರುವವರು ತಮ್ಮ ಇಂಗ್ಲಿಷ್ ವಾಙ್ಮಯ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳುತ್ತ ಉತ್ತಮ ಇಂಗ್ಲಿಷ್ ಲೇಖಕರ ವಿಷಯನಿರೂಪಣಕ್ರಮವನ್ನೂ ಶಾಸ್ತ್ರ ಫಕ್ಕಿಯನ್ನೂ ಗುರುತಿಸಿಕೊಳ್ಳಬೇಕು.

## ಬುದ್ಧಿಯ ವ್ಯಾಯಾಮ

ಎರಡನೆಯದು, ಶಾಸ್ತ್ರಸಂಸ್ಕಾರ. ಪ್ರತಿಯೊಬ್ಬ ಪ್ರೌಢ ವಿದ್ಯಾರ್ಥಿಯೂ ಯಾವುದಾದರೂ ಒಂದು ಶಾಸ್ತ್ರಭಾಗವನ್ನು ಅಥವಾ ಸಾಹಿತ್ಯಭಾಗವನ್ನು ವಿಶೇಷವಾಗಿ—ತನ್ನ ಆಜೀವವಿದ್ಯೆಯನ್ನಾಗಿ—ಅಭ್ಯಾಸಮಾಡಬೇಕು. ವ್ಯಾಕರಣಶಾಸ್ತ್ರವೋ, ಮೀಮಾಂಸೆಯೋ, ತರ್ಕವೋ, ಇತಿಹಾಸವೋ, ಅರ್ಥಶಾಸ್ತ್ರವೋ, ಗಣಿತವೋ, ಭೌತವಿಜ್ಞಾನವೋ, ಪ್ರಾಣಿಶಾಸ್ತ್ರವೋ, ಖನಿಜಶಾಸ್ತ್ರವೋ—ಯಾವುದಾದರೂ ಒಂದು 'ಶಾಸ್ತ್ರ' ನಿಮ್ಮಲ್ಲಿ ಪ್ರತಿಯೊಬ್ಬನಿಗೂ ತನ್ನ ಸ್ವಂತದ್ದಾಗಬೇಕು. ವಿಜ್ಞಾನಶಾಸ್ತ್ರ ಗ್ರಂಥದಿಂದ ನೀವು ಸಂಪಾದಿಸುವ ಅಂಶಗಳಲ್ಲಿ ಅತ್ಯಂತ ಮುಖ್ಯವಾದ ಭಾಗ 'ಸಂಗತಿ'ಗಳಲ್ಲ. ಶಾಸ್ತ್ರ 'ಸಂಗತಿ'ಗಳಿಗಿಂತ ಮುಖ್ಯವಾದುದು ಶಾಸ್ತ್ರ 'ದೃಷ್ಟಿ' (Scientific attitude and method), ಶಾಸ್ತ್ರದ ಅನ್ವೇಷಣರೀತಿ, ಅದರ ಪರೀಕ್ಷಾಕ್ರಮ, ಅದರ ವಿಷಯದ ಅಂಶಾಂಶಶೋಧನೆ ಮತ್ತು ಅಂಶಪ್ರತ್ಯಂಶತೋಲನೆ. ಈ ನಿಷ್ಕರ್ಷೆಯ ಗುಣ ಕನ್ನಡದ ಬರವಣಿಗೆಯಲ್ಲಿ ಈಗಿಗಿಂತ ಹೆಚ್ಚು ಹೆಚ್ಚಾಗಿ ಬೇಕಾದದ್ದು. ಈ ಗುಣವಿಲ್ಲದ ಬರವಣಿಗೆ ಬರಿಯ ಜೊಂಡು. ಅಂಥ ಬರವಣಿಗೆಗೆ ಪ್ರಮಾಣಯೋಗ್ಯತೆ ಎಂದಿಗೂ ಬರಲಾರದು. ನಮ್ಮ ಕಾಲೇಜುಗಳಲ್ಲಿ ವ್ಯಾಸಂಗಮಾಡುತ್ತಿರುವ ವಿದ್ಯಾರ್ಥಿಗಳು ತಮ್ಮ ಸ್ವಂತ ಅಭ್ಯಾಸಕ್ಕಾಗಿಯಾದರೂ ಯಾವುದಾದರೊಂದು ಶಾಸ್ತ್ರವಿಷಯವನ್ನು ಆರಿಸಿಕೊಂಡು, ಅದರ ಮೇಲೆ ಶಾಸ್ತ್ರರೀತಿಯಲ್ಲಿ ಆಗಾಗ ಪ್ರಬಂಧರಚನೆ ಮಾಡುವುದು ಉಪಯೋಗಕರವೆಂದು ನಾನು ಭಾವಿಸಿದ್ದೇನೆ.

## ಲೌಕಿಕ ದಕ್ಷತೆ

ನಾನು ಹೇಳಿದ ಸಾಧನಚತುಷ್ಟಯದಲ್ಲಿ ಮೂರನೆಯದು ಲೋಕಸಂಪರ್ಕ. ಎಲ್ಲ ಶಾಸ್ತ್ರ ಸಾಹಿತ್ಯಗಳೂ ಲೋಕಕ್ಕಾಗಿ ಹುಟ್ಟತಕ್ಕವು; ಆದಕಾರಣ

ಲೋಕಜೀವನದ ವಾತಾವರಣದಲ್ಲಿ ಬೆಳೆಯಬೇಕಾದವು. ಯಾವ ದಿವಸ ನಮ್ಮ ಸಾಹಿತ್ಯವು ಜನಜೀವನದ ಸಂಪರ್ಕವನ್ನು ತೊರೆಯಿತೋ ಅಂದು ಅದು ನಿರ್ಜೀವವಾಗಿ ಒಣಗಿತು. ಸಾಹಿತ್ಯಾಭಿವೃದ್ಧಿಯಲ್ಲಿ ತೊಡಗುವವನಿಗೆ ಲೋಕಜೀವಿತಕ್ಕಿಂತ ದೊಡ್ಡ ಪ್ರೇರಣಬಲ ಯಾವುದೂ ಇರಲಾರದು. ಆದದ್ದರಿಂದ ಕನ್ನಡ ಸಾಹಿತಿಗಳು ತಾವು ಯಾವುದೋ ಬೇರೆ ಒಂದು ಲೋಕದವರೆಂದು ಭಾವಿಸಿಕೊಳ್ಳದೆ ನಮ್ಮ ಅನುದಿನದ ಪ್ರತ್ಯಕ್ಷ ಪ್ರಪಂಚದಲ್ಲಿ ಬೆರೆತು ಬಾಳಬೇಕು. ಎಂದರೆ ಲೋಕಕಾರ್ಯದಲ್ಲಿ ಅವರು ದಕ್ಷತೆಯಿಂದ ಪ್ರವಿಷ್ಟರಾಗಬೇಕು. ಅವರ ಜೀವಿಕಾವೃತ್ತಿ ಎಂಥದೇ ಇರಲಿ,—ಅವರ ಉದ್ಯೋಗದ ಮಟ್ಟ ಮೇಲಿನದಾಗಲಿ, ಸಾಮಾನ್ಯದ್ದಾಗಲಿ, ಅಥವಾ ಬಡತನದ್ದೇ ಆಗಿರಲಿ,—ಇರುವ ಕರ್ತವ್ಯದಲ್ಲಿ ಅವರು ವಿಚಕ್ಷಣೆಯಿಂದ ನಡೆಯತಕ್ಕವರಾಗಬೇಕು. ನಾನು ಈ ಅಂಶವನ್ನು ಇಷ್ಟು ಒತ್ತಿಹೇಳುವುದಕ್ಕೆ ನನ್ನ ಮನಸ್ಸಿನಲ್ಲಿ ಬಹು ದಿನದಿಂದ ಅಡಗಿರುವ ಒಂದು ದೊಡ್ಡ ಕೊರತೆ ಕಾರಣ. ಕನ್ನಡಿಗರಲ್ಲಿ ಕಾರ್ಯದಕ್ಷತೆ ಸಾಲದೆಂಬುದು ನನ್ನ ದೂರು. ಘಂಟೆಗಟ್ಟಲೆ ನಾವು ದೈವವನ್ನು ಕುರಿತು ಮೊರೆಯಿಡುತ್ತೇವೆ, ಗೋಳಾಡುತ್ತೇವೆ, ಹಂಬಲಿಸುತ್ತೇವೆ. ನಮ್ಮ ಆಶೆಗಳು ಯಾರ ಆಶೆಗಳಿಗಿಂತಲೂ ಕಡಮೆಯಾದುವಲ್ಲ. ಆದರೂ ಕಾರ್ಯರಂಗಕ್ಕೆ ಇಳಿದಾಗ ನಮ್ಮ ಕಥೆ ಏಕೋ ಉತ್ತರನ ಕಥೆಯಂತೆ ಆಗುತ್ತದೆ. ಕರ್ಣಾಟಕದ ವಾಣಿಜ್ಯಕ್ಷೇತ್ರವನ್ನು ನೋಡಿರಿ; ಯಂತ್ರಕರ್ಮಕಾರ್ಖಾನೆಗಳ ಕ್ಷೇತ್ರವನ್ನು ನೋಡಿರಿ; ಸಮಾಜ ಸುಧಾರಣೆ ಸಾರ್ವಜನಿಕ ಸಂಸ್ಥೆಗಳ ಕ್ಷೇತ್ರವನ್ನು ನೋಡಿರಿ—ಯಾವ ಮಹೋದ್ಯಮರಂಗದಲ್ಲಿ ಯಾದರೂ ಕನ್ನಡಿಗರು ಇತರರಿಗೆ ಸರಿತೂಗತಕ್ಕವರೆಂದು ಈಗ ಹೇಳಿಕೊಳ್ಳುವಂತಿದೆಯೆ? ದೊಡ್ಡ ದೊಡ್ಡ ಕಂಪೆನಿಗಳನ್ನು ಕನ್ನಡಿಗರು ಕಟ್ಟಿದ್ದಾರೆಯೆ? ದೊಡ್ಡ ದೊಡ್ಡ ಆಡಳಿತಗಳನ್ನು ನಡಸುತ್ತಿದ್ದಾರೆಯೆ? ದೊಡ್ಡ ದೊಡ್ಡ ಸಂಸ್ಥೆಗಳ ಭಾರವನ್ನು ನಿರ್ವಹಿಸುತ್ತಿದ್ದಾರೆಯೆ? ಇಂಡಿಯದ ಇತರ ಪ್ರಾಂತಗಳೊಡನೆ ಹೋಲಿಸಿ ನೋಡಿದರೆ ನಾನಾ ಕಾರ್ಯರಂಗಗಳಲ್ಲಿ ಕನ್ನಡಿಗರ ಪ್ರಭಾವ ಈಗ ಅಷ್ಟೇನೂ ಮಹತ್ತರವಾಗಿ ಕಾಣುತ್ತಿಲ್ಲ. ನಮಗೆ ಕಾರ್ಯತತ್ಪರವಾದ ಬುದ್ಧಿಯೂ ನಿಷ್ಠೆಯೂ ತಕ್ಕಷ್ಟು ವರವಾಗಿ ಬಂದಿಲ್ಲ, ಅಥವಾ ಅಂಥ ವರಕ್ಕಾಗಿ ನಾವು ತಕ್ಕಷ್ಟು ತಪಸ್ಸು ಮಾಡಿಲ್ಲ. ಗೊಣಗಾಟ ಪೇಚಾಟಗಳಿಂದಲೇ ಸ್ವರ್ಗದ್ವಾರ ತೆರೆಯಬಹುದಾಗಿದ್ದಿದ್ದರೆ ಬಹುಶಃ ನಾವೇ ಮೊದಲು ಅಲ್ಲಿ ಸೇರಿರುತ್ತಿದ್ದೆವು. ಆದರೆ ದೇವತೆಗಳ ಕೃಪೆ ಪೌರುಷಸಂಪತ್ತುಳ್ಳವರಿಗೆ. ವಿದ್ಯಾರ್ಥಿಗಳು ಈ ನಮ್ಮ ಕೊರತೆಯನ್ನು ನೆನಪಿಗೆ ತಂದುಕೊಂಡು, ಕಾರ್ಯ

ಸಾಧನಶಕ್ತಿಯನ್ನು ಚಿಕ್ಕಂದಿನಿಂದಲೂ ಬೆಳಸಿಕೊಳ್ಳಬೇಕು. ಇಂಡಿಯಾ ದೇಶದಲ್ಲೆಲ್ಲ ಉದ್ಗಾರ ತೆಗೆಯುವುದರಲ್ಲಿ ನಿಸ್ಸೀಮರು ಕರ್ಣಾಟಕರು; ಕಾರ್ಯಸಾಧನೆಯಲ್ಲಿ ಮಹಾರಾಷ್ಟ್ರರು, ತಮಿಳರು. ಕನ್ನಡ ಜನದ ಬದುಕಿಗೂ ಕವಿತಾಪ್ರತಿಭೆಯೂ, ವಿಜ್ಞಾನಶೋಧನೆಯೂ ಎಷ್ಟು ಹೆಚ್ಚು ಅವಶ್ಯವೋ ಕಾರ್ಯದಕ್ಷತೆಯೂ ಅಷ್ಟು ಅವಶ್ಯವಾಗಿದೆ.

## ವ್ರತಜೀವನ

ಎಲ್ಲಕ್ಕಿಂತ ಮೇಲಾದದ್ದು ಜೀವನೋದಾತ್ತತೆ: ಯಾವುದಾದರೂ ಒಂದು ವ್ರತ—ಯಾವುದೋ ಒಂದು ಮಹಾಸಂಕಲ್ಪ,—ಒಂದಾನೊಂದು ಪವಿತ್ರೋದ್ದೇಶ ನಿಮ್ಮ ಜೀವನವನ್ನು ಸರ್ವದಾ ಆಕ್ರಮಿಸಿರಲಿ. ನಮ್ಮ ಪೂರ್ವಿಕರು ತಮ್ಮ ಜೀವನದಲ್ಲಿ ಇಂಥ ನೇಮವೊಂದನ್ನಿರಿಸಿಕೊಂಡಿರುತ್ತಿದ್ದರು. ಒಂದು ತೀರ್ಥಯಾತ್ರೆ, ಒಂದು ದೇವತಾಸೇವೆ, ಒಂದು ಸಂತರ್ಪಣೆ, ಒಂದು ಸತ್ರಸ್ಥಾಪನೆ—ಇಂಥಾದ್ದಕ್ಕಾಗಿ ಹಗಲು ರಾತ್ರಿ ಚಿಂತಿಸಿ, ಅದು ನಡೆದಾಗ ತಾವು ಕೃತಕೃತ್ಯರೆಂದು ತಿಳಿಯುತ್ತಿದ್ದರು. ಅಂಥಾ ವ್ರತನಿಷ್ಠೆ ಜೀವನೋದ್ಧಾರಕವಾದದ್ದು. ನಿತ್ಯ ಗೃಹಕೃತ್ಯದ ಧಾವಂತದಿಂದ,—ಅಶನವಸನ ಸಂಪಾದನೆಯ ಒದ್ದಾಟದಿಂದ,—'ನಾನು' 'ನನ್ನದು'ಗಳ ನಿತ್ಯಚಿಂತೆಯಿಂದ,—ದೂರವಾದ, ಬಹುಜನೋಪಯೋಗಿಯಾದ, ಎಷ್ಟೇ ಸಣ್ಣದಾದರೂ ಪರಿಶುದ್ಧವಾದ ಒಂದು ವ್ರತನಿಷ್ಠೆಯು ಯಾವಾತನನ್ನು ಬಿಡದೆ ಹಿಡಿದಿರುವುದೋ ಆತನೇ ಪರಮ ಧನ್ಯ. ಉತ್ತಮ ಧ್ಯೇಯವು ಜೀವನಕ್ಕೆ ಪಾವನಕರ ಮಾತ್ರವೇ ಅಲ್ಲ, ಪುಷ್ಟಿಕರವೂ ಪೂರ್ಣತಾಪ್ರದವೂ ಸಹ ಆದೀತು. ಒಂದು ಉದಾತ್ತವಾದ ಆದರ್ಶವು ಸರ್ವದಾ ನಿಮ್ಮ ಹೃದಯಾಂಗಣದಲ್ಲಿ ನಿಂತು, ನಿಮ್ಮ ನಡವಳಿಕೆಯನ್ನು ಅಹಶ್ಚ ರಾತ್ರಿಶ್ಚ ತಿದ್ದುತ್ತಿರಬೇಕು. ಪರಿಶುದ್ಧಹೃದಯತೆ ಉತ್ತಮ ಸಾಹಿತ್ಯಕ್ಕೆ ಮೂಲಮಾತೃಕೆ. ವಿದ್ಯಾರ್ಥಿಗಳಾಗಿರುವಾಗ ದೊಡ್ಡದೊಡ್ಡ ಧ್ಯೇಯಗಳನ್ನು ಕುರಿತು ಮಾತನಾಡುವುದೂ, ವೀರವ್ರತಗಳನ್ನು ಕೊಚ್ಚುವುದೂ ಅಪರೂಪವಲ್ಲ. ಮುಂದೆ ಬರುತ್ತದೆ ಪರೀಕ್ಷಾ ಸಮಯ—ಉದ್ಯೋಗಕ್ಕಾಗಿ ಹೆರರ ಮನೆಬಾಗಿಲು ಕಾಯಬೇಕಾದ ಕಾಲ, ಸಂಬಳದ ಹೆಚ್ಚಿಕೆಗಾಗಿ ಸ್ನೇಹಿತರ ಮೇಲೆ ಚಾಡಿ ಹೇಳಿಸುವ ಕಾಲ, ಸಣ್ಣ ಸಣ್ಣ ಕಾರಣಗಳ ಮೇಲೆ ದೊಡ್ಡ ದೊಡ್ಡ ಹಕ್ಕುಗಳನ್ನು ಕಟ್ಟಿ ನಿಲ್ಲಿಸಬೇಕೆನಿಸುವ ಕಾಲ, ನಿಮಗೆ ದೊರೆಯಬೇಕೆಂದಿರುವ ಸನ್ಮಾನ ಸಂಭಾವನೆಗಳು ಇನ್ನೊಬ್ಬರ ಕೈಗೆ ಹೋಗುತ್ತಿರುವ ಕಾಲ. ಅಂಥ ಕಾಲಗಳಲ್ಲಿ ನೀವು ಎಷ್ಟು ಶ್ರದ್ಧೆಯಿಂದ

ನ್ಯಾಯನಿಯಮಗಳನ್ನು ಪಾಲಿಸುವಿರೋ ಅಷ್ಟು ಮಟ್ಟಿನ ಗುಣ ಶಕ್ತಿ ನಿಮ್ಮ ಸಾಹಿತ್ಯದಲ್ಲಿ ಪ್ರತಿಫಲಿಸೀತು. ನಿಮ್ಮ ಹೃದಯದಲ್ಲಿ ಎಷ್ಟು ಔದಾರ್ಯ ಉಂಟೋ ನಿಮ್ಮ ಗ್ರಂಥದಲ್ಲಿ ಅಷ್ಟು ಔನ್ನತ್ಯವಿರುತ್ತದೆ. ಸಾಮಾನ್ಯ ಸಾಹಿತಿಯ ಚರಿತ್ರೆಯಲ್ಲಿ ಮುಖ್ಯಭಾಗ ಅವನ ಪುಸ್ತಕ; ಅವನ ಜೀವನ ಆ ಪುಸ್ತಕಕ್ಕೆ ಅಂಗ. ಮಹಾ ಸಾಹಿತಿಯ ಚರಿತ್ರೆಯಲ್ಲಿ, ಜೀವನ ಮುಖ್ಯಭಾಗ; ಪುಸ್ತಕ ಅದರ ಅಂಗ. ಪವಿತ್ರಾತ್ಮರಾದ ಶ್ರೀಮಾನ್ ಚ. ವಾಸುದೇವಯ್ಯನವರ ಜೀವನವು ವೃಕ್ಷಸದೃಶವಾಗಿತ್ತು. ಅವರ ಗ್ರಂಥಗಳು ಅದರಿಂದ ಹೊರಟ ಕೆಲವು ಹೂಗಳು. ದೊಡ್ಡಜೀವನದಿಂದ ದೊಡ್ಡಗ್ರಂಥವೆಂಬುದಕ್ಕೆ ಅವರ ಹೆಸರು ಚಿರಸ್ಮರಣೀಯವಾದ ಸಾಕ್ಷಿಯಾಗಿರುತ್ತದೆ. ಮಹಾತ್ಮ ಗಾಂಧಿಯವರ ಸಾಹಿತ್ಯರಚನೆ ಇನ್ನೊಂದು ಸಾಕ್ಷಿ.

ಒಟ್ಟಿನ ಮೇಲೆ ಉತ್ತಮಜೀವನದಿಂದ ಉತ್ತಮಸಾಹಿತ್ಯ. ಉತ್ತಮ ಸಾಹಿತ್ಯದಿಂದ ಉತ್ತಮಜೀವನ. ಹೀಗೆ ಜೀವನ ಸಾಹಿತ್ಯಗಳು ಪರಸ್ಪರ ಉದ್ಧಾರಕಗಳು. ಈ ತತ್ತ್ವ ಒಂದೇ ನನಗೆ ತಿಳಿದಿರುವಂಥಾದ್ದು. ಆದದ್ದರಿಂದ ಅವಕಾಶ ದೊರೆತಾಗಲೆಲ್ಲ ನಾನು ಹೇಳುತ್ತಿರುವುದು ಅದೊಂದನ್ನೇ.

## ನೂತನ ಸಾಹಿತ್ಯಕ್ಕೆ ನೂತನ ವಾತಾವರಣ

ಭಾಷಾಭಿಮಾನವೆಂದರೆ ಗ್ರಂಥರಚನೆಯ ಕೆಲಸವೊಂದೇ ಎಂದು ಅರ್ಥ ಮಾಡತಕ್ಕದ್ದಲ್ಲ. ಸಾಹಿತ್ಯಸೇವೆ ಲೇಖಣಿಯ ಕಾರ್ಯಮಾತ್ರವೇ ಅಲ್ಲ. ಯಾವ ಒಂದು ವಿದ್ಯುತ್ಪ್ರಭಾಭೂಯಿಷ್ಠವಾದ ವಾತಾವರಣವು ಸಜೀವ ಸಾಹಿತ್ಯಕ್ಕೆ ಪ್ರೇರಕವೂ ಉತ್ತೇಜಕವೂ ಆಗುತ್ತದೆಯೋ ಅದನ್ನು ಅಣಿ ಮಾಡಿಸುವ ಕೆಲಸ ದೇಶದ ಸಮಸ್ತ ವಿದ್ವಜ್ಜನರಿಗೂ ಸೇರಿದ್ದು. ನಮ್ಮ ನಮ್ಮ ದಿನಚರಿಯ ಮಾರ್ಗಗಳಲ್ಲಿ, ನಮ್ಮ ಸಾಮಾನ್ಯ ಕರ್ತವ್ಯಗಳ ಆಚರಣೆ ಗಳಲ್ಲಿ—ನಾವು ಮನೆಯಲ್ಲಿ ಕುಟುಂಬಿಗರಾಗಿ, ಕಸಬಿನಲ್ಲಿ ಕಸಬುದಾರರಾಗಿ, ಊರಿನಲ್ಲಿ ಗೃಹಸ್ಥರಾಗಿ, ಸಮಾಜದಲ್ಲಿ ಸಭ್ಯರಾಗಿ, ರಾಜ್ಯದಲ್ಲಿ ಪ್ರಜೆಯಾಗಿ, ಜನಜೀವನದಲ್ಲಿ ಸಾರ್ವಜನಿಕರಾಗಿ—ತೋರಿಸುವ ಪರಿಜ್ಞಾನವೂ ವಿವೇಕವೂ ನಿಷ್ಠೆಯೂ ಸಾಮರ್ಥ್ಯವೂ ಒಟ್ಟುಗೂಡಿದರೆ ಅದೇ ನಮ್ಮ ವಾತಾವರಣದಲ್ಲಿ ಒಂದು ವಿಶೇಷ ಶಕ್ತಿಯಾಗುತ್ತದೆ. ಆ ಶಕ್ತಿಯಿಂದಲೇ ಉತ್ತಮ ಸಾಹಿತ್ಯಕ್ಕೆ ಬೇಕಾದ ಪುಷ್ಟಿ. ಯಾರು ಯಾರು ಪುಸ್ತಕವನ್ನೋದುತ್ತಾರೆಯೋ, ಯಾರು ಓದುವ ಅಭ್ಯಾಸವನ್ನು ಇತರರಲ್ಲಿ ಹರಡುತ್ತಾರೆಯೋ, ಯಾರು ಜನದಲ್ಲಿ ತಿಳಿವಿನ ಹಸಿವನ್ನು ಹೆಚ್ಚಿಸುತ್ತಾರೆಯೋ—ಅವರೆಲ್ಲರೂ ಸಾಹಿತ್ಯಕ್ಕೆ ಉಪ

ಕಾರಿಗಳೇ. ದೇಶದ ಜೀವನವನ್ನು ಯಾವ ಕ್ಷೇತ್ರದಲ್ಲಾದರೂ ಮೇಲು ಮಟ್ಟಕ್ಕೇರಿಸಿ ಸೊಬಗುಗೊಳಿಸಲು ಯಾರು ಯಾರು ತಮ್ಮ ತಮ್ಮ ದಾರಿಗಳಲ್ಲಿ ತಮತಮಗೆ ಸಾಧ್ಯವಿರುವಂತೆ ದುಡಿಯುತ್ತಿರುತ್ತಾರೋ ಅವರೆಲ್ಲರೂ ಕವಿ ಕಥಕ ಐತಿಹಾಸಿಕ ವಿಜ್ಞಾನಿ ಮೊದಲಾದ ಸಾಹಿತ್ಯಕರ್ತರ ಸಹಕಾರಿಗಳೇ.

ಉತ್ತಮ ಗ್ರಂಥವಾಗಲು ಲೇಖಕನಲ್ಲಿ ಪಾಂಡಿತ್ಯವಿರಬೇಕು, ಅಂತಶ್ಶಿಕ್ಷಣವಿರಬೇಕು. ಅವುಗಳೊಡನೆ ಪ್ರತಿಭೆ ಸೇರಬೇಕು. ಪಾಂಡಿತ್ಯವೆಂಬುದು ಬಾಹ್ಯಲೋಕದಿಂದ ವಿಷಯಗಳನ್ನು ಮನಸ್ಸಿನೊಳಗೆ ಸಂಗ್ರಹಿಸಿ ಧರಿಸುವ ಶಕ್ತಿಯ ಕಾರ್ಯ. ಅಂತಶ್ಶಿಕ್ಷಣವೆಂಬುದು ಹಾಗೆ ಹೊರಗಿನಿಂದ ಗ್ರಹಿಸಿದ ವಿಷಯಗಳನ್ನು ಒಳಗೆ ತಕ್ಕಂತೆ ಜೋಡಿಸಿ ಸಮಂಜಸಸ್ಥಿತಿಗೆ ತಂದಿರಿಸುವ ಶಕ್ತಿಯ ಕಾರ್ಯ. ಈ ಎರಡು ಶಕ್ತಿಗಳೂ ಪ್ರತಿಭೆಯೆಂಬುದರ ಭಾಗಾಂಶಗಳೇ ಅಥವಾ ಸಹಚಾರಿಗುಣಗಳೇ ಎಂದು ಹೇಳಬಹುದು. ಪ್ರತಿಭೆಯೆಂಬುದು ಸಹಜಶಕ್ತಿ—ಹೊರಗಣಿಂದ ಲಭ್ಯವಾಗತಕ್ಕದ್ದಲ್ಲ, ಎಂದರೆ ಸರ್ವರಿಗೂ ಸಾಧ್ಯವಾದದ್ದಲ್ಲ. ಅದೇ ಮಹಾಸಾಹಿತ್ಯದ ಬೀಜ. ಆದರೆ ಆ ಪ್ರತಿಭಾಬೀಜ ಅಂಕುರಿಸಲು ಒಂದು ಅನುಕೂಲ ಸನ್ನಿವೇಶ ಬೇಕಾಗುತ್ತದೆ—ಗಿಡದ ಬೀಜ ಮೊಳೆಯುವುದಕ್ಕೆ ಕ್ಷೇತ್ರಾನುಕೂಲತೆ ಜಲಾನುಕೂಲತೆಗಳು ಬೇಕಾಗುವಂತೆ. ಈ ಬಾಹ್ಯಾನುಕೂಲತೆಯನ್ನೊದಗಿಸುವುದು ಸಮಾಜದ ಜವಾಬ್ದಾರಿ; ಎಂದರೆ ಲೇಖಕನ ಭಾಷೆಯನ್ನಾಡುವ ಓದುವ ಸಮಸ್ತರೂ ಆತನಿಗೆ ತಕ್ಕ ವಾತಾವರಣವನ್ನು ಕಲ್ಪಿಸುವುದರಲ್ಲಿ ಭಾಗಸ್ಥರಾಗುತ್ತಾರೆ. ಸಂಪಗೆಯ ಮರದಲ್ಲಿ ಎಲೆ ಸಾವಿರಾರು, ಹೂವು ಹತ್ತೈವತ್ತು ಮಾತ್ರ. ಹತ್ತು ಸಾವಿರ ಎಲೆಗಳು ಸುತ್ತುಮುತ್ತಣ ಗಾಳಿಯನ್ನು ಸಿರಿ, ತಂಪನ್ನು ಹೀರಿ, ಬಿಸಿಲನ್ನು ಸಹಿಸಿ, ಕಾಂಡಶಾಖೆಗಳನ್ನು ವರ್ಷವೆಲ್ಲ ಕಾಪಾಡಿದರೆ ಒಂದೆರಡು ತಿಂಗಳು ಅದರಲ್ಲಿ ನಗುವವು ಹತ್ತೈವತ್ತು ಹೂವುಗಳು. ನಾವು ಪರಿಮಳವನ್ನು ಮೂಸಿ ಸಂಪಗೆಗೆ ಸಲ್ಲಿಸುವ ಕೃತಜ್ಞತೆಯಲ್ಲಿ ಹೂವಿಗಾಗಿ ಅಲ್ಲದೆ ಎಲೆಗಳಿಗೂ ಸಲ್ಲುವ ಪಾಲುಂಟು.

## ಸಾಹಿತ್ಯವು ಕಾರಖಾನೆಯ ಸರಕಲ್ಲ

ನಮ್ಮಲ್ಲಿ ಲೇಖನೋತ್ಸಾಹ ಈಗ ಬಹುಮುಖವಾಗಿ ಬೆಳೆಯುತ್ತಿದೆ. ತರುಣರು ಗ್ರಂಥಕಾರ್ಯಕ್ಕೆ ಉತ್ಸಾಹದಿಂದ ಮುಂದೆ ಮುಂದೆ ಬರುತ್ತಿದ್ದಾರೆ. ಪ್ರಕಟನಸೌಕರ್ಯಗಳೂ ಹೆಚ್ಚುತ್ತಿವೆ. ಇಂಥಾ ಸಂದರ್ಭದಲ್ಲಿ ಒಂದು ಎಚ್ಚರಿಕೆ ಆವಶ್ಯಕವೆಂದು ತೋರುತ್ತದೆ. ಸಾಹಿತ್ಯರಚನೆ ಕಾರಖಾನೆಯ ಉದ್ಯೋಗವಾಗಬಾರದು. ಕಾಗದವೂ ಮುದ್ರಾಕ್ಷರವೂ ಮಶಿಯೂ

ಯಂತ್ರವೂ ಕಾರಖಾನೆಯ ವಸ್ತುಗಳಾಗಿರುವಲ್ಲಿ, ಆ ವಾತಾವರಣವು ಲೇಖನ ಶಕ್ತಿಯುಳ್ಳವನನ್ನೂ ಆವರಿಸದೆ ಬಿಟ್ಟೀತೆ? ಅದು ಅವನ ಒಡತನದಲ್ಲಿ ಧನ ಸಂಪಾದನೆಯ ಆಶೆಯನ್ನು ಕೆರಳಿಸುವುದು ಸ್ವಾಭಾವಿಕ. ಆದರೆ ಸಾಹಿತ್ಯ ಭಕ್ತನು ಎರಡಂಶಗಳನ್ನು ಜ್ಞಾಪಕವಿಟ್ಟುಕೊಳ್ಳದೆ ಇರಲಾರ:—

(೧) ಮಾರಾಟದ ಮೇಲೆ ಕಣ್ಣಿಟ್ಟಿರುವ ಲೇಖಕನಿಗೆ ಪುಸ್ತಕದ ಗಾತ್ರವು ಗುಣಕ್ಕಿಂತ ಮುಖ್ಯವೆನಿಸೀತು. ಹಾಗೋ ಹೀಗೋ ಪುಟಗಳನ್ನು ಭರ್ತಿಮಾಡಿದಷ್ಟೂ ಅಂಗಡಿಯಲ್ಲಿ ಸರಕು ಹೆಚ್ಚುತ್ತದೆ. ಆಗ ಗಿರಾಕಿ ನಾಲ್ಕಿರುವ ಕಡೆ ಎಂಟಾಗುತ್ತದೆ. ಇದು ಆತನ ಲೆಕ್ಕಾಚಾರ.

(೨) ಮಾರಾಟವಾಗುವುದು ಪಾಮರ 'ರಂಜನೆ'ಯಿಂದ, ಪಾಮರ 'ಶಿಕ್ಷಣೆ'ಯಿಂದಲ್ಲ. ಆದಕಾರಣ ಲೇಖಕನು ಜನಾಭಿರುಚಿಗೆ ವಶನಾಗಿ ಸರಕನ್ನೊದಗಿಸುತ್ತಾನೆಯೇ ಹೊರತು ಆ ರುಚಿಯನ್ನು ತೊಳೆದು ತಿದ್ದುವ ಗೋಜಿಗೆ ಹೋಗಲಾರ.

ಹೀಗೆ ಎರಡು ಕಾರಣಗಳಿಂದ ವ್ಯಾಪಾರ ದೃಷ್ಟಿಯು ಸಾಹಿತ್ಯದ ಗುಣ ಗಾಂಭೀರ್ಯಕ್ಕೆ ಬಾಧಕವಾಗಬಹುದು. ಪ್ರಪಂಚ ಸಾಹಿತ್ಯದ ಅತ್ಯುತ್ತಮ ಭಾಗವು ಲೇಖನವನ್ನೇ ಜೀವನೋಪಾಯವಾಗಿಟ್ಟುಕೊಂಡವರಿಂದ ಆದದ್ದಲ್ಲ; ಅದು ಬೇರೊಂದು ಉದ್ಯೋಗದ ಉಪಫಲವಾಗಿ (ಬೈ-ಪ್ರಾಡಕ್ಟ್), ಗೌಣಾಂಶವಾಗಿ, ಹುಟ್ಟಿದ್ದು. ಷೇಕ್ಸ್‌ಪಿಯರು ಜೀವನ ಸಂಪಾದಿಸಿದ್ದು ನಾಟಕದ ಅಭಿನಯದಿಂದ, ಲೇಖನದಿಂದಲ್ಲ. ಮಿಲ್ಟನನು ಕವಿತ್ವವನ್ನು ಕಸಬು ಮಾಡಿಕೊಂಡಿರಲಿಲ್ಲ. ಗಯ್ಟೆಯೂ ಅಷ್ಟೆ. ನಮ್ಮಲ್ಲಂತೂ ಮಹಾಕವಿಗಳು ತಪಸ್ವಿಗಳಾಗಿದ್ದವರು. ತಮ್ಮಲ್ಲಿ ತುಂಬಿದ್ದ ದೈವಭಕ್ತಿಯನ್ನೋ, ತಮ್ಮ ಒಂದಾನೊಂದು ಸೌಂದರ್ಯಾನುಭವವನ್ನೋ, ತಮಗೆ ತೋರಿದ ಒಂದು ಧರ್ಮದರ್ಶನವನ್ನೋ ತಾವೇ ನುಂಗಿಕೊಳ್ಳಲಾರದೆ, ಆವೇಶವಶರಾಗಿ, ತಮ್ಮ ಸಂಪತ್ತನ್ನು ಲೋಕದ ಸಹಪಂಕ್ತಿಯಲ್ಲಿ ಭುಜಿಸಬೇಕೆಂಬ ನಿರ್ಮಲೋತ್ಸಾಹದಿಂದ ಪ್ರೇರಿತರಾದವರು ವಾಲ್ಮೀಕಿ ವ್ಯಾಸರು, ಕನಕ ಕುಮಾರವ್ಯಾಸರು. ತೆಲುಗುಭಾಗವತ ಬರೆದ ಪೋತನ ಕವಿಯು ಯಾರೋ ರಾಜಾಶ್ರಯದ ಆಶೆಯನ್ನು ತೋರಿಸಿದಾಗ—"ಕೋಮಲ ಕಾವ್ಯ ಕನ್ಯೆಯನ್ನು ಮಾರಿ ನೃಪಾನ್ನ ವುಣ್ಣುವುದಕ್ಕಿಂತ ಕಾಡಿನ ಗಡ್ಡೆಗೆಣಸುಗಳನ್ನಗೆದು ಕುಟುಂಬಭರಣ ಮಾಡಿಕೊಳ್ಳುವುದು ಲೇಸು" ಎಂದು ಹೇಳಿದನಂತೆ. ಕವಿಗೂ ಅಂಗಡಿಗೂ ಬಹುದೂರ. ಕಾವ್ಯವು ಯಾವ ಲಾಭದ ಮೇಲೂ ಕಣ್ಣಿಟ್ಟದ್ದಾಗದೆ, ಸ್ವತಂತ್ರವಾಗಿ ಹರಿದು ಬರಬೇಕು.

"ಹ್ಲಾದೈಕಮಯೀಮ್ ಅನನ್ಯಪರತಂತ್ರಾಮ್—"
ಇದು ಕವಿಗೆ ಗೊತ್ತಾಗಿರುವ ಕಾರ್ಯನೀತಿ.

* * *

## ಸಮಾಪನ-ಪ್ರಾರ್ಥನೆ

ಸಮಾಪನ ಮರ್ಯಾದೆಯಲ್ಲಿ ಒಂದು ಪ್ರಾರ್ಥನೆಯನ್ನು ಸಲ್ಲಿಸಬೇಕೆಂದಿದ್ದೇನೆ. ಕನ್ನಡಸೇವಕರಿಗೆ ಇರಬೇಕೆಂದು ನಾನು ತಿಳಿದುಕೊಂಡಿರುವ ಸಾಧನಚತುಷ್ಟಯವನ್ನು ಈಗ ತಾನೆ ವಿವರಿಸಿದ್ದೇನೆ. ಈ ಸಾಧನ ಸಂಪತ್ತಿಗೆ ಪ್ರತ್ಯಕ್ಷನಿದರ್ಶನರೂಪರಾದವರು ಈ ಕರ್ಣಾಟಕ ಸಂಘವನ್ನು ೧೦-೧೨ ವರ್ಷದಿಂದ ಅಧ್ಯಕ್ಷರಾಗಿ ಬೆಳಸಿಕೊಂಡು ಬಂದಿದ್ದಾರೆ. ಕನ್ನಡದ ನವೀಕರಣ, ಕನ್ನಡದ ಧ್ವಜಾರೋಹಣ—ಈ ನಮ್ಮ ಎರಡು ಮಂತ್ರಗಳಿಗೂ ಗುರುಪೀಠದಲ್ಲಿರತಕ್ಕವರು ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು. ಅವರ ವಿದ್ವತ್ತನ್ನಾಗಲಿ ಪ್ರತಿಭೆಯನ್ನಾಗಲಿ ಆತ್ಮಮಹತ್ತ್ವವನ್ನಾಗಲಿ ಕುರಿತು ಈಗ ನಾನು ಕೊಂಡಾಡಬೇಕಾದದ್ದೇನೂ ಇಲ್ಲ. ಕನ್ನಡದಲ್ಲಿ ಅವರಿಗಿರುವ ಮಮತೆ ಎಂಥಾದ್ದು, ಅದಕ್ಕಾಗಿ ಅವರು ಮಾಡಿರುವ ತ್ಯಾಗ ಆತ್ಮ ಸಮರ್ಪಣೆಗಳು ಎಂಥವು ಎಂಬುದನ್ನು ನಾನು ಈಗ ವಿವರಿಸಬೇಕಾಗಿಲ್ಲ. ಇನ್ನು ಸ್ವಲ್ಪಕಾಲದಲ್ಲಿ ಅವರು ಬೆಂಗಳೂರನ್ನು ಬಿಟ್ಟು ಹೋಗುವ ಸಂಭವ ಬಂದೀತೆಂದು ವರ್ತಮಾನ ಕೇಳಿದ್ದೇನೆ. ಅವರು ಹಾಗೆ ಪರಸ್ಥಳ ಹೋಗುವುದೂ ಕನ್ನಡದ ಸೇವೆಗಾಗಿಯೇ ಎಂಬುದನ್ನೂ ತಿಳಿದುಕೊಂಡಿದ್ದೇನೆ. ಈ ಸಂದರ್ಭದಲ್ಲಿ ಅವರ ಸಾನ್ನಿಧ್ಯ ನಮಗೆ ದೂರವಾಗುವುದೆಂಬ ಕೊರತೆಯ ಜೊತೆಗೆ, ಅವರ ಅಲ್ಲಿಯ ಉದ್ದೇಶವೂ ದೇಶಕಾರ್ಯವೇ ಎಂಬ ಸಮಾಧಾನ ನಮ್ಮಲ್ಲಿ ಬೆರೆತಿರುವುದು ಸ್ವಾಭಾವಿಕವಾಗಿದೆ. ಶ್ರೀ ಶ್ರೀಕಂಠಯ್ಯನವರು ಎಲ್ಲಿದ್ದರೂ ನಮ್ಮವರೇ; ಅವರು ಎಲ್ಲಿದ್ದರೂ ಈ ಕರ್ಣಾಟಕ ಸಂಘ ಅವರದೇ; ಅವರು ಇದನ್ನು ತಮ್ಮದೆಂದು ಭಾವಿಸತಕ್ಕವರೇ ಎಂಬ ಭರವಸೆ ನಮಗೆ ಸಂಪೂರ್ಣವಾಗಿದೆ. ಈ ಸಂಘವನ್ನು ಮಮತೆಯಿಂದಲೂ ವಿಚಕ್ಷಣೆಯಿಂದಲೂ ಬೆಳಸಿ ದೊಡ್ಡದನ್ನಾಗಿ ಮಾಡಿದ ಈ ಉಪಕಾರಿಗಳ ಪೋಷಣೆಯ ಭಾಗ್ಯ ನಮ್ಮ ಈ ಸಂಘಕ್ಕೆ ಎಂದೆಂದಿಗೂ ತಪ್ಪಿಹೋಗದೆ ಇರಲಿ ಎಂದು ನಾನು ಪ್ರಾರ್ಥಿಸುತ್ತೇನೆ.

ಈ ಕರ್ಣಾಟಕ ಸಂಘ ಈಗ ೨೫ ವರ್ಷದ ಪ್ರಾಯದಲ್ಲಿದೆ. ಇಂದಿನ ಹಬ್ಬವನ್ನು ಷಷ್ಟ್ಯಬ್ದಪೂರ್ತಿಗೆ ಹೋಲಿಸಬೇಕೆನಿಸುವಂಥ ಪರಿಸ್ಥಿತಿ ಅದಕ್ಕೆ

ಎಂದೆಂದಿಗೂ ಬಾರದಿರಲೆಂದು ನನ್ನ ಪ್ರಾರ್ಥನೆ. ಅರವತ್ತನೆಯ ವರ್ಷ ನಮ್ಮ ದೇಶದಲ್ಲಿ ವಿಶ್ರಾಂತಿ ಪ್ರಾರಂಭದ ವರ್ಷ; ಜಡ್ಜಿಗಳಾದವರಿಗೂ ಕೂಡ ಅದು ಪೆನ್‌ಷನ್ನಿನ ವಯಸ್ಸು. ನಮ್ಮ ಕರ್ಣಾಟಕ ಸಂಘ ಈ ಹೊತ್ತಿನ ಹಬ್ಬದ ಕಾರಣದಿಂದ ತನಗೆ ವಿಶ್ರಾಂತಿಯ ಅಧಿಕಾರ ದೊರೆಯಿತೆಂದು ಭಾವಿಸಲಾಗದು. ವಾಸ್ತವವಾಗಿ ಈ ಸಂಘಕ್ಕೆ ಈ ಹಬ್ಬ ಇನ್ನೂ ಮೊದಲನೆಯ ಬಹುಮಾನ,—ಲೋಯರ್ ಸೆಕಂಡರಿ ಪ್ಯಾಸಿನಂಥಾದ್ದು. ಇಂಥ ಸನ್ಮಾನಗಳನ್ನು ಅದು ಸಾರ್ವಜನಿಕರಿಂದ ಇನ್ನೆಷ್ಟೆಷ್ಟೋ ಗಳಿಸಬೇಕಾಗಿದೆ. ಇದುವರೆಗೆ ಸಂಪಾದಿಸಿರುವ ಯಶಸ್ಸೇ ಸಾಕೆಂದು ಅದು ಈಗ ಹಾಸಿಗೆಯ ಕಡೆ ಕಣ್ಣು ತಿರುಗಿಸತಕ್ಕದ್ದಲ್ಲ. ಈ ಸಂಘದ ಇಂದಿನ ಯಾಜಮಾನ್ಯವು ಪ್ರತಿಭಾತೇಜಸ್ಸಮನ್ವಿತವಾಗಿದೆ. ಶ್ರೀ ಕೆ. ವಿ. ಪುಟ್ಟಪ್ಪನವರ ಪ್ರಭಾವದಿಂದ ಅದು ಸರ್ವಾಂಗಪರಿಪುಷ್ಟವಾಗಿ ಬೆಳೆದು, ಕನಕಾಭಿಷೇಕ ವಜ್ರಾಭಿಷೇಕ ಮಾಣಿಕ್ಯಾಭಿಷೇಕಗಳಿಂದ ಮೆರೆಯುತ್ತ, ಕರ್ಣಾಟಕಕ್ಕೆ ದಿವ್ಯಜ್ಯೋತಿಯೆನಿಸಿ, ಚಿರಕಾಲ ವಿಜಯಿಯಾಗಿರಲಿ.

# ೧೦. ಉಪಾಧ್ಯಾಯರು ಮತ್ತು ಸಾಹಿತ್ಯಪಾಠ*

## ಅವರ ಕರ್ತವ್ಯ, ಪಾಠಪದ್ಧತಿ, ವ್ಯವಸ್ಥೆ

ಉಪಾಧ್ಯಾಯರಿಗೆ ಈಗ ಬೇಕಾಗಿರುವುದು ಬರಿಯ ಉಪದೇಶವೆಂದು ನಾನು ತಿಳಿದುಕೊಂಡಿಲ್ಲ. ನಮ್ಮ ದೇಶದಲ್ಲಿ ಎಂಥಾ ಮಹಾನುಭಾವ ಹುಟ್ಟಿಕೊಂಡರೂ, ಅವನ ಕಣ್ಣು ಮೊದಲು ಉಪಾಧ್ಯಾಯರ ಮೇಲೆ ಬೀಳುತ್ತದೆ. ಅಧಿಕಾರ ಪಟ್ಟಸ್ಥನೋ, ರಾಜಕೀಯ ಮುಖಂಡನೋ, ಧನಿಕನೋ, ಇನ್ನೆಂಥಾ ಪ್ರಸಿದ್ಧ ಪುರುಷನೋ—ಉಪಾಧ್ಯಾಯರಿಗೆ ಉಪಾಧ್ಯಾಯನಾಗಿ ನಿಲ್ಲುವುದು ತನ್ನ ಹಕ್ಕೆಂದು ಅವನು ತಿಳಿದುಕೊಳ್ಳುವುದು ವಾಡಿಕೆ. "ಉಪಾಧ್ಯಾಯ ವೃತ್ತಿ ಬಹಳ ಶ್ರೇಷ್ಠವಾದದ್ದು, ಅತ್ಯಂತ ಪೂಜ್ಯವಾದದ್ದು, ತೀರಾ ಪುಣ್ಯಕರವಾದದ್ದು"—ಎಂದು ನಿಮ್ಮ ಕಸಬನ್ನು ಕೊಂಡಾಡುವುದು; "ನೀವು ಸೂರ್ಯನಂತೆ ಪ್ರಕಾಶವಾಗಿರಬೇಕು, ಚಂದ್ರನಂತೆ ಶಾಂತವಾಗಿರಬೇಕು, ಬುಧನಂತೆ ಚಾಲಾಕಾಗಿರಬೇಕು, ಬೃಹಸ್ಪತಿಯಂತೆ ಪ್ರಾಜ್ಞರಾಗಿರಬೇಕು"—ಎಂದು ಉಪದೇಶ ಕೊಡುವುದು: ಇದಿಷ್ಟೇ ಸಾಮಾನ್ಯವಾಗಿ ನಿಮಗೆ ಪ್ರತಿಷ್ಠಾವಂತರಿಂದ ಆಗುತ್ತಿರುವ ಉಪಕಾರ. ಅದರಲ್ಲಿ ನನಗೆ ನಂಬಿಕೆಯಿಲ್ಲ. ಉಪನ್ಯಾಸ, ಭಾಷಣ, ಉಪದೇಶ, ಧರ್ಮಶ್ರವಣ, ಉದ್ಬೋಧನೆ—ಇಂಥಾ ಬೈರಿಗೆ ಕೊರೆತದಿಂದ ನನಗೆ ಬೇಸರ. ಒಂದುವೇಳೆ ನಿಮಗೆ ಧರ್ಮೋಪದೇಶ ಬೇಕಾಗಿದ್ದರೂ ಅದನ್ನು ಕೊಡುವ ಅರ್ಹತೆ ನನಗೆ ಇಲ್ಲ. ನಾನು ಹೊಟ್ಟೆಯ ಹಸಿವನ್ನು ಮರೆಯಲಾರದ ಮನುಷ್ಯ. ಆದಕಾರಣ ನಾನು ಆಡುವ ಮಾತು ನಿಮ್ಮ ನಮ್ಮ ಹಸಿವುಗಳನ್ನು ಕುರಿತದ್ದು.

## ವಿದ್ಯೆ ಜನಜೀವನಕ್ಕೆ

ಅನ್ನಕ್ಕೂ ಅಕ್ಷರಕ್ಕೂ ಇರುವ ಸಂಬಂಧವನ್ನು ಈಗಿನವರು ಕಂಡುಕೊಂಡಿರುವಂತೆ ಪೂರ್ವಿಕರು ಕಂಡಿರಲಿಲ್ಲ. ಆಗ ವಿದ್ಯೆಯೆಂಬುದು ದೇಶದಲ್ಲಿ ಯಾರಿಗೋ ನಾಲ್ಕು ಮಂದಿಗೆ ಬೇಕಾಗಿದ್ದದ್ದು, ಗೌರವಕ್ಕಾಗಿ.

---

* ತಾ|| ೨೮-೧-೧೯೪೪ ರಲ್ಲಿ ಬೆಂಗಳೂರಿನಲ್ಲಿ ನಡೆದ ಮೈಸೂರು ಸಂಸ್ಥಾನದ ವಿದ್ಯಾ ಸಮ್ಮೇಳನದ ಪ್ರೈಮರಿ ಶಾಖೆಯಲ್ಲಿ ಮಾಡಿದ ಅಧ್ಯಕ್ಷ ಭಾಷಣ. (ವಿದ್ಯಾದಾಯಿನಿ, ಸಂ. ೧೮-೯, ಮಾರ್ಚಿ ೧೯೪೪.)

ಈಗ ಅದು ಎಲ್ಲ ಜನಕ್ಕೂ ಬೇಕು,—ಜೀವನಸೌಕರ್ಯಕ್ಕಾಗಿ. ವಿದ್ಯಾ ಪ್ರಚಾರವು ಸರಕಾರದ ನಿರ್ಬಂಧ ಕರ್ತವ್ಯವೆಂಬ ತತ್ತ್ವ ಆಚರಣೆಗೆ ಬಂದಿರು ವುದು ಇಂಗ್ಲೆಂಡಿನಲ್ಲಿ ಕೂಡ ಈಚೀಚೆಗೇ. ವಿಜ್ಞಾನಶಾಸ್ತ್ರಪ್ರಭಾವವೂ ಅದರೊಡನೆ ರಾಜಕೀಯ ವಿವೇಕವೂ ಲೋಕದಲ್ಲಿ ವ್ಯಾಪಿಸಿಕೊಂಡು ಬಂದ ಹಾಗೆಲ್ಲ, ತಮ್ಮ ಐಹಿಕ ಸುಖಸಂಪತ್ತು ತಮ್ಮ ವಿದ್ಯಾಭಿವೃದ್ಧಿಗೆ ಅನುಸಾರ ವಾಗಿರುತ್ತದೆ ಎಂಬ ತಿಳಿವಳಿಕೆ ಜನರಲ್ಲಿ ಹರಡುತ್ತಿದೆ. ಒಂದು ತೆನೆ ಬೆಳೆದ ಹೊಲದಲ್ಲಿ ಹತ್ತು ತೆನೆ, ಒಂದು ಬಟ್ಟೆ ನೆಯ್ದ ಮಗ್ಗದಲ್ಲಿ ಹತ್ತು ಬಟ್ಟೆ, ಒಂದು ದೀಪ ಬೆಳಗಿದ ಮನೆಯಲ್ಲಿ ಹತ್ತು ದೀಪ—ಇಂಥಾದ್ದು ವಿದ್ಯಾಪ್ರಭಾವ. ದಾರಿದ್ರ್ಯ ತೊಲಗಬೇಕಾದರೆ,—ಬಾಳಿನ ಹೊರೆ ಸಹ್ಯವಾಗಬೇಕಾದರೆ,—ವಿದ್ಯೆ ವಿವೇಕಗಳು ಹರಡಬೇಕು. ಹೊಟ್ಟೆಗೆ ಊಟ ಹೇಗೋ ಬುದ್ಧಿಗೆ ವಿದ್ಯೆ ಹಾಗೆ. ಇದನ್ನು ಈಗ ಎಲ್ಲ ದೇಶಗಳಲ್ಲಿಯೂ ಎಲ್ಲ ಜನರೂ ತಿಳಿದುಕೊಂಡಿದ್ದಾರೆ. ನಮ್ಮ ಮೈಸೂರಿನಲ್ಲಿಯೂ ಹಾಗೆಯೇ ಇದೆ. ಹಳ್ಳಿಗಾಡುಗಳಲ್ಲಿಯೂ 'ವಿದ್ಯೆ ಬೇಕು, ವಿದ್ಯೆ ಬೇಕು' ಎಂಬ ಆತುರ ಕಾಣಬರುತ್ತಿದೆ.

ಈ ವಿಚಾರದಲ್ಲಿ ನಮ್ಮ ಸರಕಾರವು ಮೊದಲಿನಿಂದ ಪ್ರಗತಿಮುಖವಾಗಿಯೇ ಇದೆ. ದಿವಾನ್ ರಂಗಾಚಾರ್ಯರೇ ಪ್ರಜೆಯ ಜ್ಞಾನೋನ್ನತಿಯ ವಿಷಯ ದಲ್ಲಿ ಸರಕಾರಕ್ಕಿರುವ ಜವಾಬ್ದಾರಿಯನ್ನು ಅಂಗೀಕರಿಸಿ ಉದಾರವಾದ ನೀತಿಗೆ ಪೀಠಿಕೆ ಹಾಕಿದರು. ಸರ್ ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ಅದು ನೆರೆದು ಬಹುಮುಖವಾಗಿ ವಿಸ್ತರಿಸಿತು. ಸರ್ ಮಹಮ್ಮದ್ ಮಿರ್ಜಾ ಸಾಹೇಬ ರವರ ಕಾಲದಲ್ಲಿ ಪ್ರಜಾಜನರ ವಿದ್ಯಾಕಾಂಕ್ಷೆ ಮತ್ತಷ್ಟು ತೀವ್ರವಾಗಿ ಬೆಳೆದು, ವಿದ್ಯಾವ್ಯವಸ್ಥೆಯಲ್ಲಿ ಕೆಲವು ಸುಧಾರಣೆಗಳು ನಡೆದವು.

ವಿಸ್ತಾರವಾದ ಬಾಲಶಿಕ್ಷಣದ ಏರ್ಪಾಟಿನ ಜೊತೆಗೆ ವಯಸ್ಕರನ್ನು ಅಕ್ಷರಸ್ಥರನ್ನಾಗಿ ಮಾಡಿಸುವುದಕ್ಕೂ ಈಚೆಗೆ ಒಂದು ಕಾರ್ಯಯೋಜನೆ ಹುಟ್ಟಿ ಸರಕಾರದ ಉದಾರ ಸಹಾಯದಿಂದ ಪ್ರವರ್ಧಮಾನವಾಗುತ್ತಿದೆ. ಹೀಗೆ ವಿದ್ಯಾಪ್ರಚಾರದ ಸಂರಂಭ ಮೈಸೂರು ಸಂಸ್ಥಾನದಲ್ಲಿ ಬಲಿತು ಹಬ್ಬುತ್ತಿದೆಯೆಂಬ ಸಂದರ್ಭ ದೇಶಾಭಿಮಾನಿಗಳಿಗೆ ಹೇಗೆ ಸಂತೃಪ್ತಿಕರ ವಾಗಿದೆಯೋ ಹಾಗೆ ಉಪಾಧ್ಯಾಯರಿಗೆ ಪ್ರೋತ್ಸಾಹಕರವಾಗಿದೆಯೆಂದು ನಾನು ಭಾವಿಸಿದ್ದೇನೆ. ದೇಶದಲ್ಲಿ ಉಪಾಧ್ಯಾಯರ ಸಂಖ್ಯೆ ಬೆಳೆಯುತ್ತಿದೆ; ಅವರ ಕೆಲಸದಲ್ಲಿ ಮಹಾಜನರ ಆಸಕ್ತಿ ಹೆಚ್ಚುತ್ತಿದೆ; ಸಂಖ್ಯಾವೃದ್ಧಿಯೂ ಜನಾದರಣೆಯೂ ನಿಮ್ಮ ಸಮುದಾಯ ಬಲಕ್ಕೆ ಕಾರಣಗಳು. ಕಸಬು ಬಲಿತಂತೆ ಕಸಬುದಾರರಿಗೂ ಬಲ.

## ಗುಣಾಭಿವೃದ್ಧಿ

ಆದರೆ ಈ ಹೊತ್ತು ಇಲ್ಲಿ ನಾವು ಯೋಚನೆಮಾಡಬೇಕಾಗಿರುವ ವಿಚಾರ ವಿಶೇಷವಾಗಿ ಸಂಖ್ಯಾಭಿವೃದ್ಧಿಯದಲ್ಲ. ಪ್ರಜಾಮಂಡಲದ ನಾನಾ ವರ್ಗಗಳಲ್ಲಿ ವಿದ್ಯಾಕುತೂಹಲ ಹರಡಿ ತೀವ್ರವಾಗುತ್ತಿದೆಯೆಂಬುದು ಈಗ ಪ್ರಸಿದ್ಧವಾದ ಸಂಗತಿ. ಆ ಕುತೂಹಲವನ್ನು ಎಂಥೆಂಥ ಕಾರ್ಯವಿಸ್ತಾರದಿಂದ ತೃಪ್ತಿಪಡಿಸಬೇಕು—ಎಂಬುದು ಮುಖ್ಯವಾಗಿ ಸರಕಾರವೂ ಮಹಾಜನ ಸಂಸ್ಥೆಗಳೂ ಆಲೋಚಿಸಬೇಕಾದ ವಿಚಾರ......ಈಗ ಆಗುತ್ತಿರುವ ವೆಚ್ಚಕ್ಕೆ ಈಗಿಗಿಂತ ಹೆಚ್ಚಿನ ಪ್ರತಿಫಲ ಹೇಗೆ ಬಂದೀತು? ಒಂದು ರೂಪಾಯಿಗೆ ಈಗ ಒಬ್ಬ ವಿದ್ಯಾರ್ಥಿಗೆ ದೊರೆಯುತ್ತಿರುವ ವಿದ್ಯೆ ಒಂದು ಮಣದಷ್ಟಿದ್ದರೆ, ಅದನ್ನು ಅದೇ ಒಂದು ರೂಪಾಯಿಗೆ ಹೇಗೆ ಒಂದೂವರೆ ಮಣದಷ್ಟು ಮಾಡಬಹುದು? ಇರುವ ಪಾಠಕ್ರಮ ಹೇಗಿದ್ದರೆ ಅದು ಇನ್ನೂ ಹೆಚ್ಚು ಸಾರ್ಥಕವಾದೀತು? ಇರುವ ಉಪಾಧ್ಯಾಯರಲ್ಲಿ ಎಂಥ ವಿಚಕ್ಷಣೆ ಇದ್ದರೆ ವಿದ್ಯಾರ್ಥಿ ಕಲಿಯುವ ವಿದ್ಯೆ ಇನ್ನಷ್ಟು ಚೆನ್ನಾದೀತು? ಇವು ನಮ್ಮ ಸದ್ಯದ ಪ್ರಶ್ನೆಗಳು. ವಿದ್ಯಾರ್ಥಿಗಳ ಸಂಖ್ಯೆ ಮಾತ್ರ ಹೆಚ್ಚಿದರೆ ಸಾಲದು; ಪ್ರತಿಯೊಬ್ಬ ವಿದ್ಯಾರ್ಥಿಯೂ ಸಾಧಿಸುವ ವಿದ್ಯಾಸಾಮರ್ಥ್ಯದ ಮಟ್ಟವೂ ಹೆಚ್ಚಬೇಕು. ಇದೀಗ ನಮಗಿರುವ ವಿಚಾರ.

ವಿದ್ಯಾಪರಿಪಾಕಕ್ಕೆ ಬೇಕಾದ ಪರಿಕರಗಳು ನಾಲ್ಕಾರು. ಈ ವಿಚಾರದಲ್ಲಿ ನಮ್ಮ ಮಹಾಜನರ ತಿಳಿವಳಿಕೆಯೂ ನಮ್ಮ ಸರಕಾರದ ತಿಳಿವಳಿಕೆಯೂ ಸಹ ಇನ್ನೂ ಪುನರ್ವಿಮರ್ಶೆ ಪಡೆಯಬೇಕಾಗಿದೆ, ಎಂದು ಹೇಳದೆ ಉಪಾಯಾಂತರವಿಲ್ಲ. ನಮ್ಮಲ್ಲಿ ಊಟವೆಂದರೆ ಹಿಟ್ಟಿನ ಮುದ್ದೆ, ಉಪ್ಪು ಕಲ್ಲು; ಪಾಠವೆಂದರೆ ಒಬ್ಬ ಮೇಷ್ಟ್ರು, ಒಬ್ಬ ಹುಡುಗ. ಇದು ಪ್ರಾಕೃತ (Primitive) ಅಭಿಪ್ರಾಯ. ಅದು ಈ ಕಾಲಕ್ಕೆ ಹೊಂದಲಾರದು. ಆಹಾರ ರುಚಿಸಿ ದೇಹಕ್ಕೆ ಪುಷ್ಟಿಕರವಾಗಬೇಕಾದರೆ ಅದು ರೇಷನಿಂಗ್ ಕಾಲದ ಕ್ಷಾಮದ ಕೂಳಿನಂತಿರದೆ ಶಾಕ ಸಕ್ಕರೆ ಜಿಡ್ಡುಗಳಿಂದ ಕೂಡಿ ರಸ್ಯವಾಗಿರಬೇಕೆಂಬುದನ್ನೂ, ವಿದ್ಯೆಯು ಚೈತನ್ಯವಾಗಿ ರಂಜಿಸಬೇಕಾದರೆ ಬೋಧಕನ ಯೋಗ್ಯತೆಯೂ ಬಾಲಕನ ಸಿದ್ಧತೆಯೂ ಶಾಲೆಯ ಸಾಮಗ್ರಿಯೂ ಕೂಡಿದಷ್ಟು ಪರಿಷ್ಕೃತವಾಗಿರಬೇಕೆಂಬುದನ್ನೂ ನಾವೆಲ್ಲರೂ ಇನ್ನೂ ಕಲಿತುಕೊಳ್ಳಬೇಕಾಗಿದೆ. ವಿದ್ಯಾಪ್ರಚಾರ ವ್ಯವಸ್ಥೆಯ ಅಂಗಾಂಗಗಳಲ್ಲಿ ಯಾವುದೊಂದು ಕೊರೆಯಾಗಿದ್ದರೂ, ಅಥವಾ ಕೆಟ್ಟಿದ್ದರೂ, ದೇಶಕ್ಕೆ ಸಲ್ಲ

ಬೇಕಾದ ಪ್ರಯೋಜನ ಆ ನ್ಯೂನವ್ಯವಸ್ಥೆಯಿಂದ ಕಡಮೆಯಾಗಿ, ಅದರ ಮೇಲೆ ನಡೆದ ವೆಚ್ಚ ಬಹುಮಟ್ಟಿಗೆ ವ್ಯರ್ಥವೇ ಆಗುತ್ತದೆ. ಹೀಗೆ ಉದ್ದೇಶಭಂಗ, ಹಣನಷ್ಟ.

ಪ್ರಾಥಮಿಕ ಶಾಲೆಗಳ ಕಾರ್ಯಪಟುತ್ವಕ್ಕೆ ಸಂಬಂಧಪಟ್ಟ ಅಂಶಗಳನ್ನು ಐದಾರು ವರ್ಗಗಳಾಗಿ ವಿಂಗಡಿಸಿ ವಿಮರ್ಶೆ ಮಾಡಬಹುದಾಗಿದೆ. ಅವು ಯಾವುವೆಂದರೆ—

೧. ಉಪಾಧ್ಯಾಯರ ಅರ್ಹತೆ;
೨. ಪಾಠದ ವಿಷಯ ರೀತಿಗಳು;
೩. ಶಾಲೆಗಳ ಸ್ಥಳ ಸನ್ನಿವೇಶ ಸಲಕರಣೆಗಳು;
೪. ಮೇಲಧಿಕಾರಿಗಳ ದಕ್ಷತೆ;
೫. ಮಹಾಜನ ಸಹಕಾರ;
೬. ಸರಕಾರದ ಆಸಕ್ತಿ.

## ಉಪಾಧ್ಯಾಯರ ಅರ್ಹತೆ

ವಿದ್ಯಾಪ್ರಪಂಚಕ್ಕೆ ಉಪಾಧ್ಯಾಯನೇ ಜೀವಾಳವೆಂದರೆ ಯಾರೂ ಅದು ಉತ್ಪ್ರೇಕ್ಷೆಯೆನ್ನಲಾರರು. ಪಾಠಶಾಲೆಯೆಂದರೆ ಗೋಡೆ ಛಾವಣಿಗಳಲ್ಲ, ಬೆಂಚು ಹಲಗೆಗಳಲ್ಲ, ಪುಸ್ತಕ ಪಟಗಳೂ ಅಲ್ಲ, ಇನ್‌ಸ್ಪೆಕ್ಟರೂ ಅಲ್ಲ; ಅದು ಒಂದು ಶಕ್ತಿಪ್ರಕಾಶ. ಎಲ್ಲಿ ಒಂದು ಮಾನುಷಪ್ರಭಾವ ಪ್ರಾತಃಕಾಲದ ಸೂರ್ಯಕಿರಣಗಳಂತೆ ಹರಡಿ ಮತ್ತೊಂದು ಮಾನುಷ ಪ್ರಭಾವವನ್ನು ಮೇಲಕ್ಕೇಳಿಸುತ್ತದೆಯೋ ಅದೇ ನಿಜವಾದ ಪಾಠಶಾಲೆ. ಕಟ್ಟಡ ಸಲಕರಣೆಗಳಿಲ್ಲದೆಯೇ, ಪುಸ್ತಕ ಸಾಮಗ್ರಿಯಿಲ್ಲದೆಯೇ, ಹೊರಗಣ ಆಜ್ಞೆ ವಿಚಾರಣೆಗಳಿಲ್ಲದೆಯೇ ಅಂಥ ಅದ್ಭುತ ಕ್ರಿಯೆ ನಡೆಯಬಹುದು. ಸ್ಪರ್ಶಮಣಿಯೆಂಬ ಒಂದು ಶಿಲೆಯುಂಟಂತೆ. ಅದು ಕಬ್ಬಿಣವನ್ನು ಸೋಕುವ ಮಾತ್ರದಿಂದ ಅದನ್ನು ಚಿನ್ನವನ್ನಾಗಿ ಮಾಡಬಲ್ಲುದಂತೆ. ಆದರೆ ಅದು ಆ ಕಬ್ಬಿಣದ ತುಂಡನ್ನು ತನ್ನಂಥ ಮತ್ತೊಂದು ಸ್ಪರ್ಶಮಣಿಯನ್ನೇ ಆಗಿ ಮಾಡಲಾರದು. ಒಳ್ಳೆಯ ಗುರುವಾದರೋ, ತಾನು ಸೋಕಿದ ಮನುಷ್ಯನನ್ನು ಅವನ ಹಿಂದಿನ ಸ್ಥಿತಿಗಿಂತ ಉತ್ತಮಪಡಿಸುತ್ತಾನೆಂಬುದು ಮಾತ್ರವೇ ಅಲ್ಲ, ಅವನನ್ನು ತನಗೇ ಸಮಾನಸಮರ್ಥನನ್ನಾಗಿ ಮಾಡುತ್ತಾನೆ. ಇದು ಶಂಕರಾಚಾರ್ಯರ ಒಂದಾನೊಂದು ವಾಕ್ಯ. ಇಂಥಾ ವಿಚಿತ್ರ ರಸಾಯನಕ್ರಿಯೆ

ನಡೆಯುವ ಸ್ಥಳ ಪಾಠಶಾಲೆ. ಅಲ್ಲಿ ಆಗಬೇಕಾದ ಸಮಸ್ತ ಸಿದ್ಧಿಗಳಿಗೂ ಮೂಲಕಾರಣ ಉಪಾಧ್ಯಾಯನ ವ್ಯಕ್ತಿಶಕ್ತಿ. ಆದದ್ದರಿಂದ ಮೊದಲು ಉಪಾಧ್ಯಾಯವೃತ್ತಿಗೆ ಬರುವ ಜನರ ಸ್ವರೂಪಯೋಗ್ಯತೆಯನ್ನು ಗಮನಕ್ಕೆ ತೆಗೆದುಕೊಳ್ಳುವುದು ಯುಕ್ತವಾಗಿದೆ.

## ಸ್ವರೂಪಯೋಗ್ಯತೆ—“ ಪರ್‌ಸನ್ಯಾಲಿಟಿ ”

ಹುಟ್ಟಿದವರೆಲ್ಲ ಹಾಡುಗಾರರಾಗಲಾರರು ; ಹಾಗೆಯೇ ಉಪಾಧ್ಯಾಯರೂ ಆಗಲಾರರು. ಸಂಗೀತ ಕಳೆಕಟ್ಟಲು ಒಂದು ವಿಶೇಷ ಕಂಠಸಂಪತ್ತು ಬೇಕಾಗಿರುವಂತೆ ಬೋಧನಕಾರ್ಯ ಯಶಸ್ವಿಯಾಗಲು ಒಂದು ವಿಶೇಷವಾದ ಸ್ವರೂಪಲಕ್ಷಣ ಬೇಕು. ಮಧುರವಾದ ಕಂಠಸ್ವರವೂ ವಿಶ್ವಾಸಕಾರಿಯಾದ ರೂಪಶೀಲಗಳೂ ಹುಟ್ಟುಗುಣಗಳು. ಆ ಸಹಜ ಸಂಪತ್ತಿಲ್ಲದ ಮನುಷ್ಯ ಉಪಾಧ್ಯಾಯನಾದರೆ ಅವನಿಗೇನೋ ಜೀವನೋಪಾಯ ಸಾಗಬಹುದು ; ಆದರೆ ವಿದ್ಯಾಪ್ರಚಾರಕ್ಕೆ ಅವನಿಂದ ನಷ್ಟವೆನ್ನಲು ಸಂದೇಹವಿಲ್ಲ. ಈ ಸ್ವರೂಪ ಯೋಗ್ಯತೆಯೆಂಬ ವ್ಯಕ್ತಿಪ್ರಭಾವವನ್ನು ಇಂಗ್ಲಿಷಿನಲ್ಲಿ “ಪರ್‌ಸನ್ಯಾಲಿಟಿ ” (Personality) ಎಂದು ಕರೆಯುತ್ತಾರೆ. ಅದು ಬರಿಯ ವ್ಯಕ್ತಿತ್ವವಲ್ಲ. ವ್ಯಕ್ತಿತ್ವ ಎಂದರೆ ಪ್ರತ್ಯೇಕವಾದ ಅಸ್ತಿತ್ವ ಮಾತ್ರ,—ಪ್ರತ್ಯೇಕ ಗಣ್ಯತೆ,—ಇವನೂ ಒಬ್ಬನೆಂದು ಬೇರೆಯಾಗಿ ಲೆಕ್ಕಕ್ಕೆ ಸಿಕ್ಕುವ ಸ್ಥಿತಿ. ಕುಂಟನಿಗೂ ಕುರುಡನಿಗೂ ಕುರೂಪಿಗೂ ಇಂಥ ಅಸ್ತಿತ್ವವುಂಟು. ಪ್ರಜಾಗಣಿತಿಗೆ (ಸೆನ್ಸಸ್) ಅಂಥವರೂ ಸಿಕ್ಕುತ್ತಾರೆ. ನಮಗೆ ಬೇಕಾಗಿರುವುದು ಆ ವ್ಯಕ್ತಿಗಣನೆಗಿಂತ ಹೆಚ್ಚಿನ ಒಂದು ಸಂಪತ್ತು. ಉಪಾಧ್ಯಾಯನಿಗೆ ಇರಬೇಕಾದ ಸ್ವರೂಪಯೋಗ್ಯತೆ ಅನೇಕ ಗುಣಗಳ ಸಮ್ಮೇಳನದಿಂದ ಉತ್ಪನ್ನವಾಗತಕ್ಕದ್ದು. ಅವುಗಳಲ್ಲಿ ಐದು ಮುಖ್ಯ ವಾದವುಗಳನ್ನು ಉದಾಹರಣೆಗಾಗಿ ಸೂಚಿಸುತ್ತೇನೆ.

(೧) ವರ್ಚಸ್ಸು—ಇದನ್ನು ಮುಖದ ಗೆಲುವು ಎಂದೂ, ‘ ಕಳೆ ’ ಎಂದೂ, ಕಾಂತಿ ಎಂದೂ ಕರೆಯುವುದುಂಟು. ಅದು ಅಂಗಾಂಗ ಪುಷ್ಟಿಯಲ್ಲ, ಉಡುಪು ತೊಡಪುಗಳ ಆಡಂಬರವಲ್ಲ, ಚೆಲುವು ಕುಲುಕುಗಳಲ್ಲ. ಅದು ಬುದ್ಧಿಯ ಚಾಕಚಕ್ಯದಿಂದಲೂ ದೇಹಾರೋಗ್ಯದಿಂದಲೂ ಉಂಟಾಗುವ ಪ್ರಕಾಶ. ಉಪಾಧ್ಯಾಯನು ಪರಿಶುದ್ಧನಾಗಿಯೂ ಮಂಕುತನ ಸೋಮಾರಿತನಗಳಿಲ್ಲ ದವನಾಗಿಯೂ ಕಾಣಬೇಕು.

(೨) ಪ್ರಸನ್ನತೆ—ಎಂದರೆ ವಿಶ್ವಾಸ ಹುಟ್ಟಿಸುವ ಮುಖಭಾವ. ಉಪಾ

ಧ್ಯಾಯನು ಸ್ನೇಹದ ನಡೆನುಡಿಗಳುಳ್ಳವನಾಗಬೇಕು. ಅವನನ್ನು ನೋಡಿದರೆ ಹುಡುಗರು ಬೆದರದೆ ಅವನೊಡನೆ ಮಾತನಾಡಬೇಕೆಂದೆನಿಸಬೇಕು. ಅವನು ಉಗ್ರನಾಗಿರಬಾರದು, ವಕ್ರನಾಗಿರಬಾರದು. ಕುರುಡನೂ ಕಿವುಡನೂ ವಿಕಾರಿಯೂ ಹಾಸ್ಯಪಾತ್ರನೂ ಆಗಿರಬಾರದು.

(೩) ಗಾಂಭೀರ್ಯ—ಎಂದರೆ ಗೌರವ ಹುಟ್ಟಿಸುವ ಮಾತು, ನಡತೆ. ಹೇಗೆ ಉಪಾಧ್ಯಾಯನು ಭಯೋತ್ಪಾದಕನಾಗಬಾರದೋ ಹಾಗೆಯೇ ಅವನು ಹುಡುಗಾಟದವನೂ ಆಗಬಾರದು. ಅತಿ ಸಲಿಗೆಯಿಂದ ಅವನ ಮಾತಿಗೆ ಬೆಲೆ ತಗ್ಗುತ್ತದೆ. ಅವನಲ್ಲಿ ಯಾವುದೋ ಒಂದು ಮಹತ್ತ್ವದ ಸಂಗತಿ ಇರುವುದೆಂಬ ಭಾವನೆಯನ್ನೂ ಅದನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲವನ್ನೂ ಅವನು ಶಿಷ್ಯರ ಮನಸ್ಸಿನಲ್ಲಿ ಸರ್ವದಾ ಉಂಟುಮಾಡುತ್ತಿರಬೇಕು.

(೪) ವಾಕ್ಯಶುದ್ಧಿ—ಎಂದರೆ ಮಾತಿನ ಸರಿಯಾದ ನುಡಿತ. ಉಪಾಧ್ಯಾಯ ನಿಗಿರುವ ಮುಖ್ಯಸಾಧನ ವಾಕ್ಕು. ಅವನ ಬೋಧನೆಯ ಸಾರ್ಥಕತೆ ಅವನ ವಾಕ್ಸಾಮರ್ಥ್ಯಕ್ಕೆ ಅನುಗುಣವಾಗಿರುತ್ತದೆ. ಆದಕಾರಣ ಅವನ ಕಂಠಧ್ವನಿ ಕಿವಿಗೆ ಹಿತವಾಗಿ, ಅವನ ಅಕ್ಷರದ ಉಚ್ಚಾರಣೆ ಸ್ಫುಟವಾಗಿರಬೇಕು; ಅವನ ಪದ್ಯ ಹಾಡುಗಳು ಶ್ರಾವ್ಯವಾಗಿರಬೇಕು; ಅವನ ಮಾತುಕಥೆಯ ರೀತಿ ಕಳೆಕಳೆಯಾಗಿರಬೇಕು.

(೫) ಸ್ವಸ್ಥಾನಪರಿಜ್ಞಾನ—ಎಂದರೆ ಸಮಾಜದಲ್ಲಿ ತನಗೆ ದೊರೆತಿರುವ ಸ್ಥಳವೆಂಥಾದ್ದು, ತನಗಿರುವ ಗುಣಶಕ್ತಿಗಳೆಂಥವು, ಆ ಶಕ್ತಿಗಳನ್ನು ಆ ಸ್ಥಾನದ ಕರ್ತವ್ಯಗಳಿಗೆ ಹೇಗೆ ವಿನಿಯೋಗಿಸಿದರೆ ತನ್ನ ಬದುಕು ಸಾರ್ಥಕವಾದೀತು — ಎಂಬೀ ಸ್ವಧರ್ಮವಿವೇಕ. ಇದು ಎಲ್ಲಕ್ಕಿಂತ ಕಷ್ಟವೂ ಎಲ್ಲಕ್ಕಿಂತ ಮುಖ್ಯವೂ ಆದ ಲಕ್ಷಣ. ಇದು ಸ್ವಲ್ಪಮಟ್ಟಿಗಾದರೂ ಉಪಾಧ್ಯಾಯನಲ್ಲಿಲ್ಲದೆ ಹೋದರೆ ಆತನು ಕರ್ತವ್ಯಾಚರಣೆಯಲ್ಲಿ ಕೂಲಿಯಾಳಿನ ಮಟ್ಟಕ್ಕಿಂತ ಮೇಲಕ್ಕೇಳು ವುದು ಅಸಾಧ್ಯ.

ಈ ಪಂಚ ಲಕ್ಷಣಗಳನ್ನು ಪಡೆದಿರುವುದರ ಜೊತೆಗೆ ಉಪಾಧ್ಯಾಯನು ಶೀಲವಂತನೂ ಸಂಭಾವಿತನೂ ಆಗಿರಬೇಕೆಂಬುದನ್ನು ಬೇರೆಯಾಗಿ ಹೇಳ ಬೇಕಾದದ್ದಿಲ್ಲ. ಸುತ್ತಮುತ್ತಣ ಜನರ ವಿಶ್ವಾಸ ಗೌರವಗಳನ್ನು ಆತ ಸಂಪಾದಿಸಿಕೊಂಡಷ್ಟೂ ಆತ ದುಡಿಯುವ ದುಡಿತಕ್ಕೆ ಹೆಚ್ಚು ಫಲ ದೊರೆಯು ವುದು ಖಂಡಿತ. ವಾಸ್ತವವನ್ನು ನೋಡಿದರೆ, ಆತನು ಸೌಜನ್ಯದಿಂದಲೂ ಸಭ್ಯತೆಯಿಂದಲೂ ಸಂಪಾದಿಸಿದ ಕೀರ್ತಿಯೇ ಆತನ ಸ್ವರೂಪಶಕ್ತಿಯ

ಮುಖ್ಯಾಂಶವಾಗುತ್ತದೆ. ಬೋಧನವೃತ್ತಿಯಲ್ಲಿ ಕಾರ್ಯಕಾರಿಯಾಗತಕ್ಕ ಶಕ್ತಿಯು ವ್ಯಕ್ತಿಸ್ವರೂಪ ಮಹಿಮೆಯಾದದ್ದರಿಂದ, ಬಾಲಪಾಠಶಾಲೆಯ ಉಪಾಧ್ಯಾಯನ ಸ್ಥಾನಕ್ಕೆ ಉಮೇದುವಾರರಾಗಿ ಬಂದವರನ್ನೆಲ್ಲ, ಅವರು ಕ್ಲ್‌ಪ್ತ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರೆಂಬ ಒಂದು ಕಾರಣದಿಂದಲೇ ನಿಯಮಿಸಿಕೊಳ್ಳಬಾರದೆಂದೂ, ಅವರ ವಿದ್ವತ್ತಿನ ಪರೀಕ್ಷೆಯ ಜೊತೆಗೆ ವ್ಯಕ್ತಿಸ್ವರೂಪಪರೀಕ್ಷೆಯೂ ನಡೆಯುವುದು ಅವಶ್ಯವೆಂದೂ ನಾನು ಅಭಿಪ್ರಾಯಪಟ್ಟಿದ್ದೇನೆ. ಪೊಲೀಸ್ ಕಾನ್‌ಸ್ಟೆಬಲ್ ಉದ್ಯೋಗಕ್ಕೂ ಮಿಲಿಟರಿ ಶಿಪಾಯಿ ಉದ್ಯೋಗಕ್ಕೂ ಬಂದ ಉಮೇದುವಾರರನ್ನು ನಿಯಮಿಸುವುದಕ್ಕೆ ಮೊದಲು ಅವರ ಸ್ವರೂಪಯೋಗ್ಯತೆಯನ್ನು ಮುಖತಃ ನೋಡಿ ನಿಷ್ಕರ್ಷಿಸುವುದು ಪದ್ಧತಿ. ಆಳಿನ ಎತ್ತರವೆಷ್ಟು, ಅವನ ಮೈಕಟ್ಟು ಎಂಥಾದ್ದು, ಅವನ ಚಟುವಟಿಕೆ ಎಂಥಾದ್ದು—ಇದನ್ನು ಕಣ್ಣಾರ ಕಂಡು ಒಪ್ಪಿದಲ್ಲದೆ ಪೊಲೀಸ್ ಉದ್ಯೋಗವನ್ನು ಕೊಡುವುದಿಲ್ಲ. ಅದು ಹಾಗಿರಲಾಗಿ, ಮಕ್ಕಳ ಲೋಕವನ್ನಾಳುವ ಉಪಾಧ್ಯಾಯರ ಪದವಿಗೆ ಜನವನ್ನು ಜಾಗರೂಕತೆಯಿಂದ ಆರಿಸಬೇಡವೆ? ಬಂದಬಂದವರೆಲ್ಲ ಅದಕ್ಕೆ ಅರ್ಹರೆ? ವಿದ್ಯಾ ಇಲಾಖೆಯವರು ವರ್ಷಕ್ಕೆ ಒಂದೆರಡು ಬಾರಿ ಒಂದೊಂದು ಸಣ್ಣ ಸಮಿತಿಯನ್ನು ನಿಯಮಿಸಿ, ಆ ಸಮಿತಿ ಒಪ್ಪಿದ ಉಮೇದುವಾರರನ್ನೇ ಉಪಾಧ್ಯಾಯವೃತ್ತಿಗೆ ಸೇರಿಸುವುದು ಯುಕ್ತವೆಂದು ನನಗೆ ತೋರುತ್ತದೆ. ಈ "ಪರ್‌ಸನ್ಯಾಲಿಟಿ" ಅಥವಾ ಸ್ವರೂಪಯೋಗ್ಯತೆಯೆನ್ನುವುದು ಅಳತೆಗೂ ತೂಕಕ್ಕೂ ಸಿಕ್ಕುವ ವಸ್ತುವಲ್ಲವೆಂಬುದು ನಿಜ. ಅದರಲ್ಲಿ ಒಬ್ಬರು ಮಾಡುವ ನಿಷ್ಕರ್ಷೆ ಇನ್ನೊಬ್ಬರಿಗೆ ಸಮ್ಮತವಾಗದೆ ಹೋಗಬಹುದೆಂಬುದೂ ನಿಜ. ಆದರೂ ಒಂದು ತತ್ತ್ವವನ್ನನುಸರಿಸಿದ ಆರಿಸುವಿಕೆ—ಅಥವಾ ವರಣ (Principle of Selection)—ಅವಶ್ಯವೆಂದು ನನ್ನ ನಂಬಿಕೆ. ಆ ವರಣವಿಧಾನ (Method of Selection) ಎಷ್ಟೇ ಸ್ಥೂಲವಾದದ್ದಾಗಲಿ, ಬಂದ ಉಮೇದುವಾರಿಕೆಯ ಧಾನ್ಯವನ್ನು ಅಂಥಾ ಜಲ್ಲಡಿಯೊಂದರಲ್ಲಿ ಮೊದಲು ಶೋಧಿಸುವುದರಿಂದ ವಿದ್ಯಾಪ್ರಚಾರಕ್ಕೂ ಉಪಾಧ್ಯಾಯ ವೃತ್ತಿಗೂ ಪರಮ ಲಾಭವುಂಟು. ವರಣಕರ್ತಸಮಿತಿ ಮೂರು ಮಂದಿ ಸದಸ್ಯರುಳ್ಳದ್ದಾಗಿ, ಅವರಲ್ಲೊಬ್ಬರು ಇಲಾಖೆಗೆ ಸೇರಿದ ಅಧಿಕಾರಿಯಾಗಿರಬೇಕು. ಆ ಸಮಿತಿ ಎಲ್ಲ ಉಮೇದುವಾರರನ್ನೂ ಮುಖತಃ ಕಂಡು ಮಾತನಾಡಿಸಿ, ತಕ್ಕಂತೆ ಶಿಫಾರಸು ಮಾಡತಕ್ಕದ್ದು. ಅದು ಒಪ್ಪದವರನ್ನು ಸಾಮಾನ್ಯವಾಗಿ ಇಲಾಖೆ ಅಂಗೀಕರಿಸತಕ್ಕದ್ದಲ್ಲ.

## ಬೋಧಕ ಶಿಕ್ಷಣ

ಉಮೇದುವಾರರನ್ನು ಶೋಧಿಸಿ ಆರಿಸಿದ ಮೇಲೆ ಅವರ ತರಬೆಯತ್ತಿನ ವಿಚಾರ. ಇನ್ನು ಮುಂದೆ ಪ್ರಾಥಮಿಕ ಶಾಲೆಯ ಉಪಾಧ್ಯಾಯನಾಗುವ ಪ್ರತಿಯೊಬ್ಬನೂ, ಮತ್ತು ಈಗಾಗಲೇ ಉಪಾಧ್ಯಾಯರಾಗಿರುವವರಲ್ಲಿ ಇನ್ನೂ ೨೫ ವರ್ಷ ವಯಸ್ಸಿಗೆ ಮೇಲ್ಪಡದಿರುವ ಪ್ರತಿಯೊಬ್ಬನೂ ಅವಶ್ಯವಾಗಿ ಶಿಕ್ಷಣ ಪಡೆದವನಾಗಿರತಕ್ಕದ್ದೆಂದು ವಿಧಾಯಕವಾಗಿರಬೇಕು. ಇಪ್ಪತ್ತೈದಕ್ಕೆ ಮೇಲ್ಪಟ್ಟ ವಯಸ್ಸಿನವರೂ ಸಹ ಕೂಡಿದ ಮಟ್ಟಿಗೂ ಶಿಕ್ಷಿತರಾಗುವುದು ಸರ್ವಥಾ ಅಪೇಕ್ಷಿತವಾದದ್ದೇ. ಉಪಾಧ್ಯಾಯ ವೃತ್ತಿಗಾಗಿ ಪ್ರತ್ಯೇಕವಾದ ವೃತ್ತಿಶಿಕ್ಷಣವನ್ನು ಪಡೆಯದವರನ್ನು ಇನ್ನು ಮುಂದೆ ಇಲಾಖೆ ನಿಯಮಿಸಬಾರದು.

ಮಂದಿಯ ಕೂಗಿಗೆ ಹೆದರಿ ಪರೀಕ್ಷೆಗಳ ಮಟ್ಟವನ್ನು ಇಳಿಸಿದರೆ ಕಡೆಗೆ ಕೆಡುವವರು ಮಂದಿಯ ಮಕ್ಕಳೇ. ಎಲ್ಲ ಪರೀಕ್ಷೆಗಳೂ ನ್ಯಾಯವಾದಷ್ಟು ಕಠಿನವಾಗಿರಬೇಕು, ಮತ್ತು ಪ್ರಾಮಾಣಿಕ ರೀತಿಯಲ್ಲಿ ನಡೆಯಬೇಕು. ರಾಜಕೀಯ ಕಾರಣಗಳಿಗೋಸ್ಕರ ವಿದ್ಯಾಶಿಖರಕ್ಕೆ ಮಸಿ ಬಳಿಯಬಾರದು.

ಉಮೇದುವಾರರ ಆಯ್ಕೆ ಸರಿಯಾಗಿ ನಡೆದು, ಅವರ ವೃತ್ತಿಶಿಕ್ಷಣ ಸಾಂಗವಾಗಿ ಪೂರೈಸಿದ ಬಳಿಕಲೂ, ಉಪಾಧ್ಯಾಯರ ಮನಸ್ಸಿನ ನವೀನತೆಯನ್ನೂ ಹುರುಪನ್ನೂ ಕಾಪಾಡಲು ಆಗಬೇಕಾದ ಏರ್ಪಾಟುಗಳು ಕೆಲವಿರುತ್ತವೆ. ನೆಪೋಲಿಯನ್ ಮಹಾವೀರನು "ಸೈನ್ಯ ಕಾಲಿನಿಂದ ನಡೆಯುವುದಿಲ್ಲ, ಹೊಟ್ಟೆಯ ಮೇಲೆ ತೆವಳುತ್ತದೆ"—ಎಂದು ಹೇಳುತ್ತಿದ್ದನಂತೆ. ವಿದ್ಯಾಪ್ರಚಾರವೂ ಹಾಗೆಯೇ ಸರಿ. ಉಪಾಧ್ಯಾಯರಿಗೂ ಹೊಟ್ಟೆಹಸಿವುಗಳುಂಟು. ಅದನ್ನು ಸರಕಾರ ಗಮನಿಸದೆ ಎಂಥ ಘನಸಂಕಲ್ಪಗಳನ್ನು ಬರೆದಿಟ್ಟರೂ ಅದು ಕನ್ನಡಿಯಲ್ಲಿ ಕಾಣಿಸಿದ ಕಂಠೀಹಾರವೇ.

## ಬಾಲಪಾಠದ ವಿಶೇಷಾಂಶ

ಓದು, ಬರಹ, ಲೆಕ್ಕ—ಈ ಮೂರು (The Three *R*'s) ಪ್ರಾಥಮಿಕ ವಿದ್ಯಾಭ್ಯಾಸದ ತಿರುಳೆಂದು ಹೇಳುವುದು ಹಿಂದಿನ ವಾಡಿಕೆ. ಆದರೆ ಇದು ಬಾಲಕನ ವಿದ್ಯೆಯ ಬಾಹ್ಯಲಕ್ಷಣ. ಅದರ ಅಂತರ್ಲಕ್ಷಣಗಳನ್ನು ನಾವು ಗಮನದಲ್ಲಿಡುವುದು ಆವಶ್ಯಕ. ಐದಾರು ವರ್ಷದ ಶಿಶುವಿನ ಅಂತರಂಗದಲ್ಲಿ ಅಡಗಿರುವ ಮೂರು ತೆರದ ಶಕ್ತಿಗಳನ್ನು ಹೊರಕ್ಕೆ ಸೆಳೆದು ಬೆಳೆಯಿಸು

ವುದು ಪ್ರಾಥಮಿಕ ವಿದ್ಯಾಭ್ಯಾಸದ ಮುಖ್ಯ ಉದ್ದೇಶ. ಅವುಗಳಲ್ಲಿ ಮೊದಲನೆಯದು ಅನುಭವಶಕ್ತಿ, ಎರಡನೆಯದು ವಿಚಾರಶಕ್ತಿ, ಮೂರನೆಯದು ಸ್ಮೃತಿಶಕ್ತಿ. ಬೋಧನಕ್ರಮದಲ್ಲಿ ಮುಖ್ಯವಾಗಿ ಎರಡು ವ್ಯಾಪಾರಗಳು ಕೂಡಿಕೊಂಡಿರುತ್ತವೆ:—ಒಂದು ಒಳಶಕ್ತಿಗಳನ್ನು ಹೊರಕ್ಕೆ ತೆಗೆಯುವುದು; ಇನ್ನೊಂದು ಹೊರಸಂಗತಿಗಳನ್ನು ಒಳಕ್ಕೆ ತುಂಬುವುದು. ಪ್ರಾಥಮಿಕ ದರ್ಜೆಯಲ್ಲಿ ಮೊದಲನೆಯದು ಮುಖ್ಯ. ಲೋಕಸಂಗತಿಗಳನ್ನೂ ಶಾಸ್ತ್ರಾಂಶಗಳನ್ನೂ ತಿಳಿಸುವ ದರ್ಜೆ ಅದಕ್ಕಿಂತ ಮೇಲಿನದು. ಮಕ್ಕಳಲ್ಲಿ ಸಹಜವಾಗಿ ಅಡಗಿರುವ ಮೂರು ಅಂತಶ್ಶಕ್ತಿಗಳನ್ನು ವೃದ್ಧಿಪಡಿಸುವುದಕ್ಕೆ ಉಪಕರಣಮಾತ್ರಗಳಾದುವು ನಿಮ್ಮ ಪುಸ್ತಕ ಸಾಮಗ್ರಿಗಳು.

## ಪ್ರಕೃತಿಸಂಪರ್ಕ

ಮೊದಲನೆಯದಾದ ಅನುಭವಶಕ್ತಿ, ಅಥವಾ ಗ್ರಹಣಶಕ್ತಿ, ಎಂಬುದನ್ನು ವೃದ್ಧಿಪಡಿಸಲು ಪ್ರಕೃತಿಯ ಸಂಪರ್ಕವೇ (Nature Study) ಮುಖ್ಯಮಾರ್ಗ. ಐದು ವರ್ಷದ ಮಗುವಿನಿಂದ ಹಿಡಿದು ರವೀಂದ್ರನಾಥ ಠಾಕೂರರಂಥ ಮಹಾಕವಿಯ ೮೦–೯೦ ನೆಯ ವರ್ಷದವರೆಗೂ ನಡೆದರೂ ಇನ್ನೂ ಮುಗಿಯದ ಅದ್ಭುತಪಾಠ ಈ ಪ್ರಕೃತಿವ್ಯಾಸಂಗ. ಉಪಾಧ್ಯಾಯನು ಶಾಲೆಯ ಕಟ್ಟಡದ ಹೊರಗಡೆ ಕಲಿಸುವ ಪಾಠ ಇದು. ಆಕಾಶದಲ್ಲಿಯ ಮೋಡಗಳ ಓಡಾಟಗಳು, ಬೆಳಗು ಸಂಜೆಗಳ ವರ್ಣವಿಚಿತ್ರಗಳು, ಹೊಲಗದ್ದೆಗಳ ಹಸುರು, ಹಕ್ಕಿಗಳ ಕಲಕಲ, ಎಲೆ ಚಿಗುರುಗಳ ರಂಗುರಂಗುಗಳು, ಮೊಗ್ಗು ಹೂಗಳ ಕೋಮಲ ಛಾಯೆಗಳು, ಗಿಡಬಳ್ಳಿಗಳ ಕುಲುಕಾಟ ಕುಣಿದಾಟಗಳು—ಇವುಗಳನ್ನೆಲ್ಲಾ ನೋಡಿ ಸಂತೋಷಪಡುವುದನ್ನು ಮಕ್ಕಳಿಗೆ ಹೇಳಿಕೊಡಬೇಕು. ಹೂತ ಬೀಜ ಮೊಳೆತು; ಮೊಳಕೆಯಲ್ಲಿ ದಳ ಒಡೆದು; ದಳ ಬಲಿತು ಎಲೆಯಾಗಿ; ಕಡ್ಡಿ ಕಾಂಡವಾಗಿ; ಹಸಿರು ತೊಗಟೆ ಕಂದಾಗಿ, ಕಂದು ಮಾಸಲಾಗಿ; ಕಾಂಡದ ಗೆಣ್ಣಿನಿಂದ ಕುಡಿಯೊಡೆದು, ಕುಡಿಯಿಂದ ಚಿಗುರೊಡೆದು; ಚಿಗುರು ಚಿನ್ನದ ರೇಕಾಗಿ, ಕಡೆಗೆ ತರಗಾಗಿ; ಕಡ್ಡಿ ರೆಂಬೆಯಾಗಿ, ರೆಂಬೆ ಕೊಂಬೆಯಾಗಿ, ಕೊಂಬೆ ಬಿಳಲು ಬಿಟ್ಟು—ಹೀಗೆ ದಿನೇ ದಿನೇ ನಡೆಯುತ್ತಿರುವ ಅದ್ಭುತವನ್ನು ಅವರು ಕಣ್ಣಾರ ನೋಡಬೇಕು. ಮಕ್ಕಳು ಬೆಳಗ್ಗೆಯೂ ಸಂಜೆಯೂ ಅರಳಿದ ಕಣ್ಣಿಂದ ಅದನ್ನು ನೋಡುವಂತೆ ಮಾಡಬೇಕು. ಸೃಷ್ಟಿಯ ಚಿತ್ರವೂ ಸೌಂದರ್ಯವೂ ನಮ್ಮ ಸುತ್ತಮುತ್ತ ಎಲ್ಲೆಲ್ಲೂ ತುಂಬಿರುತ್ತದೆ; ಆದರೂ ನಮ್ಮ ಕಣ್ಣುಗಳು ಅದನ್ನು ಕಾಣುವುದಿಲ್ಲ. ನಿತ್ಯ

ಪರಿಚಯದ ಅತಿಸಾಮಾನ್ಯತೆಯ ಪೊರೆ ಅವನ್ನು ಮುಸುಕಿರುತ್ತದೆ. ಬಲ್ಲವರು ನಮ್ಮ ಕಣ್ಣಿವೆಯನ್ನು ತೆರೆದು ಆ ಪೊರೆಯನ್ನು ತೆಗೆದುಹಾಕಿದಾಗ ನಮ್ಮೆದುರಿನ ಸೊಬಗು ನಮಗೆ ಗೋಚರವಾಗುತ್ತದೆ. ಹೀಗೆ ಶಿಶುಗಳ ಕಣ್ಣನ್ನು ತೆರಸಿ ಪ್ರಕೃತಿಯ ಚಿತ್ರಕಾರ್ಯವನ್ನು ತೋರಿಸಿಕೊಡಬಲ್ಲ ಉಪಾಧ್ಯಾಯನೇ ಧನ್ಯನಾದವನು. ಇಂಥ ಸೃಷ್ಟ್ಯನುಭವಸೂಕ್ಷ್ಮತೆಯೇ ಹೃದಯಪರಿಪಾಕಕ್ಕೆ ಮೂಲ. ಪ್ರಕೃತಿಪಾಠಕ್ಕೆ ಸಹಕಾರಿಗಳಾದವು ಕಥೆ, ಇತಿಹಾಸ, ಪುರಾಣ, ಉಪಾಖ್ಯಾನಗಳು. ಈ ಪ್ರಕೃತಿ-ಸಾಹಿತ್ಯಸಂಯೋಗದಿಂದ ಹೊರಹೊಮ್ಮುವುದು ಕಾವ್ಯ-ಸಂಗೀತಗಳ ಸಮ್ಮೇಳನದ ಆನಂದ. ಇಂಥ ಸೃಷ್ಟಿಯ ಮತ್ತು ಕಾವ್ಯದ ಅನುಭವದಿಂದ ಉತ್ಪನ್ನವಾಗುವುದು ಜೀವಸಹಾನುಭೂತಿ, ಲೋಕಕಾರುಣ್ಯ, ಧರ್ಮೋತ್ಸಾಹ. ನಮ್ಮ ದೇಶದಲ್ಲಿ ಕೆಲವು ವರ್ಷಗಳಿಂದೀಚೆಗೆ ನಮ್ಮ ಹಿರಿಯರು ಕೆಲವು ನೀತಿಶಿಕ್ಷಣ ಮತಬೋಧನೆಗಳೆಂಬ ಕಾಷ್ಠವ್ಯಸನಕ್ಕೆ ಮನಸ್ಸು ಕೊಟ್ಟಿದ್ದಾರೆ. ಅವರು ತತ್ತ್ವವನ್ನು ನೋಡುವುದಾದರೆ, ಪ್ರಕೃತಿಪಾಠ ಕಾವ್ಯಪಾಠಗಳಿಗಿಂತ ಹೆಚ್ಚು ಸಾರ್ಥಕವಾಗುವ ನೀತಿಪರಿಪಾಕಕ್ರಮ ಯಾವುದೂ ಇರಲಾರದೆಂದು ಒಪ್ಪಬೇಕಾಗುತ್ತದೆ. "ಕಾಪೀ" ಪುಸ್ತಕದಲ್ಲಿಯ ಉಪದೇಶವಾಕ್ಯಗಳನ್ನು ಉರುಹಚ್ಚಿದರೆ ನಿಜವಾದ ನೀತಿ ವಿಕಾಸವಾದೀತೆ? ಶುಕಪಾಠ ಕಿವಿಯದು, ಹೃದಯದ್ದಲ್ಲ. ನಿಜವಾದ ನೀತಿ ಅಂತರನುಭವದ ಕುಸುಮವಿಕಾಸ. ಆ ಅನುಭವವು ಜೀವಲೋಕ ಸಂಪರ್ಕದಿಂದ ಆಗತಕ್ಕದ್ದು. ನಾವು ಜೀವಜಗತ್ತುಗಳನ್ನು ನೋಡಬೇಕು; ಕಣ್ಣುಬಿಟ್ಟು ನೋಡಿ ಅದರ ವಿಕಸನ ಸಂಕೋಚನಗಳಲ್ಲಿ ಮನಸಾ ಭಾಗವಹಿಸಿ ಹಿಗ್ಗಿ, ಕೊರಗಿ, ತಲ್ಲೀನರಾಗಬೇಕು. ಅದೇ ಲೋಕಸಹಾನುಭೂತಿ. ಅದೇ ಧರ್ಮದ ಮೂಲ. ಅದನ್ನು ಕಲಿಸುವ ಗುರುವೇ ಗುರುವು. ಅಂಥವನ ಒಂದು ಕೈಯ ಪುಸ್ತಕವು ಪ್ರಕೃತಿ, ಇನ್ನೊಂದು ಕೈಯಿನದು ಕಾವ್ಯ.

## ವಿಚಾರಪ್ರವೃತ್ತಿ

ಎರಡನೆಯದಾದ ವಿಚಾರಶಕ್ತಿ, ಅಥವಾ ಕಾರ್ಯಕಾರಣ ಸಂಬಂಧ ವಿವೇಚನಶಕ್ತಿ, ಎಲ್ಲ ಶಾಸ್ತ್ರಕ್ಕೂ ಮೂಲಭೂತವಾದದ್ದು. ಅದೇ ತರ್ಕ. ಗಣಿತಕ್ಕೂ, ಭೌತವಿಜ್ಞಾನ, ರಸಾಯನವಿಜ್ಞಾನ ಮೊದಲಾದ ಬಾಹ್ಯ ಪ್ರಪಂಚ ವಿಜ್ಞಾನಗಳ ಅನ್ವೇಷಣೆಗೂ ಜೀವಪ್ರಾಯವಾದದ್ದು ಈ ತರ್ಕಶಕ್ತಿ. ಇದೇ ಸಮಸ್ತ ಲೌಕಿಕ ವ್ಯಾಪಾರಗಳಲ್ಲಿಯೂ ಯುಕ್ತಾಯುಕ್ತ ವಿವೇಕವೆಂದೂ ವಿಚಕ್ಷಣೆಯೆಂದೂ ಹೇಳಿಸಿಕೊಳ್ಳುತ್ತದೆ. ಈ ಶಕ್ತಿಯನ್ನು

ನೀವು ಪ್ರಕೃತಿಕಾರ್ಯಗಳ ಎದುರಿನಲ್ಲಿ ನಿಂತು ವರ್ಣಿಸಿ ವಿವರಿಸುವಾಗಲೂ, ಕಥೆ ಚರಿತ್ರೆಗಳನ್ನು ವಿಸ್ತರಿಸಿ ಹೇಳುವಾಗಲೂ ಪ್ರಾಸಂಗಿಕವಾಗಿ ಹುಟ್ಟುವ ಪ್ರಶ್ನೆ ಉಪಪ್ರಶ್ನೆಗಳಿಂದ ವೃದ್ಧಿಪಡಿಸಬಹುದು.

## ಧಾರಣಾಶಕ್ತಿ

ಮೂರನೆಯದಾದ ಸ್ಮೃತಿಶಕ್ತಿಯನ್ನು ಕುರಿತು ಒಂದು ಮಾತನ್ನು ವಿಶೇಷವಾಗಿ ಹೇಳಬೇಕೆಂದೆನ್ನಿಸುತ್ತದೆ. ನಮ್ಮ ಪೂರ್ವಿಕರ ವಿದ್ಯಾಭ್ಯಾಸ ಪದ್ಧತಿಯಲ್ಲಿ ಸ್ಮೃತಿಶಕ್ತಿಗೆ ಬಹು ಮುಖ್ಯವಾದ ಸ್ಥಾನವಿತ್ತು. ಅದನ್ನು ಅವರು "ಧಾರಣಾ" ಎಂದೂ ಕರೆದಿದ್ದಾರೆ. ಈಚೆಗೆ ಅದು ಸ್ಥಾನಭ್ರಷ್ಟವಾಗಿರುವಂತೆ ತೋರುತ್ತದೆ. "ಪೂರ್ವಕಾಲದಲ್ಲಿ ಅಚ್ಚಾದ ಪುಸ್ತಕಗಳಿರಲಿಲ್ಲ. ಆದಕಾರಣ ಎಲ್ಲಾ ಗ್ರಂಥಗಳನ್ನೂ ಅವರು ಬಾಯಿಪಾಠಮಾಡಿ ಉರುಹೊಡೆಯಬೇಕಾಗಿತ್ತು. ಈಗ ಮುದ್ರಣಸೌಕರ್ಯ ಯಥೇಷ್ಟವಾಗಿರುವುದರಿಂದ ಜ್ಞಾಪಕಶಕ್ತಿಗೆ ಹಾಗೆ ಹೊರೆ ಹೊರಿಸಬೇಕಾದದ್ದಿಲ್ಲ"—ಹೀಗೆಂದು ನಮ್ಮ ಈಚೀಚಿನ ಶಿಕ್ಷಣಪ್ರವೀಣರು ವಾದಮಾಡಿ, ಜ್ಞಾಪಕಶಕ್ತಿಯನ್ನು ಅಲಕ್ಷ್ಯ ಮಾಡಿದ್ದಾರೆ. ಅಕ್ಷರ, ಕಾಗುಣಿತ, ಅಮರ, ಮಗ್ಗಿ, ಪಂಚಾಂಗ ವಿವರಗಳು, ನೀತಿಶ್ಲೋಕಗಳು, ಸ್ತೋತ್ರಪಾಠಗಳು—ಇವನ್ನು ಬಾಲಕಶ್ರೇಣಿಗಳಿಗೆ ಬೆಳಗ್ಗೆಯೂ ಸಂಜೆಯೂ ಗಟ್ಟಿಯಾಗಿ ಹೇಳಿಕೊಡುವುದು ಹಿಂದಿನ ಪದ್ಧತಿ. ಆದರಿಂದ, ಅಕ್ಷರ ನುಡಿಯುವ ತುಟಿಗೆ ಮಾತ್ರವಲ್ಲದೆ ಕೇಳುವ ಕಿವಿಗೂ ಸಂಸ್ಕಾರವಾಗುತ್ತಿತ್ತು, ಜ್ಞಾಪಕಶಕ್ತಿಯೂ ದೃಢಪಡುತ್ತಿತ್ತು. ಆ ಪುರಾತನ ಪದ್ಧತಿ ಈಗ ಇರುವಂತಿಲ್ಲ. ಈಗಿನ ಉಪಾಧ್ಯಾಯರಿಗೇ ಆ ಬಗೆಯ ಶಿಕ್ಷಣ ಸಂಸ್ಕಾರವಾಗಿರುತ್ತದೆಯೋ ಇಲ್ಲವೋ ಸಂದೇಹದ ವಿಷಯ. ಗದ್ಯಪಾಠವನ್ನು ಗಟ್ಟಿಯಾಗಿ ಓದಿಸುವ ಮತ್ತು ಪದ್ಯಗಳನ್ನು ಕಂಠಪಾಠಮಾಡಿಸುವ ಪದ್ಧತಿಯೂ ಕಡಮೆಯಾಗಿರುವಂತೆ ತೋರುತ್ತದೆ. ಇದರಿಂದ ಈಚೀಚಿನ ವಿದ್ಯಾರ್ಥಿಗಳಿಗೆ ಆಗಿರುವ ನಷ್ಟವನ್ನು ಅಷ್ಟಿಷ್ಟೆಂದು ಲೆಕ್ಕಿಸಲು ಶಕ್ಯವಿಲ್ಲ. ಅವರ ಅಕ್ಷರೋಚ್ಚಾರಣೆ ನಾಚಿಕೆಗೆಟ್ಟದ್ದಾಗಿದೆ. ಅವರ ವಾಗ್ದಾರಿದ್ರ್ಯ ಹೇಳತೀರದ್ದಾಗಿದೆ. ಚಿಕ್ಕಂದಿನಲ್ಲಿ ಜ್ಞಾಪಕಶಕ್ತಿಯನ್ನು ಬಲಪಡಿಸದ ಕಾರಣದಿಂದ ಉತ್ತರೋತ್ತರ ಅವರು ಓದುವ ಓದೂ ಹೊಗೆಯಂತೆ ಹಾರಿಹೋಗುವುದಾಗಿದೆ. ನಮ್ಮ ಈಚೀಚಿನ ವಿದ್ಯಾವಂತರ ಜ್ಞಾನಸಿದ್ಧಿ 'ಸಂಧ್ಯಾವಂದನೆ ಪುಸ್ತಕಪಾಠ' ಎಂಬಂತೆ ಆಗಿದೆ. ದುರ್ಬಲವಾದ ಸ್ಮೃತಿಶಕ್ತಿಯುಳ್ಳವರು ಲೌಕಿಕ ವ್ಯವಹಾರದಲ್ಲಿ ದಕ್ಷರಾಗುವುದು ಅಸಂಭವವೇ ಸರಿ. ವಕೀಲನಾಗಲಿ,

ಎಂಜಿನಿಯರಾಗಲಿ, ವಾಗ್ಮಿಯಾಗಲಿ, ಜ್ಞಾಪಕದಿಂದಲೇ ನಿರ್ವಹಿಸಬೇಕಾದ ಸಂದರ್ಭಗಳು ಅವರ ಜೀವಿಕಾವೃತ್ತಿಯಲ್ಲಿ ಕ್ಷಣಕ್ಷಣವೂ ತುಂಬಿರುತ್ತವೆ. ಸಲಸಲಕ್ಕೂ ಪುಸ್ತಕವನ್ನು ನೋಡಿಯೇ ಅವರು 'ಸೆಕ್ಷನ್ನು'ಗಳನ್ನು ಉದಾಹರಿಸುವುದಾದರೆ, ಅಥವಾ 'ಫಾರ್ಮುಲಾ'ಗಳನ್ನು ಕಂಡುಕೊಳ್ಳುವುದಾದರೆ, ಅಥವಾ ಪದಗಳನ್ನು ಜೋಡಿಸುವುದಾದರೆ, ಅವರ ಜಯಲಾಭ ಅಪರೂಪದ ಸಂಗತಿಯೇ ಆದೀತು. ನಮ್ಮ ಜನದ ವಾಕ್‌ಸಂಪತ್ತು ಬೆಳಗುವುದಕ್ಕೂ ಅವರ ಕಾರ್ಯಯೋಗ್ಯತೆ ಬೆಳೆಯುವುದಕ್ಕೂ ನಮ್ಮ ಸ್ಮೃತಿಶಿಕ್ಷಣ ಈಗಿಗಿಂತ ಬಲಪಡುವುದು ಅವಶ್ಯವಾಗಿದೆ. ನಮ್ಮ ಸಮಸ್ತ ಜ್ಞಾನವೂ ಕೇವಲ ಸ್ಮೃತಿರೂಪವಾದದ್ದು ಎಂದು ಒಂದು ಮತವುಂಟು. ನಮ್ಮ ವಿದ್ಯಾಧಿಕಾರಿಗಳು ಈ ತತ್ತ್ವವನ್ನು ಗ್ರಹಿಸಿ ಸ್ಮೃತಿಶಕ್ತಿಗೆ ಪ್ರಾಥಮಿಕ ಶಿಕ್ಷಣದಲ್ಲಿ ಈಗಿಗಿಂತ ಹೆಚ್ಚಿನ ಸ್ಥಾನವನ್ನು ಕೊಟ್ಟಾರೆಂದು ನಾನು ಆಶಿಸುತ್ತೇನೆ.

ವಿದ್ಯಾಸಂಸ್ಕೃತಿಯ ವಾತಾವರಣವನ್ನು ಕುಲಕ್ರಮದಿಂದ ಪಡೆಯದಿರುವ ಅನೇಕ ಜಾತಿವರ್ಗಗಳು ಈಗ ಹೊಸದಾಗಿ ವಿದ್ಯಾಶಾಲೆಗಳಿಗೆ ಬರುತ್ತಿವೆ. ಈ ವರ್ಗಗಳ ಬಾಲಕರ ಬಾಯಿ ಶುದ್ಧವಾಗಿ, ಉಚ್ಚಾರಣೆ ಸ್ಫುಟವಾಗಬೇಕಾದರೆ ಕಾಗುಣಿತವನ್ನೂ ಪದ್ಯಗಳನ್ನೂ ಲೆಕ್ಕವನ್ನೂ ಪಂಚಾಂಗ ವಿವರಗಳನ್ನೂ ಅವರಿಂದ ಗಟ್ಟಿಯಾಗಿ ಹೇಳಿಸುವುದೂ, ಪಾಠಗಳನ್ನು ಗಟ್ಟಿಯಾಗಿ ಓದಿಸುವುದೂ ಅತ್ಯಂತ ಅವಶ್ಯವೆಂದು ಕಾಣುತ್ತದೆ.

* * *

## ಪದೇ ಪದೇ ಬದಲಾವಣೆ ಬೇಡ

ಈಚೆಗೆ ನಮ್ಮ ದೇಶದ ವಿದ್ಯಾವ್ಯವಸ್ಥೆಯಲ್ಲಿ ಅನೇಕ ಮಾರ್ಪಾಟುಗಳು ಪದೇ ಪದೇ ನಡೆದಿವೆ. ಕೆಲವೇನೋ ಅವಶ್ಯವಾದುವೇ; ಇನ್ನು ಕೆಲವು ಅಷ್ಟು ಅವಶ್ಯವಾದುವೆಂದು ಸ್ಪಷ್ಟಪಟ್ಟಿಲ್ಲ. ಪ್ರತಿಯೊಂದು ಮಾರ್ಪಾಟನ್ನು ಮಾಡಿದಾಗಲೂ ಅದು ಅನುಭವದ ಆಧಾರದ ಮೇಲೆ ಆದದ್ದೆಂದೂ ಅದರ ಉಪಯುಕ್ತತೆ ಸ್ವತಃಸಿದ್ಧವೆಂದೂ ಹೇಳಿದರು; ಅದಾದ ಕೆಲವು ವರ್ಷಗಳೊಳಗಾಗಿಯೇ ಅದನ್ನು ಒರಸಿಹಾಕಿ ಮತ್ತೊಂದು ಮಾರ್ಪಾಟು ನಡಸಿ, ಇದೇ—ಈ ಹೊತ್ತಿನದೇ—ಅನುಭವದ ಫಲಿತಾಂಶವೆಂದೂ, ಇದೇ ಸಫಲವಾಗತಕ್ಕದ್ದೆಂದೂ, ಹಿಂದಿನದು ಸರಿಯಲ್ಲವೆಂದೂ ವಾದಿಸಿದರು. ಕೆಲವು ದಿನದ ಮೇಲೆ ಇದೂ ಹೋಯಿತು; ಇನ್ನಾವುದೋ ಬಂತು. ಹೀಗೆ ಪದೇ ಪದೇ ಬದಲಾವಣೆ ನಡಸುವುದು ಒಳ್ಳೆಯದಲ್ಲವೆಂದು ನನ್ನ ಅಭಿಪ್ರಾಯ.

ಗಿಡ ಚೆನ್ನಾಗಿ ಬೆಳೆಯಬೇಕೆನ್ನುವವರು ವಾರವಾರವೂ ಅದನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬದಲಾಯಿಸುತ್ತಿರುವುದಿಲ್ಲ. ಒಂದು ಸಲ ಚೆನ್ನಾಗಿ ಯೋಚನೆಮಾಡಿ ಒಂದು ಏರ್ಪಾಟನ್ನು ಜಾರಿಗೆ ತರಬೇಕು; ತಂದ ಬಳಿಕ ಹತ್ತಿಪ್ಪತ್ತು ವರ್ಷವಾದರೂ ಅದನ್ನು ಸ್ಥಿರವಾಗಿ ನಿಲ್ಲಿಸಿ ಅದು ತನ್ನ ಗುಣವನ್ನು ಚೆನ್ನಾಗಿ ತೋರಿಸಲು ಅವಕಾಶ ಕೊಡಬೇಕು. ಅಷ್ಟರಲ್ಲೇ ದೋಷಗಳೇನಾದರೂ ಒಂದೆರಡು ಕಾಣಬಂದರೂ ಅವು ಸಾಮಾನ್ಯವಾದಂಥವಾದರೆ ಸಹಿಸಬೇಕೇ ಹೊರತು ಆತುರಪಟ್ಟು ವ್ಯತ್ಯಾಸಮಾಡಬಾರದು. ಪರಾಮರ್ಶೆ ಸಂತತವಾಗಿರಬೇಕು; ಬದಲಾವಣೆ ಮಾತ್ರ ತೀರಾ ಅವಶ್ಯವಾದಾಗ.

## ಕೈಗಾರಿಕೆ

ಪ್ರಾಥಮಿಕ (ಪ್ರೈಮರಿ) ದರ್ಜೆಯಲ್ಲಿ ಕೈಕೆಲಸದ ಭಾಗವನ್ನು ಸ್ವಲ್ಪ ಹೆಚ್ಚುಮಾಡುವ ಯೋಜನೆ ಯುಕ್ತವಾದದ್ದೆಂದು ತೋರುತ್ತದೆ. ಆಕೃತಿ ಲೇಖನವೂ, ಕಾಗದದಿಂದಲೂ ಮಣ್ಣಿನಿಂದಲೂ ಬಳಕೆಯ ವಸ್ತುಗಳನ್ನು ಮಾಡುವ ಆಕೃತಿರಚನೆಯೂ ಈಗ ರೂಢಿಯಲ್ಲಿವೆಯೆಂದು ಕೇಳಿದ್ದೇನೆ. ಇಂಥ ಕಲಾಭ್ಯಾಸದಿಂದ ಕಣ್ಣಿನ ನಿಷ್ಕರ್ಷೆಯೂ ಕೈಯ ಕುಶಲತೆಯೂ ಕುದುರುತ್ತವೆ, ಮತ್ತು ಮಕ್ಕಳ ಕಾರ್ಯಯೋಗ್ಯತೆ ಬೆಳೆಯುತ್ತದೆ ಎಂಬುದು ತತ್ತ್ವ. ಆದರೆ ಈಗ ರೂಢಿಯಲ್ಲಿರುವ ಕಲಾಬೋಧನೆ ಎಷ್ಟು ನಿಜವಾದದ್ದೋ ಎಷ್ಟು ನಾಮಮಾತ್ರದ್ದೋ ನಾನು ಹೇಳಲಾರೆ. ಈ ಭಾಗದಲ್ಲಿ ತೋಟಗಾರಿಕೆಯನ್ನೂ ಬಡಗಿ ಕೆಲಸವನ್ನೂ ಬಾಲಕರಿಗೆ ಅಭ್ಯಾಸಮಾಡಿಸುವುದು ಹೆಚ್ಚು ಪ್ರಯೋಜನಕಾರಿಯೆಂದು ತೋರುತ್ತದೆ. ಮಹಾತ್ಮ ಗಾಂಧಿಯವರ ಆಶ್ರಯದಲ್ಲಿ ತಯಾರಾಗಿರುವ 'ವಾರ್ಧಾ ಸ್ಕೀಮ್' ಎಂಬ ಶಿಕ್ಷಣವಿಧಾನದಲ್ಲಿ ಈ ಹಸ್ತಪರಿಶ್ರಮ ಭಾಗಕ್ಕೆ ಕೊಟ್ಟಿರುವ ಬೆಲೆ ಎಲ್ಲರೂ ಒಪ್ಪಬೇಕಾದದ್ದಾಗಿದೆ. ಗ್ರಾಮಾಂತರ ಪಾಠಶಾಲೆಗಳಿಗಂತೂ ಅದು ಅತ್ಯಂತ ಅವಶ್ಯವಾದ ಭಾಗ. ಬಹುಮಂದಿ ಮಕ್ಕಳು, ಬೆಳೆದ ಮೇಲೆ, ವ್ಯವಸಾಯ ಮೊದಲಾದ ಸಾಮಾನ್ಯ ಜೀವಿಕಾವೃತ್ತಿಗಳಲ್ಲಿ ನೆಲಸಬೇಕಾದವರಾದ ಕಾರಣ, ಮೊದಲೇ ಅಂಥವರಿಗೆ ಹಸ್ತಪರಿಶ್ರಮವಿಶ್ವಾಸವನ್ನು ಅಭ್ಯಾಸಮಾಡಿಸುವುದು ಸರ್ವಹಿತಕರ ಮಾರ್ಗ.

## ಪರಿಷ್ಕರಣ ಸಮಿತಿ

ಯಾವ ದೇಶದ ಸರಕಾರವೇ ಆಗಲಿ, ಅದರ ಕಾರ್ಯರೀತಿಯನ್ನು ಆಗಾಗ ಪುನರ್ವಿಮರ್ಶೆಗೆ ಗುರಿಪಡಿಸದೆ ಬಿಟ್ಟರೆ ಆ ಕಾರ್ಯರೀತಿ ಮಾಮೂ

ಲೆಂಬ ಬಂಡಿಜಾಡಿನಲ್ಲಿ ಬಿದ್ದು, ಯಂತ್ರಪ್ರಾಯವಾಗಿ ನಿರ್ವೀರ್ಯವಾಗುತ್ತದೆ. ನಮ್ಮ ಸಂಸ್ಥಾನದ ವಿದ್ಯಾ ಇಲಾಖೆಯ ಚರಿತ್ರೆಯಲ್ಲಿ ಸರಕಾರದ ಮೊಖ್ತೇಸರರ ವ್ಯಕ್ತಿಸ್ವಭಾವಕ್ಕನುಗುಣವಾದ ಏರುತಗ್ಗುಗಳು ಕಾಣಬಾರದೆ ಇಲ್ಲ. ಒಟ್ಟಿನ ಮೇಲೆ, ಇದುವರೆಗೂ ಪಾಠವಿಷಯದ ಔಚಿತ್ಯ, ಶಿಕ್ಷಣಕ್ರಮದ ಯುಕ್ತತೆ ಮೊದಲಾದ ಶುದ್ಧ ವಿದ್ಯಾಪ್ರಶ್ನೆಗಳಿಗಿಂತ, ಉದ್ಯೋಗಗಳ ಹಂಚಿಕೆ, ವರ್ಗಾವರ್ಗಿಗಳು, ಸಂಬಳದ ಬಡ್ತಿ, ಅಧಿಕಾರದ ಪಾಲುಗಾರಿಕೆ, ನೂತನ ಪದವಿಗಳ ನಿರ್ಮಾಣ—ಇವೇ ಮೊದಲಾದ ಆಡಳಿತದ ಪ್ರಶ್ನೆಗಳು ನಮ್ಮ ಅಧಿಕಾರಿಗಳಿಂದ ಹೆಚ್ಚು ಗಮನವನ್ನು ತೆಗೆದುಕೊಂಡಿವೆಯೆಂದು ನನ್ನ ಭಾವನೆ. ಕೇವಲ ವಿದ್ಯಾಬೋಧನೆಯ—ಎಂದರೆ ವಿದ್ಯಾಭ್ಯಾಸಕ್ರಮಕ್ಕೆ ಸಂಬಂಧಪಟ್ಟ—ವಿಚಾರಗಳನ್ನು ಕುರಿತು ಆಗಾಗ ಸರಕಾರಕ್ಕೆ ಸಲಹೆಕೊಡಲು ಒಂದು ಸ್ಥಾಯೀ ಸಮಿತಿ ಇರುವುದು ಅವಶ್ಯವೆಂದು ನನಗೆ ತೋರುತ್ತದೆ. ವಿದ್ಯಾಪ್ರಪಂಚದಲ್ಲಿ ಹೊಸ ಹೊಸ ಪ್ರಶ್ನೆಗಳು ಏಳುತ್ತಿವೆ. ನಾನಾ ಭಾಷೆಗಳ ಹಕ್ಕುಗಳು ಮುಂದೆ ಬರುತ್ತಿವೆ. ನಾನಾ ಶಾಸ್ತ್ರಭಾಗಗಳ ಹಕ್ಕುಗಳೂ ಒತ್ತಿಕೊಂಡು ಬರುತ್ತಿವೆ. ಇವುಗಳನ್ನೆಲ್ಲ ತೂಕಮಾಡಿ, ಉಪಯೋಗದ ಬೆಲೆಯನ್ನು ನಿಶ್ಚಯಿಸಿ, ಸಮನ್ವಯಪಡಿಸಿ, ಜೋಡಿಸಲು ಸೂಕ್ಷ್ಮವಾದ ವಿಚಾರವೂ ವಿಶಾಲವಾದ ದೃಷ್ಟಿಯೂ ಅವಶ್ಯವಾಗುತ್ತವೆ. ವಿದ್ಯಾಪ್ರಶ್ನೆಗಳನ್ನು ಕೇವಲ ಜ್ಞಾನಪ್ರಸಾರದೃಷ್ಟಿಯಿಂದ ಮಾತ್ರವೇ ನೋಡಬೇಕಲ್ಲದೆ ರಾಜಕೀಯ ಕಕ್ಷಿಗಳ ದೃಷ್ಟಿಯಿಂದಲಾಗಲಿ, ಕೋಮುವಾರು ಪ್ರಯೋಜನದ ದೃಷ್ಟಿಯಿಂದಲಾಗಲಿ, ಆಡಳಿತದ ಅನುಕೂಲ್ಯದ ದೃಷ್ಟಿಯಿಂದಲೇ ಆಗಲಿ ನೋಡತಕ್ಕದ್ದಲ್ಲ. ವಿದ್ಯಾಪ್ರಶ್ನೆಗಳ ಮೇಲೆ ಸರ್ವದಾ ಕಣ್ಣಿರಬೇಕು; ವ್ಯತ್ಯಾಸಕಾರ್ಯ ವಿರಳವಾಗಿ,—ಅದು ಅವಶ್ಯವೆಂದು ಸಿದ್ಧವಾದಾಗ ಮಾತ್ರ,—ನಡೆಯಬೇಕಾದದ್ದು.

# ೧೧. ಕನ್ನಡಿಗರಿಗೆ ಸಂಸ್ಕೃತ*

೧

ಹೊಸ ಹೊಸದಾಗಿ ಬರುತ್ತಿರುವ ಕನ್ನಡ ಪುಸ್ತಕ ಪತ್ರಿಕೆಗಳನ್ನು ಓದುವವರಿಗೆ ಆ ಪುಸ್ತಕ ಪತ್ರಿಕೆಗಳ ಲೇಖಕರು ಅನುಭವಿಸುತ್ತಿರುವ ಒಂದು ಕಷ್ಟವು ಗೋಚರವಾಗದೆ ಇರಲಾರದು. ಆ ಕಷ್ಟ ಕನ್ನಡ ಭಾಷೆಯ ಶಬ್ದಸಾಮಗ್ರಿಗೆ ಸಂಬಂಧಪಟ್ಟದ್ದು. ನಮ್ಮ ಜನಕ್ಕೆ ಈಗ ಹೊಸ ಹೊಸ ವಸ್ತುಗಳ ಸ್ವರೂಪವನ್ನು ವರ್ಣಿಸಿ ಹೇಳಬೇಕಾಗಿದೆ, ಹೊಸ ಹೊಸ ಸಂಗತಿಗಳ ಮರ್ಮಗಳನ್ನು ಚಿತ್ರಿಸಿ ತಿಳಿಸಬೇಕಾಗಿದೆ. ಯೂರೋಪ್ ಅಮೆರಿಕಗಳಿಂದ ಪ್ರತಿನಿತ್ಯವೂ ಹೊಸ ಹೊಸ ಯಂತ್ರಕಲ್ಪನೆಗಳು, ಹೊಸ ಹೊಸ ರಸಾಯನ ದ್ರವ್ಯಗಳು, ಹೊಸ ಹೊಸ ಔಷಧಗಳು, ಹೊಸ ಹೊಸ ವಿದ್ಯುತ್‌ಸಾಧನೆಗಳು, ಹೊಸ ಹೊಸ ಯುದ್ಧೋಪಕರಣಗಳು ಬರುತ್ತಿವೆ. ಇವುಗಳ ರೂಪರಚನೆಗಳನ್ನು ವಿಶದವಾಗಿ ವಿವರಿಸಲು ಹೊಸ ಹೊಸ ಮಾತುಗಳು ಬೇಕಾಗುತ್ತವೆ. ಅದರಂತೆಯೇ ನಮ್ಮ ರಾಜಕೀಯದಲ್ಲಿಯೂ ಸಾಮಾಜಿಕದಲ್ಲಿಯೂ ಹೊಸ ಹೊಸ ತತ್ತ್ವಗಳೂ ಹೊಸ ಹೊಸ ಭಾವನೆಗಳೂ ತಲೆದೋರುತ್ತಿವೆ. ಪ್ರಜಾಪ್ರಭುತ್ವದ ವಿಧಾನಗಳು, ರಾಜ್ಯದ ಶಾಸನಾಂಗ ಕಾರ್ಯಾಂಗ ನ್ಯಾಯಾಂಗಗಳ ರೂಪರಚನೆಗಳು, ಅವುಗಳ ಪರಸ್ಪರ ಸಂಬಂಧಗಳು, ರಾಜ್ಯಾದಾಯದ ಕ್ರಮಗಳು, ಸುಂಕ ತೆರಿಗೆಗಳ ರೀತಿಗಳು, ಧನ ನಾಣ್ಯ ಪದ್ಧತಿಗಳು, ವ್ಯಾಪಾರ ಮಾರ್ಗಗಳು, ವ್ಯಕ್ತಿಯ ಹಕ್ಕು ಬಾಧ್ಯತೆಗಳು, ರಾಜ್ಯದ ಕರ್ತವ್ಯ ಅಧಿಕಾರಗಳು—ಇವೇ ಮೊದಲಾದ ನೂರಾರು ವಿಚಾರಗಳಲ್ಲಿ ನಾವು ಈಗ ಅನ್ಯದೇಶಗಳವರ ಅಭಿಪ್ರಾಯ ಸಂಧಾನಗಳೇನೆಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಆ ನೂತನ ಅಭಿಪ್ರಾಯಗಳಿಗೆ ಸರಿಹೊಂದುವ ಪದಸಾಮಗ್ರಿ ನಮ್ಮಲ್ಲಿ ನೂತನವಾಗಿ ತಯಾರಾಗಬೇಕು. ಈಗ ನಾನಾ ಲೇಖಕರು ಆ ಬಗ್ಗೆ ನಾನಾ ರೀತಿಯಾಗಿ ಪದರಚನೆ ಮಾಡಿಕೊಳ್ಳುತ್ತಿದ್ದಾರೆ. ಈ ನೂತನ ಪದರಚನೆಯಲ್ಲಿ ಸಾಧುವಾದದ್ದೂ ಇದೆ; ಅಷ್ಟು ಸಾಧುವಾಗಲಾರದ್ದೂ ಇದೆ. ಅವು ಎಂಥವೇ ಆಗಿರಲಿ, ಈ ಪದಗಳು ಉದ್ದಿಷ್ಟ ಕಾರ್ಯವನ್ನು ಮಾಡುತ್ತಿವೆಯೆ ?—ಎಂಬುದು ಮುಖ್ಯ ಪ್ರಶ್ನೆ.

---

* ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ "ಸಾರ್ವಜನಿಕ" ಮಾಸಪತ್ರಿಕೆಯ ೧೯೪೯ ರ ಮೇ ಸಂಚಿಕೆಯಲ್ಲಿ ಮೊದಲು ಪ್ರಕಟವಾದದ್ದು.

ನಮಗೆ ಹೊಸದಾಗಿ ಬೇಕಾಗಿರುವ ಮಾತುಗಳನ್ನು ಒದಗಿಸಿಕೊಳ್ಳಲು ಇರುವುದು ಎರಡೇ ದಾರಿ. ಇಂಗ್ಲಿಷಿನಿಂದ ಮಾತುಗಳನ್ನು ಉಂಡುಂಡೆಯಾಗಿ ತೆಗೆದುಕೊಳ್ಳುವುದು ಒಂದು; ಅಂಥ ಪದಗಳಿಗೆ ಸಮಪದಗಳನ್ನು ಸಂಸ್ಕೃತದಲ್ಲಿ ತಯಾರುಮಾಡಿಕೊಳ್ಳುವುದು ಇನ್ನೊಂದು. ವಾಸ್ತವವಾಗಿ ಎರಡು ರೀತಿಗಳೂ ನಮಗೆ ಅವಶ್ಯವಾಗುತ್ತವೆ. ಎಷ್ಟೋ ವೈಜ್ಞಾನಿಕ ಪದಗಳಿಗೆ ಸಂಸ್ಕೃತದಲ್ಲಿ ಕೂಡ ಸರಿಯಾದ ಸಮಪದಗಳು ರಚನೆಯಾಗುವುದು ಸಾಧ್ಯವಿಲ್ಲ. ಭಾಷೆಯೆಂಬುದು ಸಜೀವವಸ್ತುವಾದದ್ದರಿಂದ, ನಾವು ಅದರ ಸ್ವಭಾವವನ್ನು ತಿಳಿದುಕೊಂಡು ಅದರಿಂದ ಕೆಲಸ ತೆಗೆದುಕೊಳ್ಳಬೇಕಾಗಿದೆ. ಎಲ್ಲ ಭಾಷೆಗಳೂ ಎಲ್ಲ ಕೆಲಸಗಳನ್ನೂ ಒಂದೇ ರೀತಿ ಮಾಡಲಾರವು. ಸಂಸ್ಕೃತ ಮಾಡುವ ಎಷ್ಟೋ ಕೆಲಸಗಳನ್ನು ಮಾಡಲು ಇಂಗ್ಲಿಷಿಗೆ ಶಕ್ತಿಯಿಲ್ಲ. ಹಾಗೆಯೇ ಇಂಗ್ಲಿಷು ಮಾಡುತ್ತಿರುವ ಎಷ್ಟೋ ಕೆಲಸಗಳು ಸಂಸ್ಕೃತಕ್ಕೆ ಅಷ್ಟು ಸುಲಭವಲ್ಲ. ಆದದ್ದರಿಂದ ವಿಜ್ಞಾನಪರಿಭಾಷೆಗೆ ನಾವು ಇಂಗ್ಲಿಷನ್ನು ಪೂರ್ತಿಯಾಗಿ ವರ್ಜಿಸಲಾಗುವುದೆಂಬ ಅಭಿಪ್ರಾಯವನ್ನು ಬಿಟ್ಟುಬಿಡಬೇಕು.

ಆದರೆ ಇಂಗ್ಲಿಷ್ ಹಾಗೆ ತೀರಾ ಅನಿವಾರ್ಯವಾಗುವುದು ವಿಜ್ಞಾನಶಾಸ್ತ್ರದ ಮೇಲ್ಮಟ್ಟಗಳಲ್ಲಿ ಮಾತ್ರ. ಲ್ಯಾಟಿನ್, ಗ್ರೀಕ್, ಜರ್ಮನ್ ಮೊದಲಾದ ಐರೋಪ್ಯ ಭಾಷೆಗಳಿಂದ ನಾನಾ ದೇಶಗಳ ವಿಜ್ಞಾನಿಗಳು ಬಳಕೆಗೆ ತಂದು, ಆ ಮೂಲಕ ಇಂಗ್ಲಿಷ್ ಭಾಷೆ ಅಂಗೀಕರಿಸಿಕೊಂಡಿರುವ ಪಾರಿಭಾಷಿಕ ಶಬ್ದಗಳಿಂದಲೇ ನಮ್ಮ ಪ್ರೌಢ ವ್ಯಾಸಂಗಗಳು ತಮ್ಮ ವಿಜ್ಞಾನ ವ್ಯಾಸಂಗವನ್ನು ಸಾಗಿಸಬೇಕಾಗುತ್ತದೆ. ಆದರೆ ಪ್ರೌಢ ಪಂಡಿತರಿಗಲ್ಲದೆ ಸಾಮಾನ್ಯಜನಕ್ಕೆ ಉಪಯೋಗಪಡುವ ವಿಜ್ಞಾನಶಾಸ್ತ್ರಭಾಗ ಕೆಲವಿದ್ದೇ ಇರುತ್ತದೆ. ಈ ಭಾಗದಲ್ಲಿ ಬೇಕಾಗುವ ಹೊಸ ಪದಗಳನ್ನು ತಕ್ಕಮಟ್ಟಿಗೆ ಸಂಸ್ಕೃತದಿಂದ ರಚನೆಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಸಂಸ್ಕೃತದಿಂದ ತಯಾರಾಗಿ ಬಂದ ಪದಗಳು ಕನ್ನಡಕ್ಕೆ ಸುಲಭವಾಗಿ ಹೊಂದಿಕೊಳ್ಳುವುದು ಮಾತ್ರವಲ್ಲದೆ, ಸುಲಭ ಬೋಧನೆಗೂ ಸಹಾಯಕವಾಗುತ್ತವೆ. ಎಂದರೇನಾಯಿತು? ನಮ್ಮ ಜನಸಾಮಾನ್ಯದಲ್ಲಿ ವಿಜ್ಞಾನಶಾಸ್ತ್ರಜ್ಞಾನವೂ ಪ್ರಪಂಚದ ನೂತನಸಂದರ್ಭ ಪರಿಜ್ಞಾನವೂ ಹರಡಬೇಕಾದರೆ ನಮ್ಮ ಗ್ರಂಥಲೇಖನ ಪತ್ರಿಕಾಲೇಖನಗಳಲ್ಲಿ ಸಂಸ್ಕೃತ ಪದಗಳ ಪ್ರಯೋಗ ಹೆಚ್ಚುಹೆಚ್ಚಾಗುವುದು ಅನಿವಾರ್ಯವೆಂದಾಯಿತು; ಮತ್ತು ಸಂಸ್ಕೃತದ ಉಪಯೋಗ ಬರವಣಿಗೆಯಲ್ಲಿ ಹೆಚ್ಚಾದರೆ, ಅದು ಅರ್ಥವಾಗಲು ನಮ್ಮ ವಾಚಕರಲ್ಲಿಯೂ ಸಂಸ್ಕೃತದ ತಿಳಿವಳಿಕೆ ಹೆಚ್ಚಾಗಬೇಕು ಎಂದಾಯಿತು.

೨

ನಮ್ಮ ಜನರು ಸಂಸ್ಕೃತ ವ್ಯಾಸಂಗ ಮಾಡಬೇಕೆನ್ನಲು ಇನ್ನೊಂದು ಪ್ರಬಲ ಕಾರಣವೂ ಉಂಟು. ಕನ್ನಡ ಜನತೆಯ ಮನೋಧರ್ಮದ ಮೂಲಾಂಶಗಳೂ ಕನ್ನಡ ಭಾಷಾಮರ್ಯಾದೆಯ ಮೂಲಸೂತ್ರಗಳೂ ನಮಗೆ ದೊರೆಯುವುದು ಕನ್ನಡ ಸಾಹಿತ್ಯದಲ್ಲಿ. ಆ ಸಾಹಿತ್ಯದ ಪ್ರೌಢಗ್ರಂಥಗಳಾದರೋ ಸಂಸ್ಕೃತದಿಂದ ತುಂಬಿವೆ. ಪಂಪ ರನ್ನ ಷಡಕ್ಷರಿ ಲಕ್ಷ್ಮೀಶ ಮೊದಲಾದ ಪ್ರಸಿದ್ಧ ಕನ್ನಡ ಕವಿಗಳ ಕಾವ್ಯವು ನಮಗೆ ಚೆನ್ನಾಗಿ ಅರ್ಥವಾಗಬೇಕಾದರೆ ನಮ್ಮಲ್ಲಿ ಸಂಸ್ಕೃತಜ್ಞಾನ ಕೊಂಚಮಟ್ಟಿಗಾದರೂ ಆವಶ್ಯಕ. ಈ ದೃಷ್ಟಿಯಿಂದ ನೋಡಿದರೂ ಕನ್ನಡವನ್ನು ಚೆನ್ನಾಗಿ ಕಲಿಯಬೇಕೆನ್ನುವವನು ಸಂಸ್ಕೃತಕ್ಕೂ ಒಂದಿಷ್ಟು ಸೇವೆ ಮಾಡಬೇಕೆಂಬುದು ಸಿದ್ಧವಾಗುತ್ತದೆ.

ಅಖಿಲ ಭಾರತದ ದೃಷ್ಟಿಯಿಂದಲೂ ಹಿಂದೂಸಂಸ್ಕೃತಿಯ ದೃಷ್ಟಿಯಿಂದಲೂ ನೋಡಿದರೆ ಸಂಸ್ಕೃತದ ಬೆಲೆ ಮತ್ತೂ ದೊಡ್ಡದಾಗಿ ಕಾಣುತ್ತದೆ. ಯಾವ ಒಂದು ಜೀವನದರ್ಶನಕ್ಕಾಗಿ, ಯಾವ ಕಲೆ ಸಂಸ್ಕೃತಿಗಳಿಗಾಗಿ, ಯಾವ ಆಧ್ಯಾತ್ಮವಿಜ್ಞಾನಕ್ಕಾಗಿ ಪ್ರಪಂಚವು ಇಂಡಿಯಾದೇಶವನ್ನು ಗೌರವಿಸುತ್ತಿದೆಯೋ ಆ ಜ್ಞಾನಸಾಹಿತ್ಯವಿರುವುದು ಸಂಸ್ಕೃತದಲ್ಲಿ. ಭರತಖಂಡದ ಪೂರ್ವಚರಿತ್ರೆಯನ್ನು ತಿಳಿಯಬೇಕೆನ್ನುವವನೂ ಹಿಂದೂ ಧರ್ಮದ ಸ್ವಾರಸ್ಯವನ್ನು ಕಂಡುಕೊಳ್ಳಬೇಕೆನ್ನುವವನೂ ಕೃತಕೃತ್ಯನಾಗಲು ಸಂಸ್ಕೃತವನ್ನು ಬಿಟ್ಟರೆ ದಾರಿಯಿಲ್ಲದವನಾಗುತ್ತಾನೆ. ಹೀಗೆ ಕನ್ನಡಿಗರು ಸಂಸ್ಕೃತಕ್ಕೆ ಗಮನಕೊಡಬೇಕೆನ್ನಲು ಇತರ ಸ್ವತಂತ್ರ ಕಾರಣಗಳೂ ಇವೆ.

೩

ಆದರೆ ಸಂಸ್ಕೃತ ಕಷ್ಟ, ಅದರ ಹೊರೆಯನ್ನು ನಮ್ಮ ಜನದ ಸಾಮಾನ್ಯ ವರ್ಗಗಳ ವಿದ್ಯಾರ್ಥಿಗಳು ಹೊರಲು ಶಕ್ತರೆ? ಆ ಭಾರವನ್ನು ಸಾಧಾರಣ ವಿದ್ಯಾರ್ಥಿಗಳ ಮೇಲೆ ಹೇರಿದರೆ ಅದಕ್ಕಾಗಿ ಅವರು ಪಡುವ ಪ್ರಯಾಸದಲ್ಲಿ ಇತರ ಪಾಠಗಳ ಕಡೆಗೆ ಅವರ ಗಮನ ಕಡಮೆಯಾಗಿ, ಅವರ ವಿದ್ಯಾಭ್ಯಾಸ ಕುಂಠಿತವಾಗುವುದಿಲ್ಲವೆ ?—ಎಂದು ಯಾರಾದರೂ ಕೇಳಬಹುದು.

ಸಂಸ್ಕೃತ ಕಷ್ಟವೆಂಬುದು ಕೊಂಚಮಟ್ಟಿಗೆ ನಿಜ. ಆದರೆ ಅದು ಬೇಡವೆನ್ನುವವರು ಸಂಸ್ಕೃತ ಎಷ್ಟು ಕಷ್ಟವೆಂಬಂತೆ ಮಾತನಾಡುತ್ತಾರೋ ಅಷ್ಟು ಕಷ್ಟವೇನೂ ಅಲ್ಲ ಆ ಭಾಷೆ. ಹಾಗೆ ನೋಡಿದರೆ ಇಂಗ್ಲಿಷೂ ಕಷ್ಟವೇ ಅಲ್ಲವೆ? ಇಂಗ್ಲಿಷಿಗಾಗಿ ನಾವು ಸಹಿಸುವಷ್ಟು ಕಷ್ಟವನ್ನು ಸಂಸ್ಕೃತ

ಕ್ಕಾಗಿಯೂ ಸಹಿಸಲು ನಾವು ಸಿದ್ಧರಾಗಬೇಕು. ಅಲ್ಪ ಸ್ವಲ್ಪ ಕಷ್ಟಕ್ಕೆ ಸಿದ್ಧರಾಗಿರದವರಿಗೆ ಯಾವ ವಿದ್ಯೆಯೂ ವಶವಾಗಲಾರದು. ಯಾವಯಾವ ಜನವರ್ಗಗಳವರು ಸಂಸ್ಕೃತ ಕಷ್ಟವೆಂದು ಈಗ ತಿಳಿದುಕೊಂಡಿದ್ದಾರೋ ಅವರು ಮೊದಲು ಸಂಸ್ಕೃತ ತಮಗೆ ಅತ್ಯಂತಾವಶ್ಯವೆಂಬುದನ್ನು ಮನಸ್ಸಿಗೆ ತಂದುಕೊಂಡು, ತಾವು ಸಂಸ್ಕೃತವನ್ನು ಸಾಧಿಸಿಕೊಳ್ಳದೆ ಬಿಡುವುದಿಲ್ಲವೆಂದು ಪ್ರತಿಜ್ಞೆಮಾಡಿಕೊಳ್ಳಬೇಕು. ಅವರು ಹಾಗೆ ಮನಸ್ಸಿದ್ಧತೆಯನ್ನು ಮಾಡಿಕೊಂಡರೆ ಸಂಸ್ಕೃತ ಪಾಠಕ್ರಮವನ್ನು ಕೂಡಿದಷ್ಟು ಸುಲಭಮಾಡಿಕೊಡುವುದು ವಿದ್ಯಾಬೋಧಕರ ಕರ್ತವ್ಯವಾಗುತ್ತದೆ.

ಪ್ರಕೃತ ಲೇಖಕನ ಸಿದ್ಧಾಂತದ ಮಾತು ಇದು—

(೧) ಕನ್ನಡಿಗರಿಗೆ ಸಂಸ್ಕೃತವು ಅತಿ ಕಷ್ಟವಲ್ಲ. ಸ್ವಲ್ಪಕಷ್ಟವಾದರೂ ಅದು ಸಹ್ಯವಾದ ಕಷ್ಟ.

(೨) ಸಂಸ್ಕೃತವನ್ನು ಪಾಠಶಾಲೆಗಳ ಮೊದಮೊದಲನೆಯ ತರಗತಿಗಳಲ್ಲಿ ಅದೊಂದು ಪ್ರತ್ಯೇಕ ವಿಷಯವೆಂದು ಇಟ್ಟುಕೊಳ್ಳದೆ, ಅದನ್ನು ಕನ್ನಡ ಪಾಠದ ಒಂದು ಅಂತರ್ಭಾಗವೆಂದೇ ಎಣಿಸಬೇಕು.

(೩) ಮೊದಮೊದಲು—ಲೋಯರ್ ಸೆಕಂಡರಿಯ ವರೆಗೂ—ಸಂಸ್ಕೃತ ವ್ಯಾಕರಣ ಭಾಗಕ್ಕೆ ಹೆಚ್ಚು ಗಮನ ಕೊಡಬೇಕಾದದ್ದಿಲ್ಲ. ಕನ್ನಡ ಗದ್ಯ ಪದ್ಯ ಗ್ರಂಥಗಳಲ್ಲಿ ಬರುವ ಸಂಸ್ಕೃತ ಪದಗಳ ರೂಪ ಅರ್ಥಗಳನ್ನು ವಿವರಿಸಿ ಬೋಧಿಸುವುದರ ಮೂಲಕವೇ ವಿದ್ಯಾರ್ಥಿಗಳಿಗೆ ಸಂಸ್ಕೃತವನ್ನು ಪರಿಚಯ ಮಾಡಿಸಬಹುದು.

(೪) ಹೈಸ್ಕೂಲು ತರಗತಿಗಳಲ್ಲಿ ಕನ್ನಡದ ಜೊತೆಗೆ ಒಂದು ಅತಿ ಸುಲಭವಾದ ಸಂಸ್ಕೃತ ಗದ್ಯ-ಪದ್ಯ ಪುಸ್ತಕವನ್ನು ಪಾಠಕ್ಕಿರಿಸಿ, ಆ ಮೂಲಕ ವ್ಯಾಕರಣಾಂಶಗಳಲ್ಲಿ ಬಹು ಸಾಮಾನ್ಯವಾದ ಮತ್ತು ಸರಳವಾದ ಮೂಲಾಂಶಗಳನ್ನು ಹೇಳಿಕೊಡಬಹುದು. ಅದುವರೆಗೂ ಸಂಸ್ಕೃತ ವ್ಯಾಕರಣ ವಿಚಾರಗಳನ್ನು ಕನ್ನಡ ವ್ಯಾಕರಣದ ಮೂಲಕವೇ ತಿಳಿಯಪಡಿಸಬೇಕು.

ಈ ಮೇಲಿನ ಮಾತು ಸಂಸ್ಕೃತವನ್ನು ಐಚ್ಛಿಕ ವಿಷಯವನ್ನಾಗಿ ತೆಗೆದುಕೊಳ್ಳದಿರುವ ವಿದ್ಯಾರ್ಥಿಗಳಿಗೆ ಮಾತ್ರ ಅನ್ವಯಿಸತಕ್ಕದ್ದು. ಯಾರು ಲೋಯರ್ ಸೆಕಂಡರಿಗೆ ಹಿಂದೆಯೇ ಸಂಸ್ಕೃತವನ್ನು ಪ್ರತ್ಯೇಕ ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡು, ಕನ್ನಡದ ಅಥವಾ ಇತರ ದೇಶಭಾಷೆಯ ಜೊತೆಗೆ ಸಂಸ್ಕೃತವನ್ನೂ ಇಂಗ್ಲಿಷಿನಂತೆ ಒಂದು ಪ್ರತ್ಯೇಕ ವಿಷಯವನ್ನಾಗಿ ಇರಿಸಿಕೊಂಡು ವ್ಯಾಸಂಗಮಾಡಿರುತ್ತಾರೆಯೋ, ಅಂಥವರ ಸಂದರ್ಭಕ್ಕೆ ಈ

ಮೇಲಣ ವಿನಾಯತಿಯ ಏರ್ಪಾಟು ಅನಾವಶ್ಯಕವಾಗುತ್ತದೆ. ಅಂಥವರ ಸಂಖ್ಯೆ ಹೆಚ್ಚಾದಷ್ಟೂ ಒಳ್ಳೆಯದೇ.

೪

"ಸಂಸ್ಕೃತ ಕಷ್ಟ. ಅದು ನಮಗೆ ಬೇಡ"—ಎನ್ನುವ ಕನ್ನಡಿಗರು ಹಿಂದೂ ಜನ ಅಪರೂಪವಾಗಿರುವ ಆಫ್ಘಾನಿಸ್ಥಾನದ ಮೇಲ್ಪಂಕ್ತಿಯನ್ನು ನೋಡಬೇಕು.

ಆಫ್ಘಾನಿಸ್ಥಾನದಲ್ಲಿ ಸಂಸ್ಕೃತವನ್ನು ಸಾಮಾನ್ಯ ವಿದ್ಯಾಭ್ಯಾಸಕ್ರಮದಲ್ಲಿ ಒಂದು ನಿರ್ಬಂಧ ವಿಷಯವನ್ನಾಗಿ ಮಾಡಿದ್ದಾರಂತೆ. ಈಗ್ಗೆ ಸುಮಾರು ೧,೦೦೦ ವರ್ಷಗಳಿಂದ ಆಫ್ಘಾನಿಸ್ಥಾನವು ಮುಸಲ್ಮಾನರ ದೇಶ. ಅದಕ್ಕೆ ಹಿಂದೆ ಅಲ್ಲಿ ಬೌದ್ಧಮತ ಪ್ರಬಲಿಸಿತ್ತು. ಬುದ್ಧನ ಕಾಲಕ್ಕೂ ಪೂರ್ವದಲ್ಲಿ ಅದು ಆರ್ಯಾವರ್ತದ ಒಂದು ಪ್ರಾಂತವಾಗಿತ್ತೆಂದು ಹೇಳುತ್ತಾರೆ. ಈಗ ಆಫ್ಘಾನಿಸ್ಥಾನದ ಮುಖ್ಯ ಪಟ್ಟಣವಾದ ಕಾಬೂಲಿನಲ್ಲಿ ಒಂದು ವಿಶ್ವವಿದ್ಯಾನಿಲಯ (ಯೂನಿವರ್ಸಿಟಿ) ಇದೆ. ಅದರಲ್ಲಿ ಸಾಹಿತ್ಯ, ನ್ಯಾಯಶಾಸ್ತ್ರ (ಲಾ), ವಿಜ್ಞಾನ (ಸಯನ್ಸ್), ವೈದ್ಯ—ಈ ನಾಲ್ಕು ಮುಖ್ಯಪಾಠ ವಿಷಯಗಳು. ಇವುಗಳ ಪೈಕಿ ಸಾಹಿತ್ಯಭಾಗದಲ್ಲಿ ತತ್ತ್ವಶಾಸ್ತ್ರ, ಭಾಷಾಶಾಸ್ತ್ರ, ಮನಶ್ಶಾಸ್ತ್ರ, ಸಮಾಜಶಾಸ್ತ್ರ—ಇವೇ ಮೊದಲಾದ ಸಮಾಜ ವಿಜ್ಞಾನಶಾಸ್ತ್ರಗಳು ಮಾತ್ರವಲ್ಲದೆ, ಪುಷ್ಟು ಭಾಷೆ ಪರ್ಷಿಯನ್ ಭಾಷೆಗಳ ವ್ಯಾಸಂಗವೂ ಸೇರಿದೆ. ಪುಷ್ಟು ಭಾಷೆ ಆಫ್ಘನ್ ದೇಶದ ಜನಸಾಮಾನ್ಯದ ಭಾಷೆ.

ಅಲ್ಲಿಯ ಸರಕಾರವು ಪುಷ್ಟು ಭಾಷೆಗೆ ಸಂಸ್ಕೃತವು ಮಾತೃಪ್ರಾಯವಾದದ್ದೆಂಬುದನ್ನು ಅಂಗೀಕರಿಸಿದೆ; ಮತ್ತು ಪರ್ಷಿಯನ್ ಭಾಷೆಗೂ ಸಂಸ್ಕೃತಕ್ಕೂ ಏಕವಂಶೀಯತ್ವದ ಸಂಬಂಧವುಂಟೆಂದು ಅಂಗೀಕರಿಸಿ, ಸಂಸ್ಕೃತಕ್ಕೆ ಪಾಠಕ್ರಮದಲ್ಲಿ ಒಂದು ಅವಶ್ಯಸ್ಥಾನವನ್ನು ಕಲ್ಪಿಸಿದೆ. ವಾರವೊಂದಕ್ಕೆ ಮೂರು ವೇಳೆಗಳಂತೆ ಸಂಸ್ಕೃತದ ಪಾಠ ನಾಲ್ಕು ವರ್ಷ ನಡೆಯುತ್ತದೆ.

ಮೊದಲನೆಯ ವರ್ಷ ಸಂಸ್ಕೃತ ಲಿಪಿಯ ವಾಚನ ಲೇಖನಗಳು; ಸಂಸ್ಕೃತದ ಬಾಲವ್ಯಾಕರಣ ಮತ್ತು ಸುಲಭಪಾಠಗಳು—ಇವು ನಡೆಯುತ್ತವೆ.

ಎರಡನೆಯ ವರ್ಷದಲ್ಲಿ ಉಕ್ತಲೇಖನ, ಭಾಷಾಂತರೀಕರಣ, ಸಂಭಾಷಣೆ, ಲಘುವ್ಯಾಕರಣ—ಇವು ನಡೆಯುತ್ತವೆ. ಇವುಗಳ ಜೊತೆಗೆ ಭಗವದ್ಗೀತೆಯ ಮೊದಲನೆಯ ನಾಲ್ಕು ಅಧ್ಯಾಯಗಳು ಪಾಠವಾಗುತ್ತವೆ. ಅದರಲ್ಲಿ ಇಪ್ಪತ್ತೈದು ಶ್ಲೋಕಗಳನ್ನಾದರೂ ವಿದ್ಯಾರ್ಥಿ ಗಟ್ಟಿಮಾಡಲೇ ಬೇಕು. ಮುಸಲ್ಮಾನ್ ವಿದ್ಯಾರ್ಥಿಗಳು ಗೀತೆಯ ಶ್ಲೋಕಗಳನ್ನು ಆಸಕ್ತಿಯಿಂದ ಕಲಿತುಕೊಂಡು

ಅವುಗಳಿಗೆ ಸಮನಾದ ಸಂವಾದಿವಾಕ್ಯಗಳನ್ನು ತಮ್ಮ ಪವಿತ್ರಗ್ರಂಥವಾದ ಖುರಾನಿನಿಂದ ಉದಾಹರಿಸುತ್ತಾರಂತೆ.

ಮೂರನೆಯ ವರ್ಷದಲ್ಲಿ ಗೀತೆಯ ಇನ್ನಾರು ಅಧ್ಯಾಯಗಳು ಮತ್ತು ಸಂಸ್ಕೃತದ ಸಾಹಿತ್ಯಚರಿತ್ರೆ, ನಾಟಕ ಗ್ರಂಥಗಳು—ಇವು ಪಾಠವಾಗುತ್ತವೆ.

ನಾಲ್ಕನೆಯ ವರ್ಷದಲ್ಲಿ ಗೀತೆಯ ಮಿಕ್ಕ ಎಂಟು ಅಧ್ಯಾಯ, ಶಾಕುಂತಲ ಮೊದಲಾದ ಪ್ರೌಢ ನಾಟಕ ಗ್ರಂಥಗಳು, ಸಾಹಿತ್ಯಚರಿತ್ರೆ, ಅಲಂಕಾರಶಾಸ್ತ್ರ, ಷಡ್ದರ್ಶನಗಳು—ಇವುಗಳನ್ನು ಕುರಿತು ಉಪನ್ಯಾಸಗಳು ನಡೆಯುತ್ತವೆ.

ಕಾಬೂಲಿನ ವಿಶ್ವವಿದ್ಯಾನಿಲಯದಲ್ಲಿ ಒಂದು ಸಂಸ್ಕೃತಗ್ರಂಥಭಾಂಡಾರವನ್ನೂ ಇಟ್ಟಿದ್ದಾರೆ. ಹೀಗೆ ಮುಸಲ್ಮಾನ್ ರಾಜ್ಯವಾದ ಆಫ್ಘಾನಿಸ್ಥಾನದಲ್ಲಿ ಸಂಸ್ಕೃತ ತಲೆಯೆತ್ತುತ್ತಿದೆ. ಐರೋಪ್ಯ ಭಾಷೆಗಳಲ್ಲಿ ಇಂಗ್ಲಿಷು, ಜರ್ಮನ್, ಫ್ರೆಂಚ್—ಈ ಮೂರು ಭಾಷೆಗಳ ಪೈಕಿ ಯಾವುದಾದರೂ ಒಂದನ್ನು ಆಫ್ಘನ್ ವಿದ್ಯಾರ್ಥಿಗಳು ಕಲಿಯುತ್ತಾರೆ. ಆದರೆ ಅವರಲ್ಲಿ ಪ್ರತಿಯೊಬ್ಬನೂ ಕಲಿಯಲೇಬೇಕಾದ ಭಾಷೆಗಳು ಪುಷ್ಟು ಮತ್ತು ಪರ್ಷಿಯನ್ ;—ಈ ಎರಡೂ ಸಂಸ್ಕೃತದ ಸಂಬಂಧವುಳ್ಳವು. ಆಫ್ಘನ್ ವಿದ್ಯಾರ್ಥಿಗಳು ತಾವೂ "ಆರ್ಯ"ರೆಂದು ಹೇಳಿಕೊಳ್ಳಲು ಉತ್ಸಾಹವುಳ್ಳವರಾಗಿ, "ಆರ್ಯಾನ" ಎಂಬ ಮಾಸ ಪತ್ರಿಕೆಯನ್ನು ನಡಸುತ್ತಿದ್ದಾರಂತೆ.

ಈ ಸಂಗತಿಗಳನ್ನು ಡಾಕ್ಟರ್ ರಘುವೀರ ಎಂಬವರು ಪತ್ರಿಕೆಗಳಲ್ಲಿ (*Indian News Chronicle*, March 6, 1949) ಬರೆದಿದ್ದಾರೆ. ಅವರ ಸ್ನೇಹಿತರಾದ ಡಾ|| ಪರಮಾನಂದ ಬಾಹುಲ ಎಂಬವರೇ ಕಾಬೂಲ್ ವಿಶ್ವವಿದ್ಯಾಪೀಠದಲ್ಲಿ ಸಂಸ್ಕೃತದ ಮುಖ್ಯ ಅಧ್ಯಾಪಕರು.

ಈ ಮೇಲಣ ಸಂಗತಿಗಳಿಂದ ಹಿಂದೂ ಮಹಾಜನರು ಹೆಮ್ಮೆಪಟ್ಟಾರೆಂಬುದು ಸ್ವತಸ್ಸಿದ್ಧವಾಗಿದೆ. ಆದರೆ ಈ ಲೇಖನದ ಉದ್ದೇಶ ಹೆಮ್ಮೆಗೆ ಅವಕಾಶವನ್ನುಂಟುಮಾಡುವುದು ಮಾತ್ರವಲ್ಲ; ಜೊತೆಗೆ ಕಾಬೂಲು ನಮಗೆ ಹೇಗೆ ಮೇಲ್ಪಂಕ್ತಿಹಾಕಿಕೊಟ್ಟಿದೆ ಎಂಬುದನ್ನು ಕನ್ನಡ ಮಹಾಜನರಿಗೆ ಅರಿಕೆ ಮಾಡುವುದು. ಸಂಸ್ಕೃತಭಾಷೆ ಕನ್ನಡಕ್ಕೂ ಮಾತೃಪ್ರಾಯವಾದದ್ದಾಗಿದೆ. ಸಂಸ್ಕೃತಾಭ್ಯಾಸವು ಆಫ್ಘನರಿಗೆ ಎಷ್ಟು ಮಾತ್ರವೋ ಕನ್ನಡಿಗರಿಗೂ ಅಷ್ಟು ಮಾತ್ರ ವಿಹಿತವ್ಯಾಸಂಗವಾಗಿದೆ. ನಮ್ಮ ವಿದ್ಯಾಪ್ರಚಾರಪ್ರವೀಣರೂ ಶಾಸನ ಸಭೆಗಳಲ್ಲಿರುವ ಜನನಾಯಕರುಗಳೂ ಈ ತತ್ತ್ವದ ಸಂದರ್ಭವನ್ನು ಮನಸ್ಸಿಗೆ ತಂದುಕೊಂಡು, ನಮ್ಮ ವಿದ್ಯಾಬೋಧನ ಪದ್ಧತಿಯಲ್ಲಿ ತಕ್ಕ ಪರಿಷ್ಕಾರಗಳು ನಡೆಯುವಂತೆ ಮಾಡಬೇಕಾಗಿದೆ.

# ೧೨. ಕಾವ್ಯೋಪಾಸನೆ

## ಭಾಷೆಯ ಅದ್ಭುತ

ಜಗತ್ಸೃಷ್ಟಿಯಲ್ಲಿ ಭಾಷೆಯ ಶಕ್ತಿ ಒಂದು ಅದ್ಭುತ. ಆ ಶಕ್ತಿಯಲ್ಲಿ ಸಹಜಭಾಗಕ್ಕಿಂತ ಕವಿಗಳು ಅದಕ್ಕೆ ಸಂಪಾದಿಸಿಕೊಟ್ಟಿರುವ ಕೃತಕ ಭಾಗವು ಕಡಮೆಯಾದದ್ದೇನೂ ಅಲ್ಲ. ಭೂಗರ್ಭದೊಳಗಿನಿಂದ ಅಯಶ್ಶಿಲೆಯನ್ನೆತ್ತಿ ತೆಗೆದು, ಅದರಿಂದ ಕಬ್ಬಿಣ ಉಕ್ಕುಗಳನ್ನೂ ಕೊಡಲಿ ಸೂಜಿಗಳನ್ನೂ ನಿರ್ಮಿಸಿ ಕೊಂಡಿರುವುದು ಎಂಥ ಪೌರುಷಸಿದ್ಧಿಯೋ,—ನದೀವೇಗದಿಂದ ವಿದ್ಯುಚ್ಛಕ್ತಿ ಯನ್ನು ಹೊರಡಿಸಿ ಮನೆಗೆ ಬೆಳಕನ್ನೂ ಒಲೆಗೆ ಕಾವನ್ನೂ ತಂದುಕೊಂಡಿರು ವುದು ಎಂಥ ಪೌರುಷಾದ್ಭುತವೋ,—ಭಾಷೆಯನ್ನು ಕಾವ್ಯ ಶಾಸ್ತ್ರ ಪ್ರಬಂಧ ರೂಪಗಳಿಗೆ ತಿರುಗಿಸಿ ಮನೋಬುದ್ಧಿಗಳ ವಿಕಾಸಕ್ಕೂ ಜೀವನೋನ್ನತಿಗೂ ಸಾಧನೆಗಳನ್ನೊದಗಿಸಿಕೊಂಡಿರುವುದು ಅಂಥಾ ಪೌರುಷ ವಿಜೃಂಭಿತ. ಇದನ್ನು ಭಾಷಾವ್ಯವಹಾರಿಗಳೆಲ್ಲ—ವಾಚಕರೂ ಲೇಖಕರೂ ಸಹ—ಸಂತತವಾಗಿ ದೃಷ್ಟಿ ಯಲ್ಲಿಟ್ಟುಕೊಂಡಿರಬೇಕು. ಭಾಷೆ ಎಂಥ ಮಹಾಸತ್ತ್ವ, ಅದನ್ನುಪಯೋಗಿ ಸುವ ಅವಕಾಶ ಎಂಥಾ ಪವಿತ್ರ ಸಂದರ್ಭ, ಉಪಯೋಗಿಸುವವರ ಉತ್ತರ ಭಾರ (ಜವಾಬ್ದಾರಿ) ಎಷ್ಟು ದೊಡ್ಡದು ಎಂಬ ಮೂರಂಶಗಳನ್ನು ಕಂಡು ಕೊಳ್ಳದವರು ಸರಸ್ವತೀಸೇವೆಗೆ ಅರ್ಹರಾಗರು. ಅವರಿಗೆ ಪ್ರಸಾದ ದೊರೆಯ ಲಾರದು. ವಾಲ್ಮೀಕಿಯು ತನ್ನ ಉತ್ತಮ ಪಾತ್ರಗಳನ್ನು ನಮಗೆ ಪರಿಚಯ ಮಾಡಿಸುವಲ್ಲಿ 'ವಾಕ್ಯಜ್ಞಃ', 'ವಾಗ್ವಿದಾಂ ವರಃ', 'ವಾಕ್ಯವಿಶಾರದಃ', 'ವಾಕ್ಯಕೋವಿದಃ',— ಇಂಥ ಮಾತುಗಳನ್ನು ಪ್ರಯೋಗಿಸಿದ್ದಾನೆ. ವ್ಯಾಸನೂ ಹಾಗೆ ವಾಗ್ವಿಶಾರದರನ್ನು ಪ್ರಶಂಸಿಸಿದ್ದಾನೆ. ಅದರ ಅಂತ ರ್ಭಾವವು ನಮಗೆ ಅನುಚಿಂತನೀಯವಾಗಿದೆ.

## ವಿಚಾರದ ಅಪಾಯಾಹ್ವಾನ

ಪದ್ಯ ಹೆಣೆಯುವ ಚಾಳಿಯುಳ್ಳವನು ಕಾವ್ಯತತ್ತ್ವಜಿಜ್ಞಾಸೆಗೆ ಬಾಯಿ ಹಾಕುವುದು ತನ್ನ ಮನೆಗೆ ತಾನೇ ಮಾರಿಯನ್ನು ಕರೆದಂತೆ. ಅವನು ಮಾಡಿದ ಸಿದ್ಧಾಂತವನ್ನು ಅವನು ಕಟ್ಟಿದ ಕಾವ್ಯವಾದರೂ ಸಮರ್ಥಿಸು ತ್ತದೆಯೆ? ಅದೇ ಹಾಗೆ ಮಾಡದೆಹೋದಲ್ಲಿ ಆ ಸಿದ್ಧಾಂತಕ್ಕೆ ಬೆಲೆಯೇನು? ಅಥವಾ ಆ ಸಿದ್ಧಾಂತವೇ ಯುಕ್ತವೆಂದು ಲೋಕ ಒಪ್ಪಿಕೊಂಡ ಪಕ್ಷದಲ್ಲಿ,

ಅದಕ್ಕೆ ಹೊಂದದ ಅವನ ಆ ಕಾವ್ಯಕ್ಕೆ ಸಲ್ಲುವ ಬೆಲೆಯೇನು? ಅವನ ಸಿದ್ಧಾಂತ ದೃಷ್ಟಾಂತಗಳೆರಡನ್ನೂ ಲೋಕ ನಿರಾಕರಿಸುವುದೂ ಅಸಂಭವವಲ್ಲ. ಹೀಗೆ ಎಲ್ಲ ಪಕ್ಷಗಳಲ್ಲಿಯೂ ಅಪಾಯವಿದ್ದರೂ ಅವನ ಸಾಹಸದಲ್ಲಿ ಒಂದು ಗುಣವಿರಬಹುದು. ಕಾವ್ಯರಚನೆ, ತತ್ತ್ವವಿಮರ್ಶನೆ—ಈ ಎರಡು ಕೆಲಸಗಳನ್ನೂ ಅವನು ಕೇವಲ ಪರೀಕ್ಷಾಪ್ರಯೋಗವೆಂದು ನಡಸುವುದಾದರೆ ಆಗ ಅದರಿಂದ ಅವನಿಗೆ ಅಷ್ಟಿಷ್ಟು ಪ್ರಯೋಜನವಾದರೂ ಆಗಬಹುದು. ಉಭಯ ಮಾರ್ಗಗಳಲ್ಲಿಯೂ ಅನ್ವೇಷಿಯಾಗಿ ಹೊರಟಿರುವವನಿಗೆ ಒಂದು ಮಾರ್ಗದಲ್ಲಿ ಬಂದ ಅನುಭವಜ್ಞಾನಗಳು ಇನ್ನೊಂದು ಮಾರ್ಗದ ಪ್ರಯಾಣಕ್ಕೆ ಸಹಾಯವಾಗಬಹುದು. ಹೀಗೆ ಅವೆರಡು ಪ್ರವೃತ್ತಿಗಳೂ ಪರಸ್ಪರೋಪಕಾರಿಗಳಾದಾವು. ಅದೂ ಒಂದು ತೆರದ ಉಭಯಪರಿಷ್ಕರಣೋಪಾಯ.

## ರಹಸ್ಯ

ಕಾವ್ಯಕ್ರಿಯೆ ಒಂದು ರಹಸ್ಯ. ಈ ಮಾತನ್ನು ನಾನು ಪದೇ ಪದೇ ಹೇಳುತ್ತಿದ್ದೇನೆ. ರಹಸ್ಯವೆಂದರೆ ಭೇದಿಸಲಾಗದ್ದು. ಆದರೂ ಕಾವ್ಯರಹಸ್ಯವನ್ನು ಕುರಿತು ನಾನು ಊಹಾಪೋಹ (ಸ್ಪೆಕ್ಯುಲೇಟ್) ಮಾಡುತ್ತಲೇ ಇದ್ದೇನೆ.* ಹಿಂದೆ ಸಾವಿರ ಮಂದಿ ಮಾಡಿರುವ ಕೆಲಸ ಅದು. ನನ್ನೊಡನೆಯಾದರೂ ಅದು ಮುಗಿದೀತೆಂಬ ಭರವಸೆಯ ಮುನ್ನೆರಳು ಕೂಡ ನನಗೆ ದೂರದಲ್ಲಿಯೂ ಕಾಣಬಂದಿಲ್ಲ. ಆ ಕೆಲಸ ಇನ್ನೂ ಚಿರಕಾಲ ನಡೆಯುತ್ತಲೇ ಇದ್ದೀತೆಂದು ತೋರುತ್ತದೆ. ಹಾಗೆ ತೋರಿದ ಮೇಲೂ ಈ ರಹಸ್ಯಭೇದನೆಯ ಪುನಃಪ್ರಯತ್ನವೇಕೆ? ಅದೂ ಒಂದು ರಹಸ್ಯ.

ಮಗುವಿನ ಕೈಗೆ ಗಡಿಯಾರವನ್ನು ಕೊಟ್ಟರೆ ಅದು ಆ ಯಂತ್ರವನ್ನು ಕಚ್ಚುತ್ತದೆ, ಕುಟ್ಟುತ್ತದೆ, ಒಡೆಯುತ್ತದೆ, ಚಚ್ಚಬೇಕೆನ್ನುತ್ತದೆ; ಮಾತು ಬಂದಿದ್ದರಂತೂ ಏನೇನೋ ಪ್ರಶ್ನೆ ಹಾಕುತ್ತದೆ. ಆ ಮಗುವನ್ನು ಹಾಗೆ ಆಡಿಸುವ ಅದರ ಅಂತಃಪ್ರೇರಣೆಯೇ ಒಂದು ರಹಸ್ಯ. ಅದರ ಬುದ್ಧಿಗೆ ಪ್ರಶ್ನೆ ಏಕೆ ತೋರಬೇಕು? ಪ್ರಶ್ನೆ ತೋರಿದರೂ ಬುದ್ಧಿ ಏಕೆ ಕೆರಳಬೇಕು? ಹೊರಲೋಕಕ್ಕೂ ಒಳಬುದ್ಧಿಗೂ ನಡುವೆ ಪರಸ್ಪರ ಆಗುತ್ತಿರುವ ಕೆಣಕು ಸೆಣಸುಗಳು ಒಂದು ಸ್ವಾಭಾವಿಕ ಸಂಗತಿ. ಅದೇ ಒಂದು ಪ್ರಕೃತಿಕಾರ್ಯ ರಹಸ್ಯ. ಆ ಚೋದನೆ ಪ್ರತಿವರ್ತನೆಗಳಿಂದಲೇ ಮಾನವಪ್ರಗತಿ. ಅದರ ಒಂದಂಶ ಸಾಹಿತ್ಯ.

---

* "ಜೀವನಸೌಂದರ್ಯ ಮತ್ತು ಸಾಹಿತ್ಯ" ಎಂಬ ಗ್ರಂಥವನ್ನೂ ಪ್ರಕೃತ ಪುಸ್ತಕದಲ್ಲಿಯ ಇತರ ಉಪನ್ಯಾಸಗಳನ್ನೂ ನೋಡಿರಿ.

## ವಿಚಾರ ಫಲಿತ

ಕಾವ್ಯವು ಮನುಷ್ಯಕಾರ್ಯ. ಆದರೂ ಅದು ರಹಸ್ಯ. ಏಕೆಂದರೆ ಮನುಷ್ಯನೇ ಒಂದು ರಹಸ್ಯ. ತನ್ನ ಅಂತಃಪ್ರವೃತ್ತಿಗಳನ್ನೆಲ್ಲ ತಾನೇ ಬುಡಮಟ್ಟ ತಿಳಿದುಕೊಂಡ ಮನುಷ್ಯ ಎಲ್ಲಿದ್ದಾನೆ? ಸ್ವಪ್ರವೃತ್ತಿಗಳು ಅಷ್ಟಿಷ್ಟು ತಿಳಿದಿದ್ದರೂ ಅವುಗಳ ಮೂಲಕಾರಣ ಸಂಬಂಧಗಳನ್ನು ತಿಳಿದವನು ಯಾರಿದ್ದಾನೆ? ಮನುಷ್ಯನ ಸ್ವಭಾವದಲ್ಲಿ ಕಾರ್ಯಕಾರಣ ಸಂಬಂಧ ವಿಚಾರಣೆಗೆ ದೊರಕದ ಅಂಶಗಳು ಲೆಕ್ಕವಿಲ್ಲದಷ್ಟಿರುತ್ತವೆ. ಮನಸ್ಸೊಂದು ಗುಹೆ; ಅದರ ತುಂಬ ಭೂತಗಳು. ಅವುಗಳನ್ನು ಪ್ರಕೃತಿಬೀಜವೆನ್ನುತ್ತೇವೆ; ಅದೃಷ್ಟವೆನ್ನುತ್ತೇವೆ. ಪ್ರಕೃತಿಯೋ, ದೈವವೋ, ಅದೃಷ್ಟವೋ, ನಮ್ಮ ಪರೀಕ್ಷೆ ಪರಾಮರ್ಶೆಗಳಿಗೆ ಸಿಕ್ಕದೆ ಬಚ್ಚಿಟ್ಟುಕೊಂಡಿರುವ ಸಂಗತಿ ರಹಸ್ಯ. ಮನುಷ್ಯನ ಸ್ವಭಾವದಲ್ಲಿ ಇಂಥಾ ರಹಸ್ಯಗಳು ಇರುವಷ್ಟರಮಟ್ಟಿಗೆ ಅವನ ರಚನೆಗಳೂ—ಆ ರಚನೆಗಳಲ್ಲೊಂದಾದ ಕಾವ್ಯವೂ—ರಹಸ್ಯ.

ಪ್ರತಿಯೊಬ್ಬ ಮನುಷ್ಯನಿಗೂ ಒಂದು ವ್ಯಕ್ತಿವೈಶಿಷ್ಟ್ಯವಿರುತ್ತದೆ. ಅದು ರಹಸ್ಯ. ಕವಿ ಅಸಾಧಾರಣ ಮನುಷ್ಯ; ಆದದ್ದರಿಂದ ಅವನದು ಅಸಾಧಾರಣ ವ್ಯಕ್ತಿತ್ವ. ಅದು ಅಂತರ್ಮುಖವ್ಯಕ್ತಿತ್ವ. ಆ ವ್ಯಕ್ತಿವೈಶಿಷ್ಟ್ಯದ ಬಹಿಃಪ್ರಾಕಟ್ಯವೇ ಕಾವ್ಯ. ವೈಯಕ್ತಿಕ ಪ್ರತಿಭೆಯ ಬೇರಿಲ್ಲದೆ ನಿಜವಾದ ಕಾವ್ಯಲತೆಯಿಲ್ಲ. ಆ ವ್ಯಕ್ತಿಪ್ರತಿಭೆ ರಹಸ್ಯವಸ್ತು. ಅದು ರಹಸ್ಯವೆಂದು ಗೊತ್ತಾದ ಮೇಲೆ ನಾವು ಇನ್ನೂ ಅದನ್ನು ಹಿಡಿದು ಹಿಸುಕಬೇಕೆನ್ನುವುದೇತಕ್ಕೆ? ಅದು ನಮ್ಮ ವಶಕ್ಕೆ ಬಂದಷ್ಟು ಬರಲಿ—ಎಂಬುದು ಒಂದು ಯೋಚನೆ; ಆ ಪ್ರಯತ್ನದಲ್ಲಿ ನಮ್ಮ ಅನ್ವೇಷಣಶಕ್ತಿ ಇನ್ನೂ ಪರಿಣತವಾದೀತೆಂಬುದು ಎರಡನೆಯ ಯೋಚನೆ. ಪ್ರಕೃತಿವಿಜ್ಞಾನದಲ್ಲಿ—ಫಿಸಿಕ್ಸ್ (ಭೌತವಿಜ್ಞಾನ), ಕೆಮಿಸ್ಟ್ರಿ (ರಸಾಯನ ವಿಜ್ಞಾನ), ಬಾಟನಿ (ಸಸ್ಯವಿಜ್ಞಾನ), ಜಿಯಾಲಜಿ (ಭೂಗರ್ಭವಿಜ್ಞಾನ), ಝೂಆಲಜಿ (ಪ್ರಾಣಿವಿಜ್ಞಾನ)—ಇವೇ ಮೊದಲಾದ ಸೃಷ್ಟಿಸಿದ್ಧವಸ್ತುಗಳ ರಚನೆ ರೀತಿಗಳನ್ನು ಕುರಿತ ನಾನಾ ಶಾಸ್ತ್ರಗಳಲ್ಲಿ—ಕಟ್ಟಕಡೆಯ ತತ್ತ್ವಸಿದ್ಧಾಂತವೆಂಬುದು ದೊರೆತಿಲ್ಲವೆಂದೂ, ಅದು ದೊರಕುವುದೆಂಬ ನಿಶ್ಚಯವಿಲ್ಲವೆಂದೂ, ಆದರೂ ಅಲ್ಲಿ ಸಿದ್ಧಾಂತಕ್ಕಿಂತ ಸಂವಿಧಾನವೇ ನಮಗೆ ಮುಖ್ಯವೆಂದೂ ಹೇಳುವುದುಂಟು. ಎಲ್ಲ ಬಗೆಯ ತತ್ತ್ವಾನ್ವೇಷಣೆಗೂ ಆ ಮಾತು ಅನ್ವಯಿಸುತ್ತದೆ. ಕಾವ್ಯಮೀಮಾಂಸೆಯಲ್ಲಿ ನಮಗೆ ರಹಸ್ಯಾಂಶ ಕೈವಶವಾಗದಿದ್ದರೂ ಕವಿಯ ಕಾರ್ಯತಂತ್ರ (ಟೆಕ್ನೀಕ್)

ಅಷ್ಟಿಷ್ಟು ಕಣ್ಣಿಗೆ ಬೀಳುತ್ತದೆ. ಅದೇ ಒಂದು ಲಾಭ. ಬ್ರಾಹ್ಮಣ ವರ್ಣಸ್ಥ ರಲ್ಲಿ ಅರುಂಧತೀದರ್ಶನವೆಂಬ ಒಂದು ಸಂಪ್ರದಾಯವುಂಟು. ಮದುವೆ ಯಾದ ದಿನ ಸಾಯಂಕಾಲ ಪುರೋಹಿತರು ವಧೂವರರಿಂದ ಅರುಂಧತೀ ವಸಿಷ್ಠರ ಪೂಜೆ ಮಾಡಿಸುತ್ತಾರೆ. ವಸಿಷ್ಠನು ಸಪ್ತರ್ಷಿಗಳಲ್ಲಿ ಒಬ್ಬಾತ; ಅರುಂಧತಿ ಆತನ ಪತ್ನಿ, ಪಾತಿವ್ರತ್ಯಕ್ಕೆ ಆದರ್ಶಭೂತಳು. ಅವರಿಬ್ಬರೂ ನಕ್ಷತ್ರರೂಪದಲ್ಲಿ ಆಕಾಶದಲ್ಲಿರುತ್ತಾರೆ–ಅಕ್ಕಪಕ್ಕದಲ್ಲಿ. ಅತಿಸೂಕ್ಷ್ಮವಾದದ್ದು ಅರುಂಧತೀ ನಕ್ಷತ್ರ. ಪುರೋಹಿತರು ವಧೂವರರಿಗೆ ಆ ಸಣ್ಣ ನಕ್ಷತ್ರವನ್ನು ತೋರಿಸಬೇಕೆಂದು, ಅವರನ್ನು ಮದುವೆಯ ಚಪ್ಪರದಿಂದ ಹೊರಕ್ಕೆ ಕರೆದು ಕೊಂಡು ಬಂದು, ಉತ್ತರದಿಕ್ಕಿಗೆ ಮುಖ ಮಾಡಿ ನಿಲ್ಲಿಸಿ, ಮೊದಲು ಸಪ್ತರ್ಷಿ ಮಂಡಲವನ್ನು ಗುರುತುಮಾಡಿಕೊಡುತ್ತಾರೆ. ಆಮೇಲೆ ಅದರಲ್ಲಿ ವಸಿಷ್ಠ ನಕ್ಷತ್ರವನ್ನು ಗೊತ್ತುಹೇಳುತ್ತಾರೆ. ಅದು ತಿಳಿಯಿತೆಂದ ಬಳಿಕ ಅದರ ಪಕ್ಕ ದಲ್ಲಿ ನಟ್ಟಗಣ್ಣಿಂದ ನೋಡೆನ್ನುತ್ತಾರೆ. ಕಣ್ಣು ಎಷ್ಟು ನಟ್ಟರೂ ಎಷ್ಟು ಹುಡುಕಿದರೂ ಅರುಂಧತೀ ದರ್ಶನವಾಗುವುದು ಖಾತರಿಯ ಮಾತಲ್ಲ. ಬಹು ಸೂಕ್ಷ್ಮವಾದ ನೇತ್ರಪಾಟವವೂ ಬಹುತಾಳ್ಮೆಯೂ ಇರುವವರಿಗೆ ಮಾತ್ರ ಆ ದರ್ಶನ ಸಾಧ್ಯ. ಆ ನೇತ್ರಶಕ್ತಿಯೂ ಅಷ್ಟು ತಾಳ್ಮೆಯೂ ಇಲ್ಲದವರಿಗೆ ಅರುಂಧತೀ ದರ್ಶನವು ಬರಿಯ ಬಾಯಿಮಾತು. ಆದರೆ ಇಂಥವರು ಪಡುವ ಪ್ರಯಾಸವು ತೀರಾ ನಿಷ್ಫಲವಲ್ಲ. ಅವರಿಗೆ ಸಪ್ತರ್ಷಿಪರಿಚಯವಂತೂ ಆಗು ತ್ತದೆ. ಅದು ಕೊಂಚದ ಲಾಭವಲ್ಲ. ಕಣ್ಣಿಗೆ ಕೊಂಚ ವ್ಯಾಯಾಮವಾಗುತ್ತದೆ. ಅದೂ ಒಳ್ಳೆಯದೇ. ಸ್ವಲ್ಪಕಾಲದ ಅಭ್ಯಾಸದಿಂದ ದೃಷ್ಟಿಯು ಸೂಕ್ಷ್ಮವಾಗಿ ಆಮೇಲೆ ಅವರು ಅರುಂಧತಿಯನ್ನು ಕಾಣಲಾಗಬಹುದು. ಎಲ್ಲ ರಹಸ್ಯಾ ನ್ವೇಷಣೆಯ ಲಾಭಾಲಾಭಗಳ ಲೆಕ್ಕವೂ ಈ ತೀರಿನದೇ. ಮಾವಿನಕಾಯನ್ನು ಉದುರಿಸಲು ಹೊಡೆದ ಕಲ್ಲಿನ ಹಾಗೆ; ಗುರಿಯಿಟ್ಟ ಕಾಯಿ ಒಂದು, ನೆಲಕ್ಕೆ ಬಿದ್ದದ್ದಿನ್ನೊಂದು. ಅಥವಾ ಕೊಲಂಬಸ್ಸು ಇಂಡಿಯವನ್ನು ಕಂಡುಹಿಡಿಯ ಹೊರಟು ಅಮೆರಿಕವನ್ನು ಕಂಡಹಾಗೆ. ಅದು ಅನುದ್ದಿಷ್ಟ ಲಾಭ,—ಅಂತೂ ಲಾಭವೇ. ಈ ಲಾಭದ ಜೊತೆಗೆ ಇನ್ನೂ ಒಂದುಂಟು. ಕವಿಯ ಕಾರ್ಯ ತಂತ್ರದ ಅಂತಸ್ಸ್ವರೂಪವನ್ನು ನಾವು ಕಂಡುಕೊಂಡಷ್ಟೂ ಕಾವ್ಯಸ್ವಾರಸ್ಯದ ಗ್ರಹಿಕೆ ನಮಗೆ ಸುಲಭವೂ ವಿಶದವೂ ಆಗುತ್ತದೆ.

ಕಾವ್ಯತತ್ತ್ವ ವಿಚಾರದ ಗ್ರಂಥಗಳ ಮುಖ್ಯ ಪ್ರಯೋಜನ ಕವಿಗಾಗು ವುದಕ್ಕಿಂತ ಹೆಚ್ಚಾಗಿ ಕಾವ್ಯವಾಚಕನಿಗೆ. ಕವಿಯಾದವರೆಲ್ಲರೂ ಆ ಲಕ್ಷಣ ಗ್ರಂಥಗಳನ್ನೋದಿಯೇ ತಮ್ಮ ಕೆಲಸಕ್ಕೆ ಕೈಹಚ್ಚಿರುತ್ತಾರೆನ್ನಲು ಆಧಾರ

ವಿಲ್ಲ. ಕಾಳಿದಾಸ ಭವಭೂತಿಗಳು ಲಕ್ಷಣಗ್ರಂಥಗಳನ್ನು ನೋಡಿದ್ದಿರಬಹುದು. ವಾಲ್ಮೀಕಿ ವ್ಯಾಸರುಗಳ ವಿಷಯದಲ್ಲಿ ಆ ಮಾತು ಹೇಳುವುದು ಸಾಹಸ. ವೇದದಲ್ಲಿ ಕವಿವಾಕ್ಕು ಅಪಾರವಾಗಿದೆ. ಆ ಋಷಿಕವಿಗಳು ಅಲಂಕಾರಶಾಸ್ತ್ರ ವ್ಯಾಸಂಗಮಾಡಿದ ಮೇಲೆ ಮಂತ್ರ ಬರೆಯಹೊರಟರೆಂಬುದು ಅತಿಸಾಹಸ. ಗೋವಿನ ಕಥೆ ಬರೆದಾತನೂ ಕನಕದಾಸನೂ ಉತ್ತಮ ಕವಿತೆಗೆ ಆದರ್ಶ ಪ್ರಾಯರು. ಅವರು ಲಕ್ಷಣಶಾಸ್ತ್ರ ಶಿಕ್ಷಿತರೆಂದು ಹೇಳುವುದು ಕಷ್ಟ. ಕಾವ್ಯ ರಚನೆ ಹೇಗೋ ಆಗುತ್ತದೆ—ಒಂದು ಅಂತಶ್ಶಕ್ತಿವಿಶೇಷದಿಂದ. ಆದರೆ ಕವಿಯ ಕೈವಾಡವೆಂಥಾದ್ದೆಂಬುದು ಸಮಗೆ ಅಷ್ಟಿಷ್ಟಾದರೂ ತಿಳಿದುಬರಬೇಕಾದರೆ ಅವನ ಕಾರಖಾನೆಯ ಯಂತ್ರರಚನೆಯನ್ನು ನಾವು ಆದಷ್ಟು ಮಟ್ಟಿಗೆ ತಿಳಿದುಕೊಳ್ಳುವುದು ಸಹಕಾರಿ.

## ಅನೇಕ ರಸಪಾಕದಿಂದ ಒಂದು ಅಧಿರಸ

ಕಾವ್ಯಕರ್ಮವು,—ಕವಿಯ ಮಾನಸಿಕಕಲ್ಪನೆಯ ಕಾರ್ಯ ಮುಗಿದು, ಅನಂತರ ಅದನ್ನು ಅವನು ವ್ಯಕ್ತಗೊಳಿಸುವ ಸಮಯದಲ್ಲಿ,—ಶಬ್ದಾರ್ಥ ಪ್ರಪಂಚದ ನಾನಾ ಧಾತುಗಳ ಸಮ್ಮಿಳಿತಪಾಕ. ನಮ್ಮ ನಿತ್ಯಜೀವನದ ಬಹಿರಿಂದ್ರಿಯಪ್ರಪಂಚದಲ್ಲಿ ಭೋಜ್ಯ ಔಷಧ ಪರಿಮಳ ಲೇಪನಾದಿ ವಸ್ತುಗಳ ರಚನೆ ಹೇಗೆ ಒಂದು ಭೌತ-ರಾಸಾಯನಿಕ (ಫಿಸಿಕೊ-ಕೆಮಿಕಲ್) ವ್ಯಾಪಾರವೋ, ನಮ್ಮ ಅಂತರಿಂದ್ರಿಯ ಪ್ರಪಂಚದಲ್ಲಿ ಕಾವ್ಯಕರ್ಮ ಹಾಗೆ ಒಂದು ಸೂಕ್ಷ್ಮತರವಾದ ಭೌತ-ರಾಸಾಯನಿಕ ಸಂಘಟನೆ. ಪೂರ್ವಿಕರು ಕವಿಯ ಕಾರ್ಯವನ್ನು "ಪಾಕ" ಎಂದು ಕರೆದಿರುವುದು ಬಹು ಉಚಿತ ವಾಗಿದೆ,—ದ್ರಾಕ್ಷಾಪಾಕ, ನಾರಿಕೇಳಪಾಕ ಎಂಬಂತೆ. ಅದು ಅನೇಕ ಸಾರ ಗಳನ್ನು ಏಕಸಾರವಾಗಿ ಭಟ್ಟಿಯಿಳಿಸುವ ವಿಧಾನ. ಆ ಸಾರವನ್ನು ನಾವು ಸವಿಯುತ್ತ ಸವಿಯುತ್ತ ಅದರ ಮೋಹಕ್ಕೆ ವಶರಾಗಿ, ಮನಸಾ ಬೇರೊಂದು ಲೋಕಕ್ಕೆ ತೆರಳಿ, ಅಲ್ಲಿಯ ಅದ್ಭುತ ಸುಂದರ ಚಿತ್ರಜೀವಿಗಳಲ್ಲಿ ಒಂದಾಗಿ ಬೆರೆಯುತ್ತೇವೆ—ದಿವ್ಯಭ್ರಾಂತಿಪರವಶರಾಗುತ್ತೇವೆ, ಆ ಪಾಕಸಂವಿಧಾನವೂ ಕವಿಯ ವ್ಯಕ್ತಿಪ್ರತಿಭೆಯ ಕ್ರಿಯಾವಿಶೇಷ.

ಹಾಗೆ ಭಟ್ಟಿಯಿಳಿಯದೆ ಹೋದಲ್ಲಿ,—ಕ್ಷಣಮಾತ್ರಕ್ಕಾದರೂ ಆ ದಿವ್ಯ ಮಾಯಾವರಣಕಾರಕವಾದ ಪಾಕಸಂಸಿದ್ಧಿಯಿಲ್ಲದಿದ್ದಲ್ಲಿ—ಕವಿ ಕೃತಕೃತ್ಯ ನಾಗಿಲ್ಲ. ಅಡುಗೆಯೆಂದರೆ ಬೇಯಿಸುವುದು ಮಾತ್ರವಲ್ಲ; ಬಸಿಯುವುದು ಮಾತ್ರವಲ್ಲ; ತೊಳಸುವುದೊಂದಲ್ಲ; ಕೆದಕುವುದೊಂದಲ್ಲ; ಈ ಎಲ್ಲ ಕೆಲಸಗಳ

ಒಟ್ಟುಹದ ಅದು. ಅದು ಬರಿಯ ಉಪ್ಪಲ್ಲ, ಹುಳಿಯಲ್ಲ; ಬರಿಯ ಬೆಲ್ಲವಲ್ಲ, ಮೆಣಸಲ್ಲ; ಬರಿಯ ತುಪ್ಪವಲ್ಲ, ಸಾಸಿವೆಯಲ್ಲ; ಅದು ಈ ನಾನಾ ರುಚಿಗಳ ಹೊಂದಿಕೆ. ನಾಲಗೆ, ಹಲ್ಲು, ಮೂಗು, ಕಣ್ಣು, ಜೀರ್ಣಕೋಶ,—ಈ ಅನೇಕಾಂಗಗಳಿಗೆ ಹಿತವಾಗಬೇಕಾದದ್ದು ಪಾಕ. ಹಾಗೆ ಧಾತು ರುಚಿ ಗುಣ ಗಳ ಅನೇಕತೆಯಲ್ಲಿ ಒಂದು ಸಮ್ಮೇಳನೈಕ್ಯವನ್ನುಂಟಾಗಿಸುವುದು ಪಾಕ ಪ್ರಾವೀಣ್ಯ. ನಾನಾ ಸಾಮಗ್ರಿಗಳ ಒಂದು ಪರಸ್ಪರ ಪರಿಮಾಣ, ಒಂದು ಪರಿಪಕ್ವದಶೆ,—ಅದರಿಂದ ಒಂದು ರುಚಿವೈವಿಧ್ಯದ ಸಮವಾಯರುಚಿ,—ಒಂದು ಬಹುರಸ ಸಾಮರಸ್ಯದ ಅಧಿರಸ,—ಇದೇ ಪಾಚನತಂತ್ರ. ಕವನತಂತ್ರವೂ ಅಂಥಾದ್ದೇ. ಅಕ್ಷರಗುಣ, ಪದಗುಣ, ಮನೋದ್ರವ್ಯ, ಬುದ್ಧಿದ್ರವ್ಯ—ಈ ನಾಲ್ಕೂ ಕವಿಯ ವ್ಯಕ್ತಿಪ್ರತಿಭೆಯ ದಿವ್ಯಾಗ್ನಿ ಜ್ವಾಲೆಯಲ್ಲಿ ಬೆಂದು ಹದಗೂಡಿ ಒಂದಾಗಬೇಕು. ಅನೇಕದಿಂದ ಏಕವಸ್ತು ಘಟನೆಯಾಗಬೇಕು. ಶಬ್ದಗಳೂ ಅರ್ಥಗಳೂ ಮೊಸರಿನಲ್ಲಿ ಬಿದ್ದ ನೆಲ್ಲಿಸಂತಿರಬಾರದು. ಆ ಮೊಸರು ಎಷ್ಟು ಸವಿ ಯುಳ್ಳದ್ದಾದರೆ ಏನು, ಆ ನೆಲ್ಲು ಎಷ್ಟು ಸಾರವುಳ್ಳದ್ದಾದರೆ ಏನು? ಆ ಕಲಬೆರಕೆ ಯನ್ನು ಊಟಮಾಡಲಾದೀತೆ? ಅದೇ ನೆಲ್ಲಿನ ಅಕ್ಕಿಯನ್ನು ಹದವರಿತು ಅನ್ನ ಮಾಡಿದ್ದಿದ್ದರೆ ಆಗ ದಧ್ಯೋದನದ ದಿವ್ಯಸುಖ. ಅದರಂತೆ ಇರಬೇಕು ಕಾವ್ಯ ದಲ್ಲಿ ಮಾತುಗಳೂ ಭಾವಗಳೂ. ಆ ಎರಡು ಜಾತಿಯ ದ್ರವ್ಯಗಳೂ ಕರಗಿ ಒಂದು ದ್ರವವಾಗಿ, ಅವುಗಳಲ್ಲಾವುದೂ ತಾನೊಂದೇ ಇದ್ದಾಗ ಸೂಸಲಾ ರದ ಒಂದು ಹೊಸ ಅಧಿರಸವನ್ನು ಆ ಮಿಶ್ರಣವು ಸೂಸಬೇಕು—ಪಾಯಸ ದಲ್ಲಿ ಹಾಲು ರವೆ ಸಕ್ಕರೆ ಏಲಕ್ಕಿಗಳಿಂದಾಗುವಂತೆ. ಅಲ್ಲಿ ನಾನಾರಸ ನಾನಾ ವಾಸನೆಗಳ ಕೂಟದಿಂದ ಹೊರಡುತ್ತದೆ ಒಂದು ಹೊಸ ಸಮವಾಯರುಚಿ— ಒಂದು ಸಮವಾಯಸೌರಭ. ಆ ಕೂಟವೇ ಸ್ವಾರಸ್ಯಗ್ರಂಥಿ. ಕಾವ್ಯದ ಆಕರ್ಷಕಶಕ್ತಿ ಅಂಥಾ ಅರ್ಥಶಬ್ದಗಳ ಏಕಾಕಾರ ಪ್ರವಾಹದಿಂದ. ಅದರಲ್ಲಿ ಏಕಧಾತು ಮಾತ್ರದ, ಏಕೈಕರುಚಿಯ, ವೇದಸ ಮಂದತ್ವವಿಲ್ಲ; ನಾನಾ ಧಾತು ಗಳ, ನಾನಾ ರುಚಿಗಳ, ವ್ಯಗ್ರ ವಿಷಮತ್ವವೂ ಇಲ್ಲ. ಪಾಕ ಚೆನ್ನಾಗಿ ನಡೆದಿರು ವುದಕ್ಕೆ ಅದೇ ಪ್ರಮಾಣ, ಎಲ್ಲಿ ಒಂದರೆಕ್ಷಣಕ್ಕಾದರೂ ಆ ಅಧಿರಸದ ಏಕ ತಾನತೆಯುಂಟೋ,—ಎಲ್ಲಿ ವಾಕ್ಕೂ ಅರ್ಥವೂ ಒಂದಾಗಿ ತಂಬೂರಿಯ ಶ್ರುತಿ ಯಲ್ಲಿ ಗಾಯಕನ ಕಂಠಸ್ವರ ಸೇರುವಂತೆ,—ವಾಚಕಹೃದಯವು ಕವಿಹೃದಯ ದಲ್ಲಿ ಲೀನವಾಗಿ, ಎಲ್ಲ ಏಕತಾನವಾಗುವುದೋ ಅಲ್ಲಿ ಕಾವ್ಯಸಿದ್ಧಿಯುಂಟು.

ಸಂಗೀತದ ಉಪಮಾನ ಕಾವ್ಯಕ್ಕೆ ಚೆನ್ನಾಗಿ ಹೊಂದುತ್ತದೆ. ಈ ಎರಡು ಕಲೆಗಳ ಸ್ವಾರಸ್ಯವೂ **ಮೂಲಾನೈಕ್ಯ—ಫಲಿತೈಕ್ಯ**ದಿಂದ. ಒಂದೊಂದು

ರಾಗದಲ್ಲಿಯೂ ನಾಲ್ಕಾರು ಸ್ವರಗಳು—ಪ್ರಕೃತಿಗಳು, ವಿಕೃತಿಗಳು, ವಾದಿಗಳು, ವಿವಾದಿಗಳು—ಸೇರಿಕೊಂಡಿರುತ್ತವೆ. ಆದರೆ ಶಾಸ್ತ್ರಜ್ಞನಲ್ಲದವನ ಕಿವಿಗೆ ಕೇಳ ಬಂದು ಮನಸ್ಸಿಗೆ ಸಂತೋಷವನ್ನುಂಟುಮಾಡುವುದು—ಒಂದು ರಾಗವೇ ;— ರಾಗವೊಂದೇ ; ಅದರೊಳಗಣ ಬೇರೆಬೇರೆ ಸ್ವರಗಳಲ್ಲ.

ಯಥಾ ಕುಟುಂಬಿನಸ್ಸರ್ವೇ ಏಕೀಭೂತಾ ಭವಂತಿ ಹಿ |
ತಥಾ ಸ್ವರಾಣಾಂ ಸಂದೋಹೋ ಗ್ರಾಮ ಇತ್ಯಭಿಧೀಯತೇ ||

ಕುಟುಂಬಸಾದೃಶ್ಯವಿರುವುದು ಸ್ವರ"ಗ್ರಾಮ"ದಲ್ಲಿ ಮಾತ್ರವೇ ಅಲ್ಲ. ನಾನಾ ವಾದ್ಯಗಾಯಕ ಗೀತೆಗಳಲ್ಲಿ ಸಹ ಆ ಏಕೀಭವಿಸಿರೋಣವೇ ಸ್ವಾರಸ್ಯ—ಅದೇ "ಮೇಳ." ನಾನಾತ್ವದ ದ್ವಾರಾ ಲಭ್ಯವಾದ ಏಕತ್ವವೇ ಕುಟುಂಬದ ಸೊಗಸು ; ಅದೇ ರಾಗದ ಸೊಗಸು ; ಅದೇ ಕಾವ್ಯದ ಸೊಗಸು. ಬಹುತೆಯ ಸಾರ್ಥಕ್ಯವು ಪರಿಣಾಮದ ಏಕತೆಯಲ್ಲಿ. ಏಕತ್ವಕ್ಕೆ ಕಳೆ ಬರುವುದು ತದಂತರ್ಗತವಾದ ಬಹುತ್ವದಿಂದ. ಸಣ್ಣ ಪದ್ಯವಾಗಲಿ, ಬೃಹತ್ಕಾವ್ಯವಾಗಲಿ, ಜಟಿಲನಾಟಕವಾಗಲಿ—ಎಲ್ಲಿ ಈ ಅದ್ವೈತಪಾಕದ ಅಧಿರಸವಿಲ್ಲವೋ ಅಲ್ಲಿ ಕಾವ್ಯತ್ವವಿಲ್ಲ. ಆದರೆ ಆ ಅಧಿರಸವುಂಟೋ ಇಲ್ಲವೋ ನಿಶ್ಚಯಿಸುವವರಾರು ? ಕವಿಯೊಬ್ಬನೇ ಅಲ್ಲ ; ವಾಚಕನೊಬ್ಬನೇ ಅಲ್ಲ ; ಕವಿವಾಚಕರಿಬ್ಬರಿಗೂ ಐಕ್ಯ ಸಿದ್ಧಿಯಾದಾಗ ಅದು ಉಂಟು.

## ಅಕ್ಷರಶಕ್ತಿ

ವಾಕ್ಕಿಗೆ ಎರಡು ಶಕ್ತಿಗಳಲ್ಲವೆ? ಒಂದು ಅಕ್ಷರಮೂಲವಾದದ್ದು, ಮತ್ತು ಶ್ರವಣಾಕರ್ಷಣೆಯುಳ್ಳದ್ದು ; ಇನ್ನೊಂದು ಅರ್ಥಮೂಲವಾದದ್ದು, ಮತ್ತು ಮನೋಬುದ್ಧಿಗಮ್ಯವಾದದ್ದು. ಲೋಕಪ್ರಸಿದ್ಧವಾದ ಕೆಲವು ಸದ್ದುಗಳು ಕಿವಿಗೆ ಬಿದ್ದೊಡನೆಯೇ ಅವುಗಳ ಸಂದರ್ಭಗಳೂ ಮನಸ್ಸಿಗೆ ಹೊಳೆದುಬಿಡು ತ್ತವೆ. ಗೊಳಗೊಳ ಎಂದರೆ ಅಳು, ಕಿಲಕಿಲ ಎಂದರೆ ನಗು, ಉಸ್ಸೆಂದರೆ ಆಯಾಸ, ಕಿರ್ರೆಂದರೆ ಯಾತನೆ—ಹೀಗೆ. ಇಂಥಾ ಅನುಕರಣಜನಿತವಾದ ಸೂಚ್ಯಾರ್ಥಗಳೂ ಲೋಕರೂಢಿ ನಿಘಂಟುಗಳಿಂದ ಲಭ್ಯವಾದ ಸ್ಪಷ್ಟಾರ್ಥ ಗಳೂ ಮಾತ್ರವಲ್ಲದೆ ನಮ್ಮ ಪೂರ್ವಾನುಭವದ ಆಧಾರದ ಮೇಲೆ ಊಹಾಪೋಹಗಳಿಂದ ಸಿದ್ಧವಾಗುವ ಮೂರನೆಯ ಶಕ್ತಿಯೊಂದು ಭಾಷೆಗೆ ಉಂಟು. ಅದನ್ನು "ಧ್ವನಿ" ಯೆಂದು ಕರೆಯುತ್ತಾರೆ. ನಾವು ಉಪಯೋಗಿ ಸುವ ಮಾತುಗಳ "ರೀತಿ" ಯಿಂದ ಉಪಯೋಗಿಸದೆ ಇರುವ ಮಾತಿನ ಅರ್ಥ

ವೊಂದು ಕೇಳುವವರ ಮನಸ್ಸಿಗೆ ಹೊಳೆಯುವಂತೆ ಇದ್ದರೆ, ಆ ಹೊಳೆದ ಅರ್ಥವೇ ಧ್ವನಿ. ದೇವದತ್ತನು ದೂರಸ್ಥಳದಲ್ಲಿರುವ ತನ್ನ ಸ್ನೇಹಿತ ಯಜ್ಞದತ್ತನ ಬಳಿಗೆ ಹೋಗಲಿರುವ ಇನ್ನೊಬ್ಬ ಸ್ನೇಹಿತನನ್ನು ಕುರಿತು—'ದೇವದತ್ತ ಬದುಕಿದ್ದಾನೆಂದು ಯಜ್ಞದತ್ತನಿಗೆ ಹೇಳು' ಎಂದು ಕೋರುತ್ತಾನೆ. ಆ ನಾಲ್ಕು ಮಾತುಗಳ ಭಾವವೇನು? 'ಯಜ್ಞದತ್ತನು ದೇವದತ್ತನನ್ನು ಮರೆತುಬಿಟ್ಟಿದ್ದಾನೆ; ಅದು ಸ್ನೇಹಧರ್ಮವಲ್ಲ; ದೇವದತ್ತನಿಗೆ ಯಜ್ಞದತ್ತನ ಪ್ರೀತಿ ಪ್ರಿಯವಾಗಿದೆ;'—ಇವೇ ಮೊದಲಾದುವು ದೇವದತ್ತನ ಇಂಗಿತಗಳು. ಇವೆಲ್ಲ ಆ ನಾಲ್ಕು ಮಾತುಗಳಲ್ಲಿ ಅಡಗಿಕೊಂಡು ಹೊರಕ್ಕಿಣಿಕಿ ನೋಡುತ್ತವೆ. ಹಾಗೆ ಹೊರಕಿವಿಗೆ ಕೇಳಬಾರದೆ ನಮ್ಮ ಒಳಕಿವಿಗೆ ಮಾತ್ರ ಕೇಳಬರುವ ಮರ್ಮಭಾವವೇ ಧ್ವನಿ.

## ಧ್ವನಿವಿಚಾರ

ಎಷ್ಟೋ ಮಾತುಗಳಿಗೆ ವಿಚಿತ್ರವಾದ ಧ್ವನಿಪ್ರಭಾವ ಬಂದಿರುತ್ತದೆ. ಅಭಿನಯಕುಶಲಿಯ ಕಣ್ಣು ತುಟಿ ತಲೆ ಬೆರಲುಗಳು, ತಾವು ಬೇರೆ ಆಗದೆ, ತಮ್ಮ ಬಾಗು ಸೊಟ್ಟುಗಳ ರೀತಿಯಿಂದಲೇ ಬೇರೆ ಬೇರೆ ಭಾವಗಳನ್ನು ಸೂಚಿಸಲಾಗುವಂತೆ, ಒಂದೇ ಸಂಗತಿಯನ್ನು ನಾವು ಹೇಳ ಹೊರಟು ಅದಕ್ಕಾಗಿ ಉಪಯೋಗಿಸುವ ಮಾತುಗಳನ್ನು ಅಷ್ಟಿಷ್ಟು ವ್ಯತ್ಯಾಸಮಾಡಿ ಉಚ್ಚರಿಸಿದರೆ ಹೇಳಿದ ಸಂಗತಿ ಹಾಗೆಯೇ ಉಳಿದಿದ್ದರೂ ಆ ಸಂಗತಿಯನ್ನು ಕುರಿತು ಹುಟ್ಟಿದ ಮನೋಭಾವಗಳು ಬೇರೆಬೇರೆಯಾದಾವು. ಒಂದೆರಡು ದೃಷ್ಟಾಂತಗಳನ್ನು ನೋಡೋಣ:—

| ಆಹಾರ | ಮನೋವಿಕಾರ | ಮೃತಿ |
|---|---|---|
| ಉಂಡ | ಹುಚ್ಚಾದ | ಸತ್ತ |
| ಭೋಜನ ಮಾಡಿದ | ಬುದ್ಧಿಪಲ್ಲಟ ಹೊಂದಿದ | ಗೋತಾ ಹೊಡೆದ |
| ಗದುಕಿದ | ಚಿತ್ತಭ್ರಮಣೆ ,, | ಕಂತೆ ಒಗೆದ |
| ಹೊಟ್ಟೆ ಹೊರಕೊಂಡ | ಪಿತ್ತವಿಕಾರ ,, | ಕಳೇಬರ ತ್ಯಜಿಸಿದ |
| ಉದರಪೂಜೆ ಮಾಡಿದ | ಮನಸ್ಸು ಚಂಚಲ ,, | ಕಾಲಾಧೀನನಾದ |
| ನೈವೇದ್ಯ ಸಮರ್ಪಣೆ ಮಾಡಿಕೊಂಡ | ಮನೋರೋಗ ತಂದುಕೊಂಡ | ಹಳೇರಾಗಿ ತರಲಿಕ್ಕೆ ಹೋದ |
| ಕುಂಭಲಗ್ನ ಸಾಧಿಸಿದ | ಮೆದುಳು ಕೆಡಿಸಿಕೊಂಡ | ಕಣ್ಮುಚ್ಚಿಕೊಂಡ |
| ಸಾದ ಸೇವಿಸಿದ | ಉನ್ಮಾದವಶನಾದ | ಪಂಚತ್ವ ಹೊಂದಿದ |

| ಆಹಾರ | ಮನೋವಿಕಾರ | ಮೃತಿ |
| --- | --- | --- |
| ಕವಳಧ್ವಂಸ ಮಾಡಿದ | ಬುದ್ಧಿಗೆಟ್ಟ | ಭೂಋಣ ಮುಗಿಸಿಕೊಂಡ |
| ಅನ್ನಬ್ರಹ್ಮಪೂಜೆಮಾಡಿದ | ಐಲುಪೈಲಾದ | ದೇವರಪಾದ ಸೇರಿದ |
| ಕೂಳು ತಿಂದ | ಎಳೆ ನಿಂಬೇಕಾಯಾದ | ಯಾತ್ರೆ ಮುಗಿಸಿದ |
| ಪ್ರಾಣಾಧಾರ ಮಾಡಿಕೊಂಡ | ಅಮಲೇರಿದ | ಕೀರ್ತಿಶೇಷನಾದ |

ಸಂಗತಿ ಒಂದೇ ಆದರೂ ಅದನ್ನು ಹೇಳುವ ಮಾತಿನ ಬಗೆಯಿಂದ ಆ ಸಂಗತಿಯ ವಿಷಯದಲ್ಲಿ ನಾಲ್ಕು ಬೇರೆ ಬೇರೆ ಬಗೆಯ ಭಾವಗಳನ್ನು ಸೂಚಿಸ ಬಹುದು. ಹೀಗೆ ಒಂದು ಪದವು ಅಥವಾ ಪದಸಮೂಹವು, ತಾನು ಸ್ಪಷ್ಟ ವಾಗಿ ತಿಳಿಸುವ ವಾಸ್ತವಿಕ ಸಂಗತಿಯೊಂದಿಗೆ ಗೂಢವಾಗಿ ಸೇರಿಸಿರುವ ಭಾವವಿಕೃತಿಯೇ ಒಂದು ಜಾತಿಯ 'ಧ್ವನಿ'.

ಎಷ್ಟೋ ಪದಗಳಲ್ಲಿ ಆಯಾ ಪದದಿಂದ ನಿರ್ದಿಷ್ಟವಾದ ವಸ್ತುವಿನ ಸ್ವಭಾವದ ಸೂಚನೆಯೂ ಅಡಗಿಕೊಂಡಿರುತ್ತದೆ. ಇದು ಸಂಸ್ಕೃತದಲ್ಲಿ ವಿಶೇಷ. ಆ ಪದಗಳ ರಚನೆಯೇ ಹಾಗೆ. 'ಜಗತ್ತು' ಎಂಬ ಮಾತಿನಲ್ಲಿಯೇ 'ಚಲಿಸು ತ್ತಿರುವ', 'ಬದಲಾಯಿಸುತ್ತಿರುವ' ಎಂಬ ಭಾವ ಅಡಕವಾಗಿದೆ. 'ಪ್ರಪಂಚ' ಎಂಬುದರಲ್ಲಿಯೇ 'ಒಂದರಿಂದ ಇನ್ನೊಂದು ಹುಟ್ಟಿಬಂದ', 'ಸಣ್ಣದು ದೊಡ್ಡದಾಗಿ ಹರಡಿದ' ಎಂಬ ಅಭಿಪ್ರಾಯ ಅಡಗಿದೆ. ಇಂಥಾ ಸ್ವಂತ ಆಸ್ತಿಯುಳ್ಳ ಮಾತುಗಳಿಂದಲೇ ವಾಕ್ಯಕ್ಕೆ ಅರ್ಥಪುಷ್ಟಿ. ಅವುಗಳದೇ ಧ್ವನಿಶಕ್ತಿ.

## ವಾಸನೆ

ಈ 'ಧ್ವನಿ' ಎಂಬುದು ಕವಿತತ್ತ್ವಮೀಮಾಂಸೆಯಲ್ಲಿ ಬಹು ದೊಡ್ಡ ಮಾತು. ಸಾಮಾನ್ಯಭಾಷೆಯಲ್ಲಿ 'ಧ್ವನಿ' ಎಂಬುದು ಕಿವಿಯ ದ್ವಾರಾ ನಮಗೆ ದೊರೆಯುವ ಹೊರಗಣ ಪ್ರಪಂಚದ ಅನುಭವ. ತತ್ಸದೃಶವಾದ ಅನುಭವವು ಕಣ್ಣು, ಮೂಗು ಮೊದಲಾದ ಇತರ ಇಂದ್ರಿಯಗಳ ಮೂಲಕವೂ ಆಗಬಹುದು. ಶಬ್ದದಿಂದ ನಮ್ಮ ಮನಸ್ಸಿಗೆ ಯಾವ ವಿಷಯ ಪ್ರತ್ಯಕ್ಷ ವಾಗಿದೆಯೋ ಆ ವಿಷಯ ಪರೋಕ್ಷದಲ್ಲಿರುವ ಇನ್ನೊಂದು ವಿಷಯವನ್ನು ನಮ್ಮ ಜ್ಞಾಪಕಕ್ಕೆ ತಂದುಕೊಡುವಂತೆ ಶಬ್ದಯೋಜನೆ ಆಗಿದ್ದಲ್ಲಿ ಆ ವಾಕ್ಯ ಶಕ್ತಿಯೇ 'ಧ್ವನಿ'—ಕಾವ್ಯಶಾಸ್ತ್ರದ ಪರಿಭಾಷೆಯಲ್ಲಿ. ಆ 'ಧ್ವನಿ' ಒಂದು ಪದಪ್ರಯೋಗಚಮತ್ಕಾರ. ನಿಘಂಟುವಿನಿಂದ ಒಂದು ಮಾತಿಗೆ ಬಂದಿರುವ ಅರ್ಥದ ಜೊತೆಗೆ ನಿಘಂಟುವಿನಲ್ಲಿಲ್ಲದ ಅರ್ಥವೊಂದನ್ನು ಅದರ ಜೋಡಣೆ

ಸೂಚಿಸುವಂತಿದ್ದರೆ ಆಗ ಅದು ಧ್ವನಿವಂತವಾಗುತ್ತದೆ. ಅಂಥಾ ಹೆಚ್ಚುವರಿ ಗುಣವನ್ನು ವಾಸನೆಯೆಂದಾದರೂ ಕರೆಯುಬಹುದು, ಛಾಯೆಯೆಂದಾದರೂ ಕರೆಯುಬಹುದು. ವೀಣೆಯುನ್ನು ಮೀಟಿ ಬೆರಲನ್ನು ಹಿಂದಕ್ಕೆ ತೆಗೆದುಕೊಂಡ ಮೇಲೂ—ತಂತಿಯ ಅಲುಗಾಟ ಕಣ್ಣಿಗೆ ಕಾಣದೆಹೋದ ಮೇಲೂ—ಅದರ ಸೂಕ್ಷ್ಮನಾದ ಕಿವಿಗೆ ಒಂದರೆಕ್ಷಣ ಕೇಳಬರುತ್ತದೆ. ಅದು ಧ್ವನಿ. ಅದನ್ನು ಹೋಲುವಂಥ ಕವಿವಾಗ್ಗುಣವೇ ಕಾವ್ಯಜಿಜ್ಞಾಸೆಯಲ್ಲಿ ಪಾರಿಭಾಷಿಕ 'ಧ್ವನಿ.' ಮುತ್ತುವಜ್ರಗಳನ್ನು ಮನೆಯೊಳಗಣ ಹಗಲುಬೆಳಕಿನಲ್ಲಿ ಕೈಗೆ ತೆಗೆದುಕೊಂಡು ನೋಡಿದಾಗ ಬೆಳ್ಳಗೆ ಕಾಣುತ್ತವೆ; ಆದರೆ ಅವು ಸುಂದರಿಯ ಆಭರಣದಲ್ಲಿ ಸೇರಿಕೊಂಡು ದೀಪದ ಬೆಳಕಿನಲ್ಲಿ ಆಕೆಯ ಮುಖ ಕದಲಿದಂತೆ ಹೊಳೆಹೊಳೆದಾಗ ನೀಲ ಹಸಿರು ಕೆಂಪು ಕಾಂತಿಗಳನ್ನು ಬೀರುತ್ತವೆ. ಅದೇ ಲಾವಣ್ಯ ಅಥವಾ ಛಾಯೆ. ಬಟ್ಟೆಯ ಮೇಲೆ ಶ್ರೀಗಂಧ ಜವ್ವಾಜಿಗಳು ಬಿದ್ದ ಮಾರನೆಯ ದಿನ ಬಟ್ಟೆಯನ್ನೊಗೆದರೂ ಇನ್ನೂ ಒಂದೆರಡು ದಿನ ಆ ಗಂಧ ಅದಕ್ಕೆ ಅಂಟಿಕೊಂಡಿರುವುದುಂಟು. ಆ ಪರಿಮಳಶೇಷವೇ ವಾಸನೆ (ಉದಾ: ಜನ್ಮಾಂತರ ವಾಸನೆ). ಹೀಗೆ 'ಧ್ವನಿ'ಯೆಂಬುದು ಪಾರಿಭಾಷಿಕಾರ್ಥದಲ್ಲಿ ಪದಭಾವದ 'ಶಿಲ್ಕು'. ಶಬ್ದದ ಸ್ಪಷ್ಟಾರ್ಥದ ಮೇಲುವರಿ—ಅದರ ಕೂಟ ಪ್ರಭೆ ಅಥವಾ ಪ್ರಭಾತಿರೇಕ—ಅದರ ಅವಶಿಷ್ಟ ವಾಸನೆ—ಅದರ ಅನ್ಯವಸ್ತು ನಿರ್ದೇಶನ ಅಥವಾ ಅನ್ಯದಿಕ್ಪ್ರೇರಣೆ.

## ರಸ—ಧ್ವನಿ

ರಸವೆಂಬುದು ಹೃದಯದ್ರವ. ಧ್ವನಿ ಅದಕ್ಕೆ ಕಾರಣವಾಗಿರಬಹುದು; ಅದರ ಕಾರ್ಯವೂ ಆಗಿರಬಹುದು. ಯಾರೋ ಆಡಿದ ಮಾತಿನ ಒಂದು ಮುಳ್ಳುಮೊನೆ—ಅದರ ಧ್ವನಿ—ನಮ್ಮ ಎದೆಯನ್ನು ಚುಚ್ಚಿ ಕೆರಳಿಸಿ ಬಿಸಿ ಮಾಡಿ, ಆ ಬಿಸಿಯಿಂದ ಎದೆ ಕರಗುವಂತೆ ಮಾಡಬಹುದು. ಎದೆ ಹಾಗೆ ನೀರಾಗಿ ತಳಮಳಗುಟ್ಟುತ್ತಿರುವಾಗ, ಅದರ ಆವಿ ಒಂದು ಧ್ಯಾನಬಿಂದುವಾಗಿ—ಧ್ವನಿಯಾಗಿ—ರೂಪಗೊಳ್ಳಬಹುದು. ಒಂದೇ ಹೃದಯವಸ್ತುವಿನ ದ್ರವರೂಪ ರಸ, ಅನಿಲರೂಪ ಧ್ವನಿ. ಸ್ವಲ್ಪ ವಾಚ್ಯವೂ ಸ್ವಲ್ಪ ಸೂಚ್ಯವೂ—ಬಾಹ್ಯಸಂದರ್ಭವಾಚಕವೂ ಅಂತರ್ಭಾವಸೂಚಕವೂ—ಆಗಿರುವ ವಾಕ್ಚಮತ್ಕಾರವೇ ಕಾವ್ಯ. ಆ ಚಮತ್ಕಾರದ ಪರಿಣಾಮವು ಜಡವಾದ ಹೃದಯವನ್ನು ಚುರುಕುಪಡಿಸಿ ಊಹಾತರಂಗಗಳನ್ನೇಳಿಸುವುದಾಗಬಹುದು, ಅಥವಾ ಅತಿಯಾಗಿ ವೇಗಗೊಂಡು ತಲ್ಲಣಿಸುತ್ತಿರುವ ಹೃದಯದ ಗಮನವನ್ನು

ಆಲೋಚನೆಯ ಸ್ತಿಮಿತರೂಪಕ್ಕೆ ಪರಿವರ್ತಿಸಿ ಶ್ರೇಯೋನ್ವೇಷಣೆಗೆ ಅದನ್ನು ಪ್ರೇರಿಸಬಲ್ಲದ್ದಾಗಬಹುದು.

## ಸಂದರ್ಭಶಕ್ತಿ

ಧ್ವನಿ ಎಂಬ ಹೆಸರನ್ನು ಸೂಕ್ಷ್ಮಭಾವಗರ್ಭಿತವಾದ ವಾಕ್ಪ್ರಯೋಗಕ್ಕೆ—ಇಂಗಿತಾರ್ಥವುಳ್ಳ ವಚನಪ್ರಕಾರಕ್ಕೆ,—ನಿಯತಮಾಡಿಕೊಂಡಿರುವುದಂತೂ ಸರಿ. ಆದರೆ ಅಂತರ್ಭಾವವು ವಾಕ್ಕಿನಲ್ಲಿ, ಅಥವಾ ವಾಕ್ಯಶೈಲಿಯಲ್ಲಿ, ಅಡಗಿಕೊಂಡಿರುವಂತೆಯೇ ಒಂದು ವಸ್ತುವಿನಲ್ಲಿ, ಅಥವಾ ವಸ್ತುಸಂದರ್ಭದಲ್ಲಿ ಅಡಗಿಕೊಂಡಿರಬಹುದು. ಒಬ್ಬ ಮನುಷ್ಯನು ಆಡಿದ ಮಾತಿನ ಒಂದಾನೊಂದು ವ್ಯಂಗ್ಯದಿಂದ,—ಒಂದು ಕೊಂಕಿನಿಂದ,—ಒಂದು ಗುಪ್ತ ಮರ್ಯಾದೆಯಿಂದ,—ಒಂದು ಸಂಧಾನನಯದಿಂದ ಅವನ ಹೃದಯದ ಇಂಗಿತವು ಕೇಳಿದವನಿಗೆ ಧ್ವನಿತವಾಗಿ, ಇವನ ಮನಸ್ಸಿನಲ್ಲಿ ಪ್ರತಿಧ್ವನಿಯನ್ನೆಬ್ಬಿಸಬಹುದು. ಆದರೆ ಯಾವ ಕಂಠಸ್ವರವೂ ಇಲ್ಲದ,—ಯಾವ ವಾಕ್ಪ್ರಸಕ್ತಿಯೂ ಇಲ್ಲದ,—ಸಂದರ್ಭದಲ್ಲಿಯೂ ಪ್ರತಿಧ್ವನಿಜನಕವಾದ ಅಥವಾ ಪ್ರತ್ಯುಕ್ತಿಹೇತುವಾದ ಒಂದು ಶಕ್ತಿವಿಶೇಷವಿರುವುದು ಸಾಧ್ಯವಿರುತ್ತದೆ. ಇಂಥಾದ್ದು ವಸ್ತುಸಂಗತ ಧ್ವನಿ, ಅಥವಾ ವಸ್ತುಜನಿತ ಚೋದನೆ. ಕವಿಯ ದೃಷ್ಟಿಯಿಂದ ಅವನ ವಾಕ್ಯಚಾತುರ್ಯ ಮುಖ್ಯವಾದರೆ, ಕಾವ್ಯ ಸಂಸ್ಕಾರಾಪೇಕ್ಷಿಯ ದೃಷ್ಟಿಯಿಂದ ಮುಖ್ಯವಾದದ್ದು ಅವನ ಹೃದಯಕ್ಕೆ ಲಭ್ಯವಾಗುವ ಚೋದನೆ. ಕವಿಯ ವಾಗ್ವಿಚಕ್ಷಣೆಯಿಂದ ಆ ಚೋದನೆ ಬಂದರೇನು, ಕವಿ ನಿರ್ಮಿಸಿದ ಕಥಾಸನ್ನಿವೇಶದಿಂದ ಆಚೋದನೆ ಬಂದರೆ ಏನು? ರಾಮಾಯಣ ಕಥೆಯಲ್ಲಿ, ರಾಮಚಂದ್ರನು ದಂಡಕಾರಣ್ಯದಲ್ಲಿ ಸಂಚಾರ ಮಾಡುವಾಗ ಕಮಲವನ್ನೋ ಕಲ್ಹಾರವನ್ನೋ ಕಂಡಂತೆಲ್ಲಾ ಸೀತಾಸ್ಮರಣೆ ಮಾಡುತ್ತಾನೆ. ಪ್ರತ್ಯಕ್ಷವಾದದ್ದು ಪರೋಕ್ಷದಲ್ಲಿರುವುದನ್ನು ನೆನಪಿನ ಮುಂದೆ ತರುತ್ತದೆ.

ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯನಿಃಶ್ವಾಸೆಯಂ |
ತಳಿರೇ ತಾವರೆಯೇ ಮದಾಳಿಕುಲಮೇ ಕನ್ನೆಯ್ದಿಲೇ ಮತ್ತಕೋ ||
ಕಿಳಮೇ ಕಂಡಿರೆ ಪಲ್ಲವಾಧರೆಯನ್ ಅಂಭೋಜಾಸ್ಯೆಯಂ ಭೃಂಗಕಂ |
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ || (—ನಾಗಚಂದ್ರ)

ರಾಮನಿಗೆ ಸುತ್ತಮುತ್ತಣ ಪ್ರಕೃತಿದೃಶ್ಯವೇ ಒಂದು ಪ್ರಚೋದನೆಯನ್ನೊದಗಿಸಿತು; ಅದಕ್ಕೆ ರಾಮನು ಕೊಟ್ಟ ಪ್ರತಿಚರ್ಯೆಯ ಉತ್ತರವನ್ನು ಈ ಪದ್ಯ ನಮಗೆ ತೋರಿಸುತ್ತದೆ. ಅಂಥ ಅನುಭವಗಳು ಎಲ್ಲ ಸಹೃದಯರಿಗೂ

ಆಗಿರುವಂಥವೇ. ರವಿವರ್ಮನ ಚಿತ್ರಪಟದಲ್ಲಿ ಸುಂದರಿಯ ಕೇಶಭರವನ್ನು ನೋಡಿದಾಗಲೆಲ್ಲ ಒಬ್ಬ ರಸಿಕನಿಗೆ ಅವನ ದಿವಂಗತ ಪ್ರೇಯಸಿಯು ತನ್ನ ತಲೆಗೂದಲಿಗೆ ಸವರಿಕೊಳ್ಳುತ್ತಿದ್ದ ತೈಲದ ಪರಿಮಳ ಮೂಗಿಗೆ ಬೀಸಿ ಬಂದಂತಾಗುತ್ತಿತ್ತಂತೆ!

ಉನ್ಮೀಲನ್ಮಧುಗಂಧಲುಬ್ಧಮಧುಪವ್ಯಾಧೂತಚೂತಾಂಕುರ|
ಕ್ರೀಡತ್ಕೋಕಿಲಕಾಕಲೀಕಲರವೈರುದ್ಗೀರ್ಣಕರ್ಣಜ್ವರಾಃ||
ನೀಯಂತೇ ಪಥಿಕೈಃ ಕಥಂ ಕಥಮಪಿ ಧ್ಯಾನಾವಧಾನಕ್ಷಣ|
ಪ್ರಾಪ್ತಪ್ರಾಣಸಮಾಸಮಾಗಮರಸೋಲ್ಲಾಸೈರಮೀ ವಾಸರಾಃ|| (—ಜಯದೇವ)

ತನ್ನೂರಿಂದ ದೂರದಲ್ಲಿ ಏಕಾಕಿಯಾಗಿ ದಾರಿತುಳಿಯುತ್ತಿದ್ದ ಪ್ರಯಾಣಿಕನಿಗೆ ವಸಂತಕಾಲದಲ್ಲಿ ಅಲ್ಲಲ್ಲಿ ಕಾಣಿಸಿದ ಮಾವಿನತೋಪಿನ ಚಿಗುರು ಹೂ ಗೊಂಚಲುಗಳೂ ದುಂಬಿ ಕೋಗಿಲೆಗಳೂ ಪ್ರಿಯಳೊಡನೆ ತಾನೆಂದೋ ಅನುಭವಿಸಿದ್ದ ಸಂತೋಷವನ್ನು ಜ್ಞಾಪಕಕ್ಕೆ ತಂದುಕೊಟ್ಟು ಅವನನ್ನು ಸಂತೈಸಿದುವಂತೆ. ಇಂಥಾದ್ದು ಪರಿಸರಾಂತರ್ಭೂತಧ್ವನಿ. ಅದು ಅವಾಗ್ಧ್ವನಿ. ಅದೇ ವಸ್ತುಧ್ವನಿ.

ಮಹಾಭಾರತದ ಕಥೆಯನ್ನೋದಿದ ಒಬ್ಬ ವಿಚಾರಿ ಕಡೆಗೆ ಹೀಗೆ ಫಲಶ್ರುತಿ ಹೇಳಿದ್ದಾನೆ—

ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕೇ ಕೇಶವೇ|

'ಕುರುಕ್ಷೇತ್ರದಲ್ಲಿ ಹರಿದ ರಕ್ತನದಿಯಲ್ಲಿ ಮೀನು ಹಿಡಿದ ಬೆಸ್ತನು ಕೃಷ್ಣ!'[1]

ಎಂಥಾ ಮರ್ಮಭೇದಕವಾದ ಟೀಕೆ ಇದು! ಇದನ್ನು ಪ್ರೇರಣೆ ಮಾಡಿದ್ದು ಭಾರತದೊಳಗಿರುವ ಮಾತಲ್ಲ; ಅದರ ಕಥಾಸಂದರ್ಭ. ಗ್ರೀಕರ ರುದ್ರನಾಟಕಗಳಲ್ಲಿಯೂ ಷೇಕ್ಸ್‌ಪಿಯರಿನ ಹ್ಯಾಮ್ಲೆಟ್ ಮ್ಯಾಕ್ಬೆತ್‌ಗಳಲ್ಲಿಯೂ ಇಂಥಾ ಜೀವವೇಧಕ ಸನ್ನಿವೇಶಗಳು ತಾವೇತಾವಾಗಿ ತುಂಬಿ

---

[1] ಇಲ್ಲಿ ಒಂದು ತಕರಾರು. ಉದಾಹೃತ ಪದ್ಯದಲ್ಲಿ 'ಕೈವರ್ತಕೇ ಕೇಶವೇ' ('ಕೈವರ್ತಕಃ ಕೇಶವಃ'—ಎಂದೂ ಪಾಠವುಂಟು) ಎಂಬ ಕಡೆ 'ಕೈವರ್ತಕ' ಶಬ್ದಕ್ಕೆ 'ಬೆಸ್ತ' ಎಂದು ಮೇಲೆ ಅರ್ಥ ಮಾಡಿದೆ. ಒಬ್ಬ ಸ್ನೇಹಿತರು ಇದಕ್ಕೆ 'ಅಂಬಿಗ' ಎಂದು ಅರ್ಥ ಹೇಳುವುದು ಯುಕ್ತವಲ್ಲವೆ? ಎಂದು ಕೇಳಿದ್ದಾರೆ. ಅದಕ್ಕೆ ಸಮಾಧಾನವನ್ನು ಇಲ್ಲಿ ಯತ್ನಿಸುವುದಾಗುತ್ತದೆ. ಮೊದಲು ಪದ್ಯವನ್ನು ಪೂರ್ತಿ ನೋಡೋಣ—

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋಪಲಾ|
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ||

ಕೊಂಡಿವೆ. ಹಂಪೆಯ ಕ್ಷೇತ್ರಪರಿಸರದಲ್ಲಿ ಅಂಥ ಶಕ್ತಿಯಿದೆ. ಆ ಭಗ್ನರಾಜಭವನಗಳ,—ಆ ಪಾಳುದೇಗುಲಗಳ,—ನಡುವೆ ನಿಂತು ಅತ್ತಿತ್ತ ದೃಷ್ಟಿಪ್ರಸಾರ ಮಾಡಿದಾಗ—"ಆಹಾ! ಎಂಥಾ ಸಾಹಸಿಗರು! ಆ ಸಾಹಸವೆಲ್ಲಿಗೆ

---

ಅಶ್ವತ್ಥಾಮ ವಿಕರ್ಣ ಘೋರ ಮಕರಾ ದುರ್ಯೋಧನಾವರ್ತಿನೀ|
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕೇ ಕೇಶವೇ ||

[ಭೀಷ್ಮ ದ್ರೋಣರೆಂಬ ದಡಗಳು, ಜಯದ್ರಥನೆಂಬ ನೀರು, ಶಕುನಿಯೆಂಬ ಹೂಳುಮಣ್ಣು, ಶಲ್ಯನೆಂಬ ಮೊಸಳೆ, ಕೃಪನೆಂಬ ಅಲೆ, ಕರ್ಣನೆಂಬ ನೆರೆ, ಅಶ್ವತ್ಥಾಮ ವಿಕರ್ಣರೆಂಬ ಮಹಾಮೀನುಗಳು, ದುರ್ಯೋಧನನೆಂಬ ಸುಳಿ –ಇಂಥಾ ಲಕ್ಷಣಗಳುಳ್ಳದ್ದು ಆ ನದಿ. ಅದನ್ನು ದಾಟಿದರಲ್ಲವೆ ಪಾಂಡವರು, ಕೇಶವನು ಬೆಸ್ತ(ಅಂಬಿಗ)ನಾಗಿರಲಾಗಿ?]

'ಕೈವರ್ತಕ' ಎಂದರೆ 'ನೀರಿನಲ್ಲಿ ಕೆಲಸಮಾಡುವವನು' ಎಂದು ಮೂಲಾರ್ಥ. ಹೀಗೆ (೧) ಮೀನುಹಿಡಿಯುವ 'ಬೆಸ್ತ' (೨) ದೋಣಿ ನಡೆಸುವ 'ಅಂಬಿಗ'—ಇಬ್ಬರೂ ಕೈವರ್ತಕರು. ಒಬ್ಬ ಮನುಷ್ಯನೇ ಎರಡು ಕೆಲಸಗಳನ್ನೂ ಮಾಡುವುದು ಅಸಾಧ್ಯವಲ್ಲ.

ಮೇಲಣ ಪದ್ಯದಲ್ಲಿ ಮುಖ್ಯ ವಿಷಯವೇನು—ಪಾಂಡವರು ಪಾರಾದದ್ದೆ? ಕೃಷ್ಣನು ಕೈವಾಡ ತೋರಿಸಿದ್ದೆ? ಕೃಷ್ಣಮಹಿಮೆಯೆ ಇಲ್ಲಿಯ ವಿಷಯವೆಂದಿಟ್ಟುಕೊಂಡರೂ, ಅದು ಆತನ ಕರುಣೆಯ ಮಹಿಮೆಯೆ ಅಥವಾ ವಿಕಟದ ಮಹಿಮೆಯೆ? ಭಕ್ತಿಪ್ರಧಾನರಾದವರು ಕೃಷ್ಣನ ಅಪಾರ ಕಾರುಣ್ಯದ ಸ್ಮರಣೆಯನ್ನು ಈ ಪದ್ಯದಲ್ಲಿ ಕಾಣಬಹುದು: ಅವರ ಕಣ್ಣಿಗೆ ಆತನು ತನ್ನ ಭಕ್ತರನ್ನು ಸಲಹಿದ್ದು ದೊಡ್ಡದು. ಆತನು ನಿಪುಣನಾದ ಅಂಬಿಗ. ಆದರೆ ತತ್ತ್ವಚಿಂತಕರು ಆತನ ಲೀಲೆಯ ಇನ್ನೊಂದು ಭಾಗವನ್ನು ಮರೆಯಲಾರರು. ಪಾಂಡವರಿಗೆ ಆದದ್ದೇನು?

"ಅಜಯೋಽಯಂ ಜಯಾಕಾರಃ"—ಇದು ಧರ್ಮರಾಜನ ಮಾತು.

ಇದಂ ತು ಮೇ ಮಹದ್ದುಃಖಂ ವರ್ತತೇ ಹೃದಿ ನಿತ್ಯದಾ ||
ನ ಹಿ ಶಾನ್ತಿಂ ಪ್ರಪಶ್ಯಾಮಿ ಘಾತಯಿತ್ವಾ ಪಿತಾಮಹಮ್ ||

ಪರಿಣಾಮದಲ್ಲಿ ಪಾಂಡವರಿಗೂ ಕೌರವರಿಗೂ ಆದ ವ್ಯತ್ಯಾಸವೇನು? ರಾಜ್ಯದಿಂದ ಇಬ್ಬರು ಪಟ್ಟ ಸುಖವೂ ಅಷ್ಟಷ್ಟರದೇ. ಸೋತವರ ಪಾಡಿಗಿಂತ ಗೆದ್ದವರ ಪಾಡು ಮೇಲೇನೂ ಆಗದೆಹೋಯಿತು. ಇಬ್ಬರಿಗೂ ವ್ಯತ್ಯಾಸವಿದ್ದದ್ದು ಬಾಳಿನ ಕಡೆಯ ಘಳಿಗೆಯಲ್ಲಿ—ಸಾವಿನಲ್ಲಿ. ಕೌರವರು ಅಳುತ್ತ ಸತ್ತರು; ಪಾಂಡವರು ಸಮಾಧಾನದಿಂದ ಸತ್ತರು. ಚಿತ್ತಸಮಾಧಾನವೇ ಭಕ್ತಿಯ ಪರಮ ಪ್ರಯೋಜನ. ಭಕ್ತಿಯ ಫಲಗಳೆರಡು ಬಗೆ: ಇಷ್ಟಸಾಧನೆ, ಕಷ್ಟಸಹನೆ. ಮೊದಲನೆಯದಕ್ಕಿಂತ ಎರಡನೆಯದಕ್ಕೆ ಸಿದ್ಧರಾಗಿರುವವರು ಜಾಣರೆಂಬುದು ಮಹಾಭಾರತದ ಫಲಶ್ರುತಿ.

ಕೃಷ್ಣನು ಪಾಂಡವರ ಪಾಲಿಗೆ ಅಂಬಿಗ,—ಮಿಕ್ಕವರ ಪಾಲಿಗೆ? ಇಲ್ಲದೆ ಅವನ ಮಾತೇ:—

ಬಂತು!! ಹೇಗೆ ಕಟ್ಟಿದ್ದು! ಹೇಗೆ ಒಡೆಯಿತು!!"—ಎಂದು ಯಾರಿಗೆ ಅನ್ನಿಸುವುದಿಲ್ಲ! ಹಾಗೆನ್ನಿಸುವುದು ವಿಷಯಾಂತರ್ಗತ 'ಧ್ವನಿ'. ಆ ಸೋಟವೇ ನೋಡುವವನ ಹೃದಯವನ್ನು ಮುಟ್ಟಿ ತಿವಿಯುತ್ತದೆ. ನಮ್ಮ ಕಾಲದಲ್ಲಿ ಅಣುಸ್ಫೋಟಕವು (ಆ್ಯಟಮ್ ಬಾಂಬು) ಜಪಾನಿನ ಹಿರೋಷಿಮ ನಾಗಸಾಕಿ ಪಟ್ಟಣಗಳ ಮೇಲೆ ಬಿದ್ದು ನಾಶನಕಾರ್ಯ ಮಾಡಿದ್ದನ್ನು ನಾವು ಪತ್ರಿಕೆಗಳಲ್ಲಿ ಓದಿದಾಗ, ಆ ಬರಿಯ ವರದಿ—ಯಾವ ವಾಕ್ಚಮತ್ಕೃತಿಯೂ ಇಲ್ಲದೆಯೇ—ನಮ್ಮ ಮನಸ್ಸುಗಳನ್ನು ಹೇಗೆ ಇರಿದು ಛಿದ್ರ ಛಿದ್ರ ಮಾಡಿಸಿತು! ಅದು ಸಂದರ್ಭಧ್ವನಿ. ಅದಕ್ಕೆ ಮಾತು ಬೇಕಾಗಿಲ್ಲ, ಅಥವಾ ಮಾತಿನ ಬಲ ಸಾಲದು. ಗಾಂಧಿಮಹಾತ್ಮರು ಐವತ್ತು ವರ್ಷ ಸ್ವಜನರಿಗೆ ಅಭ್ಯುದಯ ಮಾರ್ಗ ತೋರಿ, ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟು ಸಾಧುಜೀವನಕ್ಕೆ ಆದರ್ಶಸ್ವರೂಪರಾಗಿ ಬಾಳಿ, ಕಡೆಗೆ—

'ಸಬಕೋ ಸನ್ಮತಿ ದೇ ಭಗವಾನ್'
(ದೇವರೇ, ಎಲ್ಲರಿಗೂ ಒಳ್ಳೆಯ ಬುದ್ಧಿ ಕೊಡು)

—ಎಂದು ಮೊರೆಯಿಟ್ಟುಕೊಳ್ಳಬೇಕಾಗಿ ಬಂದದ್ದರಲ್ಲಿ ಧ್ವನಿಯಿಲ್ಲವೆ? ಅದು ಶಿಕ್ಷಾಧ್ವನಿ,—ಅವರಿಂದ ಉಪಕಾರ ಮಾಡಿಸಿಕೊಂಡವರ ಯೋಗ್ಯತೆಯನ್ನು ತೋರಿಸಿಕೊಡುವ ಎಚ್ಚರಿಕೆಯ ಧ್ವನಿ,—ಮರುಕದ ಧ್ವನಿ. ಹೀಗೆ ಪ್ರತಿಯೊಂದು ಅಸಾಧಾರಣವಾದ ವಸ್ತುಸನ್ನಿವೇಶದಲ್ಲಿಯೂ ಕರುಣಪ್ರೇರಕವಾದ, ಆತ್ಮಶೋಧನಕಾರಕವಾದ, ಆಶ್ಚರ್ಯಬೀಜವಾದ, ಅಥವಾ ಆನಂದಜನಕವಾದ ಪ್ರಚೋದನೆ ಸ್ವತಸ್ಸಿದ್ಧವಾಗಿರುತ್ತದೆ. ಕವಿ ತನ್ನ ಮಿತ ವಾಕ್ಕಿನ ನಯದಿಂದ ನಮಗೆ ಅಂಥಾ ಅನುಭವ ಪ್ರಚೋದನೆಗಳನ್ನುಂಟು ಮಾಡಿದಾಗ ಅದು ಕಾವ್ಯಧ್ವನಿಯಾಗುತ್ತದೆ.

---

ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ
ಲೋಕಾನ್ ಸಮಾಹರ್ತುಮ್ ಇಹ ಪ್ರವೃತ್ತಃ || (—ಭಗವದ್ಗೀತೆ, ೧೧.೩೨)

ಅರ್ಜುನನು ಕಂಡದ್ದೂ ಅದನ್ನೇ:—

ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ
ದಂಷ್ಟ್ರಾಕರಾಲಾನಿ ಭಯಾನಕಾನಿ || (—ಭಗವದ್ಗೀತೆ, ೧೧-೨೭)

ಕೆಲವರನ್ನು ದೋಣಿಯಲ್ಲಿ ಪಾರುಮಾಡಿಸಿದ ಹಾಗೆ ಆಡಿದ; ಹಲವರನ್ನು ಅಗಿದಗಿದು ನುಂಗಿದ. ಬೆಸ್ತನೂ ಅಲ್ಲವೆ ಕೃಷ್ಣ?

## ಅಸಾಮರ್ಥ್ಯದಲ್ಲಿ ಸಾಮರ್ಥ್ಯಕಲ್ಪನೆ

ಕವಿಯು ವಾಕ್ಪ್ರಕಾರವನ್ನು ನಿಯಂತ್ರಿಸತಕ್ಕ ಭಾಷಾ ಸಂಗತಿಗಳು ಎರಡು—

(೧) ಭಾಷೆಯ ನೈಜವಾದ ಅಸಾಮರ್ಥ್ಯ.

(೨) ಪದದ ಮಿತತೆಯಿಂದ ವಾಕ್ಕಿಗಾಗುವ ಬಲವೃದ್ಧಿ.

ಮನುಷ್ಯಭಾಷೆಯ ಸಹಜ ಶಕ್ತಿ ಅಪರಿಮಿತವಾದದ್ದಲ್ಲ: ಮಿತವಾದದ್ದು.* ಎಷ್ಟೋ ಸಂದರ್ಭಗಳಿಗೆ ಅದು ಸಾಲದೆ ಹೋಗುತ್ತದೆ. ಎಷ್ಟೋ ಆಕಾರ ಗಳಿಗೆ ಹೆಸರುಗಳಿಲ್ಲ; ಎಷ್ಟೋ ಬಣ್ಣಗಳಿಗೆ ಗೊತ್ತಾದ ಮಾತಿಲ್ಲ; ಎಷ್ಟೋ ವಸ್ತುಗಳನ್ನೂ ಎಷ್ಟೋ ಕ್ರಿಯೆಗಳನ್ನೂ ನಾವು ಅನುಕರಣ ಶಬ್ದಗಳಿಂದಲೂ ಅನುಕರಣ ಚೇಷ್ಟಿತಗಳಿಂದಲೂ ತಿಳಿಸಬೇಕಾಗುತ್ತದೆ. ಬಾಹ್ಯವಸ್ತುಗಳಿಗೇ ಹೀಗೆ ಮಾತಿನ ಬಡತನವಿರುವಾಗ, ಹೃದಯಜೀವನದ ನಾನಾ ಭಾವ ಗಳನ್ನು—ಅಲ್ಲಿಯ ಶಂಕೆ, ಸಂಕಟ, ಆಶೆ, ಕೊರಗು, ದೂರು, ತೃಪ್ತಿ, ಆನಂದ— ಈ ತೆರದ ಸಾವಿರಾರು ಅಂತರ್ವಿಕಾರಗಳನ್ನು ವರ್ಣನೆ ಮಾಡಲು ಮಾತು ದೊರೆಯದೆ ಹೋಗುವುದು ಸ್ವಾಭಾವಿಕವಾಗಿದೆ. ಅಂಥ ಕಷ್ಟದಲ್ಲಿ ನಾವು ನಮಗಿರುವ ಹಲಕೆಲವು ಮಾತುಗಳನ್ನೇ ಒಂದು ಅಸಾಧಾರಣ ರೀತಿಯಲ್ಲಿ— ಒಂದು ವಿಶೇಷಾನ್ವಯದಿಂದ—ಜೋಡಿಸಿ, ತೋಚಿದ ಉಪಮಾನಗಳನ್ನು ಹೊಂದಿಸಿ, ಅವುಗಳ ಜೊತೆಗೆ ನಮ್ಮ ಕಂಠಸ್ವರ ವಿನ್ಯಾಸವನ್ನೂ ಅಷ್ಟಿಷ್ಟು ಸೇರಿಸಿ, ಇನ್ನೂ ಸಾಲದ್ದಕ್ಕೆ ಅಂಗಾಭಿನಯವನ್ನೂ ಬೆರಸಿ, ನಮ್ಮೊಳಗಿನ ಭಾವವನ್ನು ಸ್ಪಷ್ಟಪಡಿಸಲು ಯತ್ನಿಸುತ್ತೇವೆ. ಹೀಗೆ ಸಂಗೀತ ಅಭಿನಯಗಳು ಹೃದಯಭಾಷೆಗೆ ಪರಿಪೂರಕಗಳಾಗುತ್ತವೆ. ಹೃದಯದ ಇಂಗಿತವನ್ನು ಸ್ಪಷ್ಟ ಗೊಳಿಸುವುದಕ್ಕೆಂದು ನಾವು ನಮಗೆ ತಿಳಿದಿರುವ ಮಾತುಗಳನ್ನೇ ವಿಧವಿಧ ವಾಗಿ ಜೋಡಿಸುತ್ತೇವಲ್ಲವೆ? ಆ ವಿಧಗಳಲ್ಲಿ ಧ್ವನಿಯ ವಿಧ ಒಂದು. ನಮ್ಮ

---

* ಒಂದು ಭಾಷೆಯ ಸಾಮರ್ಥ್ಯಕ್ಕೆ ಸ್ವತ ಏವ ಮಿತಿಯುಂಟೆಂಬುದನ್ನು ಕಂಡುಕೊಳ್ಳ ಬಯಸುವವರು ಆ ಭಾಷೆಗೆ ಇನ್ನೊಂದು ಭಾಷೆಯ ಉತ್ತಮ ಕಾವ್ಯವೊಂದನ್ನು ತರ್ಜುಮೆ ಮಾಡಲು ಪ್ರಯತ್ನಿಸಬೇಕು. ಸಂಸ್ಕೃತದಿಂದ ಇಂಗ್ಲಿಷಿಗೆ ಪರಿವರ್ತನೆಮಾಡುವುದರ ವಿಚಾರ ಹಾಗಿರಲಿ; ಇಂಗ್ಲಿಷಿನಿಂದ ಸಂಸ್ಕೃತಕ್ಕೆ ಮಾಡುವಲ್ಲೂ ಆ ಉಚಿತಪದಗಳ ಅಭಾವ ಗೀರ್ವಾಣವಾಣಿಯಲ್ಲೂ ಇರುವುದು ವೇದ್ಯವಾಗುತ್ತದೆ. ಸಂಸ್ಕೃತದಿಂದ ಕನ್ನಡಕ್ಕೆ ಪರಿ ವರ್ತನೆ ಮಾಡುವಾಗ ಕೂಡ ನಮ್ಮಲ್ಲಿ ತಕ್ಕ ನುಡಿಗಟ್ಟುಗಳು ಒದಗದ ಕೊರತೆ ಅನುಭವಕ್ಕೆ ಬರುತ್ತದೆ. ಹೀಗೆ ಒಂದೊಂದು ಭಾಷೆಗೂ ಯಾವುದೋ ಒಂದೆರಡು ವಿಷಯಗಳಲ್ಲಿ ಶಬ್ದ ದಾರಿದ್ರ್ಯವು ಸ್ವಾಭಾವಿಕವಾಗಿಯೇ ಇರುತ್ತದೆ.

ಭಾವವನ್ನು ಸೂಚಿಸಲು ಒಂದೆರಡು ಮಾತುಗಳನ್ನು ಆಡುವುದರಲ್ಲಿ, ಆ ಮಾತು ತಿಳಿಸಲಾಗದೆ ಉಳಿದುಕೊಂಡ ನಮ್ಮ ಭಾವವನ್ನು ನಮ್ಮ ಕೇಳುಗನೇ ಊಹಿಸಿಕೊಳ್ಳಲಾಗುವಂತೆ ಆ ಮಿತಪದಗಳನ್ನು ಒಂದು ವಿಶೇಷ ಕ್ರಮದಲ್ಲಿ ಜೋಡಿಸಿರುತ್ತೇವೆ. ಹೀಗೆ ಸಾಮಾನ್ಯ ಭಾಷೆಯ ಅಸಾಮರ್ಥ್ಯದ ವೇಳೆಯಲ್ಲಿ ಭಾಷಿತದ ಒಂದು ಅಸಾಮಾನ್ಯರೀತಿಯಿಂದ ಅದಕ್ಕೆ ಸಾಮರ್ಥ್ಯ ತರುವ ಉಪಾಯವೇ ಧ್ವನಿ. ಇದು ಭಾಷೆಯ ಕೃತಕ ಶಕ್ತಿಗಳಲ್ಲಿ ಒಂದು ಪ್ರಕಾರದ್ದು.

## ಪದಮಿತತೆ

ವಾಕ್ಯರಚನೆಯ ಇನ್ನೊಂದು ತತ್ತ್ವವು ಪದಮಿತತೆಯಿಂದ ವಾಕ್ಯಕ್ಕೆ ಬಲವೃದ್ಧಿಯೆಂಬುದು. ಅಲಂಕಾರ ಮರ್ಮವನ್ನರಿತ ಹೆಂಗಸು ದೊರಕಿದ ಆಭರಣಗಳನ್ನೆಲ್ಲ ಮೇಲೆ ಹೇರಿಕೊಳ್ಳುವುದಿಲ್ಲ; ತನ್ನ ಮೈಯ ಸೊಬಗನ್ನು ಮುಚ್ಚದೆ ಮತ್ತಷ್ಟು ಬೆಳಗುವುದಕ್ಕೆ ಯಾವ ಯಾವ ಒಡವೆ ಸಹಾಯವಾದೀತೋ ಅಷ್ಟನ್ನು ಮಾತ್ರ ಯೋಚಿಸಿ ಆರಿಸಿಕೊಂಡು ತೊಡುತ್ತಾಳೆ. ಅಲಂಕಾರದ ಮಿತತೆಯಿಂದಲೇ ಅದರ ಉದ್ದೇಶಕ್ಕೆ ಜಯವೆಂಬುದನ್ನು ಆಕೆ ಬಲ್ಲಳು. ಅದೇ 'ಎಕಾನಮಿ'—ಹಿತಮಿತ ಯೋಜನೆ. ಚಿತ್ರಕಲಾಭಿಜ್ಞನು ತನ್ನ ಮನೆಯನ್ನು ಪಟದಂಗಡಿ ಮಾಡಿಕೊಳ್ಳುವುದಿಲ್ಲ. ತನ್ನ ಗೋಡೆಯ ಅಥವಾ ಮೇಜಿನ ಅಳತೆಯನ್ನು ನೋಡಿ ಅದಕ್ಕೆ ತಕ್ಕಂತೆ, ಮತ್ತು ತನ್ನ ಮನೋಭಾವಕ್ಕೊಪ್ಪುವಂತೆ, ಒಂದೋ ಎರಡೊ ಭಾವದ್ಯೋತಕ ಚಿತ್ರಗಳನ್ನು ಸಾವಧಾನವಾಗಿ ಹುಡುಕಿ ಆರಿಸಿ ತಂದಿರಿಸಿಕೊಳ್ಳುತ್ತಾನೆ. ಜಪಾನಿನಲ್ಲಿ ಸೊಗಸರಿತ ಜನರು ವರ್ಷವೆಲ್ಲ ಒಂದೇ ಪಟವನ್ನು ನೋಟಕ್ಕಿರಿಸದೆ, ವಾರಕ್ಕೊಂದು ಸಲ ತಮ್ಮ ಮನೆಯ ಮುಖ್ಯ ಚಿತ್ರಪಟವನ್ನು ಬದಲಾಯಿಸುತ್ತಾರಂತೆ! ಅದು ಮಿತಿಜ್ಞತೆ. ಮಾತು ಅತಿಯಾದಷ್ಟೂ ವಾಕ್ಯ ಜಳ್ಳು. ಮಾತು ಆರಿಸಿ ಹೊಂದಿಸಿದ್ದಾದಂತೆ ವಾಕ್ಯ ಹುರಿಗಟ್ಟುತ್ತದೆ. ಮಿತತೆಯೇ ಬಲ; ಬಾಹುಳ್ಯವೇ ದೌರ್ಬಲ್ಯ. ಪದಸಂಪತ್ತು ಎಷ್ಟಿದ್ದರೆ ಅತಿ; ಎಷ್ಟಾದರೆ ಅಲ್ಪ; ಎಷ್ಟು ಮಾತ್ರವಾದರೆ ಹಿತ, ಮಿತ, ಸರಿ—ಎಂಬ ಔಚಿತ್ಯದ ಅರಿವೇ ಕವಿಯ ಕರ್ಮವಿಧಾನದ ಜಯಮರ್ಮ.

## ಶಬ್ದಸ್ತೋಮ

ಏವಂ ಚ, ಧ್ವನಿಯೆಂಬುದು ಕವಿಯ ಒಂದು ಪದಪ್ರಯೋಗದ ಉಪಾಯ,—ಒಂದು ಮಿತಾಮಿತ ವಿವೇಕದ ಫಲಿತಾಂಶ ಎಂದು ಸಿದ್ಧ

ಪಾಯಿತು. ಆದರೆ ಪದದ ಮಿತೋಪಯೋಗದಿಂದಲೇ ಕಾವ್ಯಕ್ಕೆ ಶಕ್ತಿ ಎಂಬ ಮಾತು ಸಾರ್ವತ್ರಿಕ ಸೂತ್ರವೇನೂ ಆಗಲಾರದು. ಪದಮಿತತೆ ಕೆಲವು ಕಡೆ ಜಯಸಾಧಕವಾದರೆ ಪದಸ್ತೋಮ ಇನ್ನು ಕೆಲವೆಡೆ ಜಯಪ್ರದವಾಗುವು ದುಂಟು. ಕಾವ್ಯವುಂಟುಮಾಡುವ ಪರಿಣಾಮದಲ್ಲಿ ಸೂಚ್ಯಗ್ರತೆ ಸಾಧಿಸಬಹು ದಾದ ಕಾರ್ಯವೊಂದಿರುವಂತೆ ಗಾತ್ರಬಾಹುಳ್ಯ ಸಾಧಿಸಲಾಗುವ ಕಾರ್ಯ ವೊಂದಿರುತ್ತದೆ. ವಾಲ್ಮೀಕಿ ವ್ಯಾಸರುಗಳ ಕಾವ್ಯಗಳಲ್ಲಿ ಇದನ್ನೂ ಕಾಣ ಬಹುದು. ಅವರು ಪದಗಳನ್ನು ರಾಶಿರಾಶಿಯಾಗಿ ಹೇರುತ್ತಾರೆ; ಹಾಕಿದ ಪದವನ್ನೇ ತಿರುಗಿ ತಿರುಗಿ ಹಾಕುತ್ತಾರೆ; ಮಾತುಗಳ ಮೇರುಮಂದರಗಳನ್ನೇ ಕಟ್ಟುತ್ತಾರೆ. ಅದೇನು ವ್ಯರ್ಥಶ್ರಮವಲ್ಲ. ಅವರ ರೀತಿ ಪ್ರಕೃತಿಯದು. ಅರಣ್ಯವನ್ನು ಸೃಜಿಸಹೊರಟ ಪ್ರಕೃತಿಯು 'ಧ್ವನಿ' ಸಾಕೆಂದು ಇಲ್ಲೊಂದು ಮಾದರಿಯ ಗಿಡವನ್ನಿರಿಸಿ, ವಟಾಶ್ವತ್ಥ ದೇವದಾರುವೃಕ್ಷಗಳ ಮಹಾಸಮು ದಾಯವನ್ನು ನೀವೇ ಊಹಿಸಿಕೊಳ್ಳಿರೆನ್ನುವುದಿಲ್ಲ; ಸಾವಿರ ಅತ್ತಿಯ, ಹತ್ತು ಸಾವಿರ ಆಲದ, ಲಕ್ಷ ತಾಳೆಯ ಹೆಮ್ಮರಗಳನ್ನು ನಿಬಿಡವಾಗಿ ಎಬ್ಬಿಸುತ್ತಾಳೆ. ಪರ್ವತವನ್ನು ಜನ ಊಹೆಯಿಂದ ಕಟ್ಟಿಕೊಳ್ಳಲೆಂದು ಇಲ್ಲೊಂದು ಗುಂಡು, ಅಲ್ಲೊಂದು ಬಂಡೆ ನಿರ್ಮಿಸಿ ತೆಪ್ಪಗಾಗುವುದಿಲ್ಲ; ಬಂಡೆ ಕೋಡುಗಲ್ಲುಗಳನ್ನು ಮೈಲಿ ಮೈಲಿದೂರ ಮೇಲೆ ಮೇಲೆ ಪೇರಿಸುತ್ತಾಳೆ. ವಾಲ್ಮೀಕಿಯು ದಂಡ ಕಾರಣ್ಯವನ್ನೂ ವ್ಯಾಸನು ದ್ವೈತವನವನ್ನೂ ಸೃಷ್ಟಿಸಿರುವುದು ಹಾಗೆ.

## ಗಾತ್ರಮಹಿಮೆ

ಮಿತಪದದ ಗೂಢಧ್ವನಿಯಲ್ಲಿ ಒಂದು ಶಕ್ತಿಯಿದ್ದರೆ ಮಹಾಪದ ಸಮುದಾ ಯವು ಕಟ್ಟುವ ವಿಸ್ತಾರ ಪರಿಸರ ವಾತಾವರಣದಲ್ಲಿಯೂ ಒಂದು ಶಕ್ತಿಯಿರು ತ್ತದೆ. ಬೇಲೂರು ಹಳೇಬೀಡುಗಳ ಶಿಲ್ಪದ ವಿಶೇಷಗುಣ ವಿಗ್ರಹದ ಪೃಥಗಂಗ ಸೌಂದರ್ಯ : ಅದನ್ನು ಹತ್ತಿರ ನಿಂತು ಸಾವಧಾನವಾಗಿ ನೋಡಬೇಕು. ಶ್ರವಣಬೆಳುಗೊಳ ಬಾದಾಮಿಗಳ ಶಿಲ್ಪದ ವಿಶೇಷಗುಣ ಸಮವಾಯ ಸೌಂದರ್ಯ; ಅದು ದೂರದಿಂದಲೇ—ಒಂದು ಕ್ಷಣದಲ್ಲಿಯೇ—ಪರಿಣಾಮ ವುಂಟುಮಾಡಬಲ್ಲದ್ದು. ಆದರೆ ಎರಡು ಪರಿಣಾಮಗಳೂ ಸ್ವಭಾವದಲ್ಲಿ ಬೇರೆ ಬೇರೆ. ಸಮುದ್ರವನ್ನು ನೋಡಿದಾಗ ಮನಸ್ಸಿನ ಮೇಲೆ ಆಗುವ ಪರಿಣಾಮವು ಕೆರೆಯನ್ನು ನೋಡಿದಾಗ ಆಗಲಾರದು ; ಬಾಬಾಬುಡನ್‌ಗಿರಿಯ ಮೇಲಿನಿಂದ ಜಾಗರಕಣಿವೆಯನ್ನು ನೋಡುವಾಗ ಆಗುವ ಪರಿಣಾಮವು ಲಾಲ್‌ಬಾಗ್ ತೋಟವನ್ನು ನೋಡುವಾಗ ಆಗದು. ಹಂಪೆಯ ಗುಡಿಗಳ ಗೋಡೆಗಳನ್ನೂ

ಮಧುರೆ ರಾಮೇಶ್ವರಗಳ ಗೋಪುರಗಳನ್ನೂ ನೋಡುವಾಗ ಮನಸ್ಸಿನ ಮೇಲೆ ಆಗುವ ಪರಿಣಾಮವು ಸಣ್ಣ ಕಟ್ಟಡವನ್ನು ನೋಡಿದಾಗ ಆಗಲಾರದು. ಅದು ಅಲಂಕಾರಶಿಲ್ಪನಿಬಿಡವಾಗಿದ್ದರೂ ಬೃಹದಾಕಾರವೇ ಒಂದು ಶಕ್ತಿಸ್ಥಾನ. ಆದರದು ಸಮವಾಯ ಶಕ್ತಿ—ಗುಂಪೊಟ್ಟಿನ ಶಕ್ತಿ. ಚಿಟ್ಟೆಹುಳು ತನ್ನ ರೆಕ್ಕೆಯನ್ನು ನೋಡಿರೆಂದರೆ, ಆನೆ ತನ್ನ ಸೊಂಡಿಲನ್ನು ನೀಡೀತು. ಅಣುವಿನ ಸೊಗಸೊಂದು; ಬೃಹತ್ತಿನ ಸೊಗಸೊಂದು. ಕಾವ್ಯಕ್ಕೆ ಎರಡೂ ಬೇಕು. ಕಾವ್ಯದ ಗಾತ್ರವನ್ನು ಮರೆತು, ಕೇವಲ 'ಧ್ವನಿ' ಎಂದು ಭ್ರಮಿಸುವವರು ದೇಹವಿಲ್ಲದೆ ಪ್ರಾಣವಿರಬೇಕೆನ್ನುವವರು. ಸಾರ್ಥಕಜೀವನಕ್ಕೆ ಪಟುವಾದ ದೇಹ, ದಕ್ಷವಾದ ಚೈತನ್ಯ ಎರಡೂ ಬೇಕು.

## ಭಾವಶಿಲ್ಪ

ಕವಿಕೃತಿಯನ್ನು ರಸಪಾಕವೆಂದಂತೆ ಭಾವಶಿಲ್ಪವೆಂದು ಕರೆಯುವುದೂ ಸರಿಯಾಗುತ್ತದೆ. ಕವಿಯು ರಾಜ್ಯಗಳನ್ನೂ ಊರುಗಳನ್ನೂ ಕಟ್ಟುತ್ತಾನೆ; ಅಲ್ಲಿ ಬಗೆಬಗೆಯ ಸ್ತ್ರೀಪುರುಷರನ್ನು ಓಡಾಡಿಸಿ ಜೀವಕಳೆ ತುಂಬುತ್ತಾನೆ. ಆ ಚಿತ್ರನಿರ್ಮಿತಿಯಲ್ಲಿ ಒಂದು ಅಂಗಪ್ರತ್ಯಂಗಗಳ ಅನುರೂಪತೆಯಿರಬೇಕು; ಭಾಗ ವಿಭಾಗಗಳಿಗೆಲ್ಲ ಒಂದು ಸಮಸೂತ್ರತೆಯೂ ಒಂದು ಔಚಿತ್ಯಯೋಗವೂ ಇರಬೇಕು; ಇಲ್ಲಿಯ ವ್ಯಕ್ತಿಚೇಷ್ಟೆಗಳಲ್ಲಿ ಒಂದು ಸಹಜತೆಯ ತೋರಿಕೆ ಇರಬೇಕು. ಆ ಸಹಜತಾಪ್ರತಿಭಾಸವಿಲ್ಲದಿದ್ದಲ್ಲಿ ಕವಿಕೃತಿ ನಮ್ಮನ್ನು ಸ್ವಾಧೀನಪಡಿಸಿಕೊಳ್ಳಲಾರದು. ಅದಾಗದ ಕೃತಿ 'ನಿಷ್ಫಲಕ್ಲೇಶಮೇವ'.

## ಅಲಂಕಾರ

ಭಾಷೆಯ ನೈಜವಾದ ನ್ಯೂನತೆ ದುರ್ಬಲತೆಗಳನ್ನು ಪರಿಹರಿಸುವ ಸಾಧನಗಳಲ್ಲಿ—ಭಾಷೆಯ ಕೃತಕ ಶಕ್ತಿಮೂಲಗಳಲ್ಲಿ—ಇನ್ನೆರಡು ಅಲಂಕಾರ ಛಂದಸ್ಸುಗಳು.

'ಅಲಂಕಾರ' ಎಂದರೆ 'ಸಾಲುವಂತೆ ಮಾಡುವುದು'; 'ಸಾಕಾಗದ ಸ್ಥಿತಿಯನ್ನು ಹೋಗಲಾಡಿಸುವುದು—ನ್ಯೂನಾಂಶವನ್ನು ಭರ್ತಿಮಾಡುವುದರಿಂದ' ಎಂದರ್ಥ ಮಾಡಬಹುದು. ('ಅಲಂ'=ಸಾಕು.) ಒಂದು ಅಂಗಭಾವದ ಚೆಲುವು ಚೆನ್ನಾಗಿ ಎದ್ದು ಕಾಣಿಸದಂತೆ ಇದ್ದರೆ ಅಥವಾ ಒಂದು ಅವಯವ ಬರಿಬಿಡುವಾಗಿರುವಂತೆ ತೋರಿದರೆ, ಆಗ ಚತುರೆಯಾದ ಸುಂದರಿ ಆ ಪ್ರದೇಶದಲ್ಲಿ ಒಂದು ಒಡವೆಯನ್ನೋ ಹೂವನ್ನೋ ಬೊಟ್ಟನ್ನೋ ಇಟ್ಟು

ಆ ಕೊರತೆಯನ್ನು ಹೋಗಲಾಡಿಸಿಕೊಳ್ಳುತ್ತಾಳೆ. ಹಾಗೆಯೇ ಕವಿ ತನ್ನ ಒಂದು ವಸ್ತುವಿನ ಸ್ವಭಾವವೋ ಒಂದು ಸಂಗತಿಯ ಸ್ವರೂಪವೋ ತಕ್ಕಷ್ಟು ಸ್ಫುಟವಾಗಿಲ್ಲವೆನಿಸಿದಾಗ ಒಂದು ಉಪಮಾನವನ್ನೊಡ್ಡುತ್ತಾನೆ. ಅದು ಪಂಜಿನಂತೆ ಉಪಮೇಯದ ಮೇಲೆ ಬೆಳಕು ಬೀರಿ, ಅದರ ಸಂದು ಮೂಲೆಗಳನ್ನೆಲ್ಲ ಬೆಳಗಿಸುತ್ತದೆ. ಮನೋಮಂದಿರದ ಮೊಡಕಿನಲ್ಲಿರುವ ಚೇಳು, ಮಬ್ಬಿನಲ್ಲಿ ನಿದ್ದೆ ಮಾಡುತ್ತಿರುವ ಹಸುಳೆ, ಬಿಲದಲ್ಲಿಯ ಇಲಿ, ಬಾಗಿಲ ಹಿಂದಿನ ಚೀಲಿ—ಇಂಥವುಗಳನ್ನೆಲ್ಲ ತೋರಿಸಿಕೊಡುವುದು ಉಪಮಾನ ರೂಪಕ ಉತ್ಪ್ರೇಕ್ಷೆಗಳ ಕೆಲಸ. ಕಾವ್ಯಲೋಕದಲ್ಲಿಯ ಅಸ್ಪಷ್ಟಾಂಶಗಳನ್ನು ಸ್ಪಷ್ಟವಾಗಿಸುವುದು,—ಅಪ್ರಸಿದ್ಧಾಂಶಗಳನ್ನು ಪ್ರಸಿದ್ಧಿಗೆ ತರುವುದು—ದುರ್ಬಲಾಂಶಗಳನ್ನು ಪ್ರಬಲಗೊಳಿಸಿ ತೋರಿಸುವುದು—ಅಲಂಕಾರದ ಉಪಕಾರ.

## ಅರ್ಥಲಾವಣ್ಯ

ಕವಿ ಒಂದೊಂದು ಸಂದರ್ಭದಲ್ಲಿ ಮಾಡಿರುವ ಪದಯೋಜನೆಯಿಂದ ಎರಡು ಮೂರು ಬೇರೆ ಬೇರೆ ಅರ್ಥಗಳು ಹೊರಡುತ್ತಿರುವುದುಂಟು. ಇಂಥಾದ್ದನ್ನು ಶ್ಲೇಷೆ ಎಂದು ಕರೆಯುತ್ತಾರೆ. ಆ ಎರಡು ಮೂರರ್ಥಗಳೂ ಕವಿಯ ಮನಸ್ಸಿನಲ್ಲಿದ್ದುವೆ ಅಥವಾ ವ್ಯಾಖ್ಯಾನಕಾರನ ಯುಕ್ತಿಯಿಂದ ಹುಟ್ಟಿದುವೆ? ಎರಡು ತೆರದ ಅರ್ಥಯೋಜನೆಗಳೂ ಸಂಭಾವ್ಯಗಳೇ ಆಗಿದ್ದರೂ ನಾವು ಗ್ರಹಿಸಬೇಕಾದದ್ದು ಕವಿವಚನದ ಋಜುವಾದ ಅರ್ಥಸಂತತಿಯನ್ನು, ವ್ಯಾಖ್ಯಾತೃವಿನ ಅತಿಯುಕ್ತಿಯನ್ನಲ್ಲ. ವ್ಯಾಖ್ಯಾನವು ನಮಗೆ ಉಪಕಾರಿಯೇ ಹೌದು. ಆದರೆ ಅದನ್ನು ನೋಡುವಾಗ ವ್ಯಾಖ್ಯಾತೃವಿನ ಅರ್ಥಕಲ್ಪನೆಯಲ್ಲಿ ಅತಿಯುಕ್ತಿ ಯಾವುದು? ಸಹಜ ಯಾವುದು—ಎಂಬುದನ್ನು ನಾವೇ ಸ್ವತಃ ವಿಮರ್ಶೆಮಾಡಿ ನೋಡಬೇಕು. ಮಾತುಗಳನ್ನು ಎಳೆದಾಡದೆ, ತಿರಿಚದೆ, ಸ್ವಾಭಾವಿಕಮಾರ್ಗದಲ್ಲಿ ನೋಡಿದಾಗ ಎರಡು ಮೂರರ್ಥಗಳು ಹೊಳೆದು, ಅವು ವಸ್ತುಸಂದರ್ಭಕ್ಕೆ ಪ್ರತಿಕೂಲವಾಗದೆ, ಅನ್ಯೋನ್ಯವಿರುದ್ಧಗಳಾಗದೆ, ಅನುಕೂಲವಾಗಿಯೇ ಕಂಡಲ್ಲಿ, ಆ ಎರಡು ಮೂರರ್ಥಗಳೂ ಕವಿಯ ದೃಷ್ಟಿಯಲ್ಲಿದ್ದುವೆಂದು ನಾವು ಗ್ರಹಿಸುವುದರಲ್ಲಿ ದೋಷವಿಲ್ಲ. ಅದು ಕಾವ್ಯದಲ್ಲಿ ಗುಣವೇ. ಅಂಥಾ ಕೂಟರುಚಿಯೇ ಅರ್ಥಲಾವಣ್ಯ. ಒಂದೇ ವಜ್ರದಿಂದ ವರ್ಣಚ್ಛಾಯೆ ಎರಡು ಮೂರು ಥಳಥಳಿಸುವಂತೆ—ಕೆಲವು ನಕ್ಷತ್ರಗಳು ಎರಡು ಮೂರು ತರಳಕಾಂತಿಗಳನ್ನು ಬೀರುವಂತೆ—ಒಂದು ಚಮತ್ಕಾರದ ವಾಕ್ಪ್ರಕಾರವು ಎರಡು ಮೂರು ಪರಸ್ಪರ ಪೋಷಕಾರ್ಥಗಳನ್ನು ಏಕಕಾಲದಲ್ಲಿ ಭಾಸಗೊಳಿಸುತ್ತಿರಬಹುದು.

## ಛಂದೋನರ್ತನ

ಛಂದಸ್ಸು ಭಾಷೆಯನ್ನು ಸಂಗೀತದ ಕಡೆಗೊಯ್ದು ಆ ನರ್ತನಗತಿಯಿಂದ ಭಾಷೆಗೆ ಒಂದು ಶಕ್ತಿಯನ್ನು ಉತ್ಪತ್ತಿಮಾಡಿಕೊಡುತ್ತದೆ. ಅಕ್ಷರದಲ್ಲಿ ಒಂದು ಶ್ರವಣ ಗ್ರಹಣ ಶಕ್ತಿಯುಂಟಲ್ಲವೆ? ಆ ಶಕ್ತಿಯು ಪದ್ಯರೂಪದಲ್ಲಿ ಹರಿದಾಗ ತರಂಗವಿನ್ಯಾಸವನ್ನು ತಾಳುತ್ತದೆ. ಹಾಗೆ ಅದು ಶ್ರೋತೃವಿನ ಮನಸ್ಸಿಗೆ ಉದ್ರೇಕಕಾರಿಯಾಗುತ್ತದೆ. ಅದರಿಂದ ಭಾವೋದ್ಬೋಧನೆ,—ರಸಾವಿರ್ಭಾವ. ಪದ್ಯದ ದಶೆಯಿಂದ ಭಾಷೆ ಮುಂದಕ್ಕೆ ಸರಿದರೆ ಅದು ಹಾಡು,—ಸಂಗೀತ. ಆಗ ಅಕ್ಷರದ ನಾದಶಕ್ತಿಯು ಪರಾಕಾಷ್ಠದಶೆಗೆ ಬರುತ್ತದೆ. ಆಗ ಇನ್ನೂ ತೀವ್ರವಾದ ರಸಪ್ರಕರ್ಷ. ಯಾವ ಕಾರಣದಿಂದ ವಾಕ್ಯವು ಪದ್ಯವಾಗುತ್ತದೆಯೋ ಅದೇ ಕಾರಣದಿಂದ ಪದ್ಯವು ಗೀತೆಯಾಗುತ್ತದೆ. ನಾದದಿಂದ ಪದಕ್ಕೆ ಬಲ, ಪದದಿಂದ ನಾದಕ್ಕೆ ಬಲ. ರಾಗದಿಂದ ಹೃದಯದಲ್ಲುಕ್ಕುವ ರಸವು ಹಾಲಾಗುತ್ತದೆ. ಪದದಿಂದ ಬುದ್ಧಿಯಲ್ಲೇಳುವ ಅರ್ಥವು ಶಾವಿಗೆಯಾಗುತ್ತದೆ—ಹೀಗೆ ಛಂದಸ್ಸಂಗೀತಗಳ ಉಪಕಾರ ಕಾವ್ಯಕ್ಕೆ. ಕೇವಲ ಭಾಷೆಗೆ ಇಲ್ಲದ ಒಂದಾನೊಂದು ಭಾವೋದ್ದೀಪನ ಶಕ್ತಿ ಅದಕ್ಕೆ ಪದ್ಯಾಕಾರದಿಂದಲೂ ಸಂಗೀತದ ಸಾಹಚರ್ಯದಿಂದಲೂ ಬರುತ್ತದೆ. ಲೋಕದಲ್ಲಿ ಎಲ್ಲ ಮಹಾಕಾವ್ಯಗಳೂ ಮೊದಲು ಗೇಯರೂಪದಲ್ಲಿ ಹುಟ್ಟಿದುವು. ಶ್ರವಣಾಕರ್ಷಣೆಯೇ ಪದ್ಯದಲ್ಲಿ ಅಪೇಕ್ಷಣೀಯವಾದ ಮೊದಲನೆಯ ಗುಣ. ಅದನ್ನೇ ಕಾಳಿದಾಸನು 'ಶಾಕುಂತಲ'ದ ಪ್ರಸ್ತಾವನೆಯಲ್ಲಿ 'ಶ್ರುತಿಪ್ರಸಾದನ'ವೆಂದು ಕರೆದಿದ್ದಾನೆ.

## ನಿರ್ಬಂಧದಿಂದ ಬಲವೃದ್ಧಿ

ಛಂದೋಬದ್ಧವಾಕ್ಯದಲ್ಲಿ ಬಹುಶಃ ಇನ್ನೊಂದು ಗುಣ ಕಾಣಬರುತ್ತದೆ. ಪದಮಿತತೆಯೇ ವಾಕ್ಯಬಲ ಎಂದು ಮೇಲೆ ಹೇಳಿದೆವಲ್ಲವೆ? ಛಂದಸ್ಸು ಕವಿಗೆ ಮಿತತೆಯನ್ನು ನಿರ್ಬಂಧವಾಗಿಸುತ್ತದೆ. ಲೆಕ್ಕಾಚಾರವಿಲ್ಲದೆ, ಹೇಗೆಂದರೆ ಹಾಗೆ ಅಳ್ಳಳ್ಳಕವಾಗಿ ಐವತ್ತರವತ್ತು ಮಾತುಗಳಲ್ಲಿ ನಾವು ಹೇಳುತ್ತಿದ್ದ ವಿಷಯವನ್ನು, ಪದ್ಯವು ಲೆಕ್ಕಮಾಡಿದ ಹತ್ತಿಪ್ಪತ್ತು ಮಾತುಗಳಲ್ಲಿ ಬಿಕ್ಕಟ್ಟಿನಿಂದ ಹೇಳೆನ್ನುತ್ತದೆ. ಅದರಲ್ಲಿಯೂ ಕನ್ನಡದ ಪಾದ ದ್ವಿತೀಯಾಕ್ಷರಪ್ರಾಸದ ನಿಯಮವು ಮಾತು ಒಣಹುಲ್ಲಿನ ಹಗ್ಗವಾಗುವುದನ್ನು ತಪ್ಪಿಸುತ್ತದೆ. ಆದರೆ ಪದ್ಯರೂಪದಲ್ಲಿ ಜಳ್ಳು ಹುಟ್ಟುವುದು ಸಾಧ್ಯವಿಲ್ಲವೆಂದು ಯಾರೂ ಅಭಿಪ್ರಾಯ

ಇಟ್ಟುಕೊಂಡಿಲ್ಲ. ಕನ್ನಡದ ಪ್ರಾಸಬದ್ಧ ಪದ್ಯರಾಶಿಯಲ್ಲಿ ಜೊಂಡುಕಗ್ಗವಿಲ್ಲ ವೆಂದು ಯಾರೂ ಹೇಳಲಾರರು. ಆದರೆ ಆ ಜಳ್ಳು ಜೊಂಡುಗಳನ್ನು ತಯಾರು ಮಾಡಿದ ಕವಿಗಳು ಛಂದೋನಿಯಮ ಪ್ರಾಸನಿಯಮಗಳನ್ನೂ ಬಿಟ್ಟುಬಿಟ್ಟಿದ್ದ ದ್ದರೆ ಇನ್ನೂ ಏನೇನನ್ನು—ಇನ್ನೂ ಎಷ್ಟೆಷ್ಟನ್ನು—ನಮ್ಮ ಸಾಹಿತ್ಯಭಂಡಾರ ದಲ್ಲಿ ತುಂಬಿಸಿಬಿಟ್ಟಿದ್ದಾರು ಎಂಬುದನ್ನು ನಾವು ಯೋಚಿಸಬೇಕು. ಹಾಗೆ ಯೋಚಿಸಿ ನೋಡಿದರೆ ಛಂದಶ್ಶಾಸ್ತ್ರವು ನಮ್ಮ ಸಾಹಿತ್ಯದ ಪಾಲಿಗೆ ಎಂಥ ದೊಡ್ಡ ಆಪನ್ನಿವಾರಕವಾಗಿ ನಿಂತಿದೆ ಎಂಬುದು ಮನಸ್ಸಿಗೆ ಗೋಚರ ವಾದೀತು. ಆದರೆ ಛಂದೋನಿಯಮವು ಸತ್ಕಾವ್ಯೋದಯಕ್ಕೆ ಪ್ರತಿಬಂಧಕ ವಾಗಿಲ್ಲವೆಂಬುದಕ್ಕೂ ನಮ್ಮ ಸಾಹಿತ್ಯಭಂಡಾರ ಸಾಕ್ಷ್ಯಕೊಡಬಲ್ಲದ್ದಾಗಿದೆ. ಪಂಪ ರನ್ನರು ಇಲ್ಲಿ ಸಾಕ್ಷಿ.

## ಹೃದಯವೆ, ಬುದ್ಧಿಯೆ?

ಕವಿಯು ಸಹಜಶಕ್ತಿಯಾದ ಕಲ್ಪನಸ್ಫೂರ್ತಿಯೆಂಬ ವ್ಯಕ್ತಿವೈಶಿಷ್ಟ್ಯಮಹಿ ಮೆಯ ಜೊತೆಗೆ ಸೇರುವ ಇತರ ಕಾವ್ಯಸಾಮಗ್ರಿ ಮುಖ್ಯವಾಗಿ ನಾಲ್ಕು ವಿಧವೆಂದು ಹೇಳಿದೆ:—(೧) ಅಕ್ಷರಶಕ್ತಿ ಅಥವಾ ಶ್ರುತಿಪ್ರಸಾದನ, (೨) ಪದಶಕ್ತಿ ಅಥವಾ ಅರ್ಥಪ್ರಾಪಕತೆ, (೩) ಭಾವರಸ ಪ್ರವಾಹ ಅಥವಾ ಹೃದಯದ ಆವೇಶ, (೪) ಪರ್ಯಾಲೋಚನಪ್ರಭೆ ಅಥವಾ ಬುದ್ಧಿಯ ಜಿಜ್ಞಾಸೆ. ಇವುಗಳಲ್ಲಿ ಮೊದಲಿನ ಎರಡನ್ನು ಕುರಿತು ಮೇಲೆ ಒಂದಿಷ್ಟು ವಿಚಾರಮಾಡಿದ್ದಾಗಿದೆ. ಮಿಕ್ಕೆರಡನ್ನು ಕುರಿತು ಹೇಳಬೇಕಾದ ಮಾತು ಒಂದಿದೆ. ಕಾವ್ಯವು ರಸಮಯ ವಾಕ್ಯವೆಂಬುದು ಸರ್ವಸಮ್ಮತವಾದ ಅಭಿ ಪ್ರಾಯ. ಆದರೆ ಆ ರಸಘನದ ಗರ್ಭದಲ್ಲಿ ಬುದ್ಧಿಬೀಜ ಅಷ್ಟಿಷ್ಟು ಇರಬೇಕಾದ್ದೆ, ಅಲ್ಲವೆ?—ಈ ವಿಚಾರದಲ್ಲಿ ಕಾವ್ಯವಿಮರ್ಶಕರ ಅಭಿಪ್ರಾಯವು ಏಕಮುಖ ವಾಗಿಲ್ಲ. ಈಗ ಇಲ್ಲಿ ಬರೆಯುತ್ತಿರುವವನ ಅಭಿಪ್ರಾಯದಲ್ಲಿ, ಕಾವ್ಯಕ್ಕೆ ಬುದ್ಧಿ ಸಂಪರ್ಕವು ಗ್ರಾಹ್ಯಮಾತ್ರವಲ್ಲ, ಆವಶ್ಯಕವೇ ಆದದ್ದು. ಬುದ್ಧ್ಯಂಶವ್ಯಾಪನೆ ಯಿಲ್ಲದ ಕೇವಲ ಭಾವೋದ್ಗಾರವು—ತುಂಟ ಹುಡುಗರ ರಂಪು ರಗಳೆಯಂತೆ,— ಅರೆನಿದ್ದೆಯವನ ಕನವರಿಕೆಯಂತೆ,—ಅರುಳುಮರುಳಿನ ಅಳುನಗುಗಳಂತೆ,— ಅರ್ಥವಿಲ್ಲದ್ದಾದೀತು. ಕಾವ್ಯದ ಉತ್ತಮೋತ್ತಮ ಪ್ರಯೋಜನವು ಜೀವ ಸಂಸ್ಕಾರವೆಂಬುದನ್ನು ನಾವು ಗಮನದಲ್ಲಿಟ್ಟುಕೊಂಡರೆ,—ಕಾವ್ಯವು ಜೀವನ ಪಥಕ್ಕೆ ಜ್ಯೋತಿಯಾಗಬೇಕೆಂಬುದು ನಮ್ಮ ಅಪೇಕ್ಷೆಯಾಗಿದ್ದರೆ,—ಅದರಲ್ಲಿ ಜಿಜ್ಞಾಸಾಪಾವಕನಿದ್ದಲ್ಲದೆ ಉದ್ದೇಶ ಸಾಧನೆಯಾಗದೆಂಬುದು ಸ್ಪಷ್ಟವಾಗು

ತ್ತದೆ. ಪಾವಕನಲ್ಲಿ ಬಿಸಿಯೂ ಬೆಳಕೂ ಹೇಗೆ ಸೇರಿಕೊಂಡಿರುತ್ತವೆಯೋ,—ಸೂರ್ಯರಶ್ಮಿಯಲ್ಲಿ ದೀಪ್ತಿ ಉಷ್ಣಗಳೆರಡೂ ಹೇಗೆ ಒಂದಾಗಿರುತ್ತವೆಯೋ,—ಕಾವ್ಯದಲ್ಲಿ ಹೃದಯಕಾರ್ಯ ಬುದ್ಧಿಕಾರ್ಯಗಳೆರಡೂ ಹಾಗೆ ಏಕೀಭವಿಸುತ್ತವೆ. ವಾಸ್ತವವನ್ನು ಗಮನಿಸುವುದಾದರೆ, ಒಂದೇ ಅಂತಃಕರಣದ್ರವ್ಯವೇ ಕ್ರಿಯಾವಸ್ಥೆಗಳ ಭೇದದಿಂದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಮೊದಲಾದ ನಾಲ್ಕಾರು ಹೆಸರುಗಳನ್ನು ಪಡೆದಿರುತ್ತದೆ. ಮೂಲವಸ್ತು ಒಂದು; ಅದರ ಆಕಾರ ನಾಲ್ಕು. ಕಾವ್ಯಶರೀರಕ್ಕೆ ರಸವೇ ರಕ್ತವೆನ್ನುವುದಾದರೆ, ಕಥಾಸಂದರ್ಭಗಳೇ ಅದರ ಮಾಂಸಖಂಡಗಳು, ವರ್ಣನೆಗಳೇ ಅದರ ಚರ್ಮ, ಬುದ್ಧಿವಿಚಾರವೇ ಅದಕ್ಕೆ ಒಳಮೂಳೆಗಳು. ರಸವೇ ಕಾವ್ಯದ ಮುಖವೆಂಬುದಾದರೆ ಮನನವೇ ಅದರಲ್ಲಿ ಕಣ್ಣೆನ್ನಬಹುದು. ಮನನವು ಬುದ್ಧಿಕ್ರಿಯೆ—ಅದು ಆಲೋಚನೆ ವಿಮರ್ಶನೆ ಜಿಜ್ಞಾಸೆ ಅನುಧ್ಯಾನಗಳ ರೂಪವಾದದ್ದು.

## ರಸ-ಮನನಗಳ ಕಾವ್ಯ

ಭಾವರಸಗ್ರಂಥಿಯು ಕಾವ್ಯಹಾರದ ಮುತ್ತು; ಮನನಗ್ರಂಥಿಯು ಅದರ ಹವಳ. ರತ್ನಾಭರಣದಲ್ಲಿ ವಜ್ರವೂ ಮಾಣಿಕ್ಯವೂ ಇರುವಂತೆ—ಅವೆರಡೂ ಅನ್ಯೋನ್ಯ ಪರ್ಯಾಯಕ್ರಮದಲ್ಲಿ ಬರತಕ್ಕವು. ಸೂರ್ಯಪ್ರಭೆಯಲ್ಲಿ ಒಂದು ಭೂತಕನ್ನಡಿಯನ್ನು ಹಿಡಿದಾಗ ಕಿರಣಗಳು ಆ ಕನ್ನಡಿಯ ಮೂಲಕ ಹಾಯ್ದು ಒಂದು ಬಿಂದುಸ್ಥಾನದಲ್ಲಿ ಕೇಂದ್ರೀಕೃತವಾಗುತ್ತವೆ. ಆ ಕೇಂದ್ರ




ರಸ-ಮನನಗಳ ಪರ್ಯಾಯ

ಬಿಂದುವಿನಲ್ಲಿ ಒಂದು ಕಾಗದವನ್ನೋ ತರಗೆಲೆಯನ್ನೋ ಹಿಡಿದರೆ ಅದು ಸುಟ್ಟುಹೋಗುತ್ತದೆ. ಆ ಕೇಂದ್ರೀಕೃತ ಕಿರಣಗಳೇ ಮತ್ತೆ ವಿಕೀರ್ಣವಾಗಿ ಪಂಜಿನ ಉರಿಯಂತೆ ಚೆದರುತ್ತವೆ. ಮತ್ತೆ ಅದನ್ನು ಕೇಂದ್ರೀಕರಿಸಬಹುದು. ಮತ್ತೆ ವಿಕೀರ್ಣವಾಗಿಸಬಹುದು. ಕಾವ್ಯದೀಪದ ಕಾಂತಿಪ್ರವಾಹವೂ ಹಾಗೆ. ಭಾವರಸಬಿಂದುವಿನಿಂದ ಮನನಪ್ರಭಾ—ವಿಕಿರಣ; ಪುನಃ ಅದು ಭಾವರಸ

ಬಿಂದುವಿನಲ್ಲಿ ಕೇಂದ್ರೀಕೃತ; ಆ ರಸಕೇಂದ್ರದಿಂದ ಮತ್ತೆ ಮನನಪ್ರಭಾ ವಿಕಿರಣ; ಮತ್ತೆ ಅದರ ರಸಕೇಂದ್ರೀಕರಣ. ಅಥವಾ ಮನನಕೇಂದ್ರದಿಂದ ರಸಪ್ರಭಾ—ವಿಕಿರಣ, ಪುನಶ್ಚ ಮನನಕೇಂದ್ರೀಕರಣ—ಹೀಗೆ.

## ಬುದ್ಧಿ ಬ್ರಹ್ಮಗಿರಿ, ಕಾವ್ಯ ಕಾವೇರಿ

ಕಾವ್ಯವೆಂಬುದು ಕೀರು; ರಸ ಅದರ ಹಾಲು; ಮನನ ಅದರಲ್ಲಿ ದ್ರಾಕ್ಷಿ. ಭಾವರಸದ ಸಿಹಿಯನ್ನು ನಾಲಗೆ ಸವಿದು ಏಕರುಚಿ ಜಡವಾದಾಗ ಮನನದ ದ್ರಾಕ್ಷಿ ಸಿಕ್ಕುತ್ತದೆ. ಆ ಕೊಂಚದ ರುಚಿಭೇದವು,—ಮತ್ತು ನಾಲಗೆಗೆ ವಿರಾಮಕೊಡುವ ಆ ಹಲ್ಲಿನ ಶ್ರಮವು,—ಆಪ್ಯಾಯನಕರವಾಗುತ್ತದೆ. ಈ ಮನನದ್ರಾಕ್ಷಿಯ ರುಚಿ ಮಾಸುವ ವೇಳೆಗೆ ಭಾವರಸಕ್ಷೀರ ಪುನಃ ಸಿದ್ಧವಾಗಿರುತ್ತದೆ. ಹೀಗೆ ಸಿಹಿ, ಹುಳಿ; ಗಟ್ಟಿ, ತಿಳಿ; ರಸ, ತರ್ಕ; ಆವೇಶ, ಆಲೋಚನೆ; ಆನಂದ, ಅನುಚಿಂತನೆ—ಈ ಪರ್ಯಾಯಕ್ರಮದಲ್ಲಿ ಹರಿಯುತ್ತದೆ ಕಾವ್ಯಪೀಯೂಷ. ಇದನ್ನು ರಾಮಾಯಣ ಭಾರತಗಳಲ್ಲಿಯೂ ಇತರ ಕಾವ್ಯನಾಟಕಗಳಲ್ಲಿಯೂ ಕಾಣಬಹುದು. ಯಾವುದೋ ಸನ್ನಿವೇಶ ಒಂದು ಪ್ರಶ್ನೆಯನ್ನೇಳಿಸುತ್ತದೆ; ಹೇಗೋ ಒಂದು ಸಂವಾದ ಹುಟ್ಟುತ್ತದೆ; ಯಾರೋ ಒಂದು ಜಿಜ್ಞಾಸೆಗೆ ಕಾರಣ ಒದಗಿಸುತ್ತಾರೆ. ಆ ವ್ಯಾಜದಲ್ಲಿ ನಾಲ್ಕಾರು ತತ್ತ್ವಗಳು ವಿಚಾರವಿಮರ್ಶೆಗೆ ಬರುತ್ತವೆ. ಅಂಥಾ ತತ್ತ್ವವಿಕಾಸದಿಂದಲೇ ಪಾತ್ರಾಭಿವ್ಯಕ್ತಿ. ಕಥಾಲೋಕದ ನಾನಾ ವ್ಯಕ್ತಿಗಳ ಗುಣಶೀಲಗಳು ಪ್ರಕಾಶಕ್ಕೆ ಬರುವುದು ಅಂಥಾ ನೀತಿಘರ್ಷಣೆಯ ಕಾಲದಲ್ಲಿ. ಆ ಪಾತ್ರ ಸ್ವಭಾವವಿಕಸನವಿಲ್ಲದಿದ್ದಲ್ಲಿ ಕಥೆಯ ಸ್ವಾರಸ್ಯವೇನಿದ್ದೀತು? ಕಾವ್ಯದ ಕುತೂಹಲ ಜನಕತ್ವ ಅದರಲ್ಲಿಯ ಬುದ್ಧ್ಯಂಶದಿಂದ. ಕಾವ್ಯವನ್ನು ಬರಿಯ ಕಣ್ಣೀರು ಕೇಕೆ ಜೊಲ್ಲುಗಳ ಕೆಸರು ತೊಪ್ಪೆಯಾಗಿಸದೆ, ಅದಕ್ಕೆ ಆಕಾರಸ್ಪಷ್ಟತೆಯನ್ನೂ ಅವಯವದೃಢತೆಯನ್ನೂ ಕೊಡುವ ಗಟ್ಟಿಯೆಲುಬು ಬುದ್ಧಿ. ಬುದ್ಧಿ ಬ್ರಹ್ಮಗಿರಿ; ಕಾವ್ಯ ಕಾವೇರಿ. ಕಾವ್ಯಹೃದಯವು ಸಮುದ್ರ; ಅಮೃತಮಥನವು ಬುದ್ಧಿ ಮಂದರದಿಂದ.

## ರೂಪರಸಗಳು ಮತ್ತು ಜೀವಗಳು

ನಮ್ಮ ಪೂರ್ವಿಕರ ಜಿಜ್ಞಾಸೆಗಳು ಭಗವದ್ವಿಚಾರಕ್ಷೇತ್ರದಲ್ಲಿ ಎಷ್ಟು ಧೂಳು ದೊಂಬಿಗಳನ್ನೆಬ್ಬಿಸಿವೆಯೋ ಅದಕ್ಕಿಂತ ಕಾವ್ಯಮೀಮಾಂಸಾ ಕ್ಷೇತ್ರದಲ್ಲಿ ಎಬ್ಬಿಸಿರುವ ಗದ್ದಲ ಗಾಳಿಗಂಟುಗಳು ಕಡಮೆಯಾದುವೇನೂ ಅಲ್ಲ.

ರಸದಿಂದ ಕಾವ್ಯ, ರೀತಿಯಿಂದ ಕಾವ್ಯ, ಧ್ವನಿಯಿಂದ ಕಾವ್ಯ, ವಕ್ರೋಕ್ತಿಯಿಂದ ಕಾವ್ಯ, ಔಚಿತ್ಯದಿಂದ ಕಾವ್ಯ, ಅಲಂಕಾರದಿಂದ ಕಾವ್ಯ—ಹೀಗೆ ಕಾವ್ಯವೆಂಬುದರ ಸ್ವರೂಪ ಜೀವಾಳಗಳ ವಿಷಯದಲ್ಲಿ ಹತ್ತಾರು ತಕರಾರುಗಳು. ರಸವೆಂದರೇನು, ರೀತಿಯೆಂದರೇನು, ಶೈಲಿಯೆಂದರೇನು—ಮತ್ತೆ ತಕರಾರುಗಳು. ಧ್ವನಿ ಮೂರು ವಿಧವೋ, ಆರು ವಿಧವೋ, ಹದಿನೆಂಟು ವಿಧವೋ? ರಸಮೂಲಗಳು ಭಾವಗಳೋ, ವಿಭಾವಗಳೋ—ಪುನಃ ತಕರಾರುಗಳು. ಹೀಗೆ ವಸ್ತುವಿಶ್ಲೇಷಣಚಾತುರ್ಯವೂ ವರ್ಗೀಕರಣವಿಚಕ್ಷಣೆಯೂ ನಮ್ಮ ಸಾಹಿತ್ಯಶಾಸ್ತ್ರವನ್ನು ಕಾಡಾಗಿ ಬೆಳಸಿವೆ. ಕಾವ್ಯಮೀಮಾಂಸೆ ಪಾಶ್ಚಾತ್ಯದಲ್ಲಿಯೂ ಹೀಗೆ ನಾನಾಮತಭೂಯಿಷ್ಠವಾಗಿದೆ. ಅಲ್ಲಿಯೂ ಅದು ಜೇಡರಹುಳುವಿನ ನೂಲುಶಾಲೆಯಾಗಿದೆ. ಫಲಿತಾಂಶ:—ಅನಿಷ್ಕರ್ಷೆ, ಭ್ರಾಂತಿ, ವಿವಾದ.

ಯಾವುದಾದರೊಂದು ಸಂದರ್ಭದಲ್ಲಿ ನಾಲ್ಕಾರು ವಸ್ತುಗಳಾಗಲಿ ಶಕ್ತಿಗಳಾಗಲಿ ಒಟ್ಟುಗೂಡಿ ಕೆಲಸಮಾಡುತ್ತಿರುವಾಗ ಆ ನಾಲ್ಕಾರು ಘಟಕಗಳಲ್ಲಿ ಯಾವುದರ ಬೆಲೆ ದೊಡ್ಡದೆಂದು ಸ್ಪರ್ಧೆ ಹುಟ್ಟಿದಲ್ಲಿ, ಸಮನ್ವಯದ ಮಾರ್ಗವೇ ಸಮಾಧಾನದ ಮಾರ್ಗ. ಕಾವ್ಯಕ್ಕೆ ಭಾವವಿಭಾವಗಳೂ ಬೇಕು, ರಸವೂ ಬೇಕು, ಧ್ವನಿಯೂ ಬೇಕು; ಅಕ್ಷರತೇಜಸ್ಸೂ ಬೇಕು, ಪದಗಳ ಬಹುವರ್ಣರಂಜನೆಯೂ ಬೇಕು; ಛಂದಸ್ಸಿನ ನರ್ತನಗತಿಯೂ ಬೇಕು, ಉಪಮಾನೋಪಮೇಯಗಳ ಮಿಂಚುಬೆಳಕೂ ಬೇಕು. ಅವುಗಳಲ್ಲಿ ಒಂದೊಂದಕ್ಕೂ ಒಂದೊಂದು ಕೆಲಸವಿರುತ್ತದೆ. ನಮ್ಮ ಪಂಚೇಂದ್ರಿಯಗಳಲ್ಲಿ ಯಾವುದನ್ನು ಬಿಡಬಹುದು? ಪಂಚಪ್ರಾಣಗಳಲ್ಲಿ ಯಾವುದು ಇಲ್ಲದೆ ಹೋದರೆ ಜೀವನಕ್ಕೆ ನಷ್ಟವಿಲ್ಲ? ಭಾವರಸಧ್ವನಿಗಳ ಪುಷ್ಟಿಯು ಶಬ್ದವಾಕ್ಯ ಛಂದೋಲಂಕಾರಗಳನ್ನು ಅವಲಂಬಿಸಿಕೊಂಡಿರುತ್ತದೆ. ಇವು ಇಲ್ಲದಿದ್ದರೆ ಅವು ಇಲ್ಲ. ಇವು ಚೆನ್ನಿದ್ದರೆ ಅವು ಚೆನ್ನಿಲ್ಲ.

ಎಲ್ಲಕ್ಕೂ ಮೂಲವಾದದ್ದು ಕವಿಯ ಅಂತರಂಗಸಂಪತ್ತು. ಅದೇ ಪ್ರತಿಭೆ; ಅದೇ ಸ್ಫೂರ್ತಿ; ಅದೇ ಸಹಜ ವರಪ್ರಸಾದ. ಕ್ಷಣಕ್ಷಣವೂ ಹೊಸಹೊಸದಾಗುತ್ತ, ಒಂದೇ ಕ್ಷಣದಲ್ಲಿ ನಾಲ್ಕಾರು ವಿಷಯಗಳನ್ನು ಸಂಪಾದಿಸಿ ಮತ್ತೊಂದನ್ನು ಸೃಷ್ಟಿಸಬಲ್ಲದ್ದಾಗಿ—ಪರಿಸರಗ್ರಹಣ ಪ್ರತ್ಯುದ್ಭಾವನ ವಾಗಭಿವ್ಯಂಜನಕ್ರಿಯೆಗಳನ್ನು* ಔಚಿತ್ಯವಿವೇಚನೆಯಿಂದ ನಿರ್ವಹಿಸಬಲ್ಲದ್ದಾಗಿ—ಲೋಕಪ್ರಶ್ನೆಯ ಧ್ವನಿಗೆ ದಿವ್ಯದರ್ಶನದ ಉತ್ತರವನ್ನು ಪ್ರತಿಧ್ವನಿ ಕೊಡುವ

---

* ಪುಟ ೨೦

ಕಲ್ಪನಚಮತ್ಕೃತಿಯುಳ್ಳದ್ದಾದ ಮನೋಬುದ್ಧಿಸಾಮರ್ಥ್ಯವೇ ಸ್ಫೂರ್ತಿ, ಪ್ರತಿಭೆ. ಅದು ಇಂದ್ರನಂತೆ ಸಹಸ್ರಾಕ್ಷಿಗಳುಳ್ಳದ್ದು,—ನವನವೋನ್ಮೇಷ ಶಾಲಿಯಾದವು ಆ ಅಕ್ಷಿಗಳು. ಇಂಥ ಅಂತಃಕರಣಲಕ್ಷಣದಿಂದ 'ಶೀಲ' (ಕ್ಯಾರಕ್ಟರ್), ಸ್ವಾಭಾವಿಕ ಪ್ರವೃತ್ತಿ ಅಥವಾ ರೂಢಿಯಾದ ಚರ್ಯೆ; ಆ ಶೀಲದಿಂದ ಶೈಲಿ. ವ್ಯಾಸಕೃತಿಯನ್ನು ವಾಲ್ಮೀಕಿಕೃತಿಯಿಂದ ಬೇರೆಯೆನಿಸಿ ತೋರಿಸುವ ವಾಗ್ವಿಶೇಷ ಗುಣವೇ ಶೈಲಿ. ಅದು ಆಯಾ ಕವಿಯ ಮನೋ ಧರ್ಮವನ್ನು—ಅವನವನ ಅಂತರಂಗ 'ಶೀಲ'ವನ್ನು—ಅವನ ವ್ಯಕ್ತಿ ವೈಶಿಷ್ಟ್ಯವನ್ನು ಅವಲಂಬಿಸಿಕೊಂಡಿರುತ್ತದೆ. ವೈಯಕ್ತಿಕವೂ ವಿವಿಧಗುಣಾತ್ಮ ಕವೂ ಆದ ಪ್ರತಿಭೆಯೆಂಬ,—ಸ್ಫೂರ್ತಿಯೆಂಬ,—ಅಂತಶ್ಚೈತನ್ಯದ ಬಹಿರವತಾ ರವೇ ಕಾವ್ಯ. ಅದೇ ಕವಿಕರ್ಮದಲ್ಲಿ ರಹಸ್ಯಾಂಶ. ನದೀಮೂಲಗಳು ಹೇಗೋ ಕಾವ್ಯಮೂಲಗಳೂ ಹಾಗೆ ಸುಲಭವಾಗಿ ಸಿಕ್ಕತಕ್ಕವಲ್ಲ.

ನಮ್ಮ ಪೂರ್ವದ ಕಾವ್ಯಮೀಮಾಂಸಕರ ದೃಷ್ಟಿಯು ಕಾವ್ಯದ ಅಂತ ರಂಗಕ್ಕಿಂತ ಅದರ ಬಹಿರಂಗಕ್ಕೆ ಹೆಚ್ಚಾಗಿ ದೊರೆತಿದೆ. ಕವಿ "ಏನು" ಹೇಳಿ ದ್ದಾನೆ ಎಂಬುದಕ್ಕಿಂತ "ಹೇಗೆ" ಹೇಳಿದ್ದಾನೆ ಎಂಬುದು ಅವರಿಗೆ ದೊಡ್ಡ ಪ್ರಶ್ನೆ. "ವಿಷಯ"ಕ್ಕಿಂತ "ರೀತಿ" ಮುಖ್ಯವಾಯಿತು. ವಿಷಯ ರೀತಿ ಗಳೆರಡೂ ಪರಸ್ಪರ ಸಂಬದ್ಧಗಳು, ಅವೆರಡನ್ನೂ ಬೇರ್ಪಡಿಸಲಾಗದು—ಎಂಬ ಮಾತು ಒಪ್ಪತಕ್ಕದ್ದೇ ಸರಿ. ಆದರೂ ಭಾವವೇ ಮೂಲದ್ರವ್ಯವಾಗಿದ್ದು ಕೊಂಡು, ತನಗೆ ತಕ್ಕ ಮಾತನ್ನು ಅದು ಹವಣಿಸಿಕೊಂಡಿದೆಯೆ, ಅಥವಾ ಮಾತೇ ಮೊದಲಿನದಾಗಿದ್ದುಕೊಂಡು ಭಾವ ಎಷ್ಟು ಅನಿವಾರ್ಯವೋ ಅಷ್ಟನ್ನು ಮಾತ್ರ ತನ್ನೊಳಗೆ ಇರುಕಿಸಿಕೊಂಡಿದೆಯೆ?—ಎಂಬ ಪ್ರಶ್ನೆ ತಪ್ಪ ಲಾರದ್ದು. ಶಬ್ದಾಲಂಕಾರ, ಅರ್ಥಾಲಂಕಾರ, ಧ್ವನಿ, ರೀತಿ—ಇವೆಲ್ಲ ಕಾವ್ಯದ ಉಪಕರಣಗಳು; ಅದರ ಮುಖ್ಯಕಾರ್ಯವಾದರೋ ಒಂದು ದರ್ಶನಸೃಷ್ಟಿ— ಒಂದು ಸ್ಫೂರ್ತಿಪ್ರದಾನ. ಆ ದರ್ಶನ,—ಆ ಸ್ಫೂರ್ತಿ,—ಹಿರಿದೆ, ಕಿರಿದೆ? ಅದರ ಪ್ರಭಾವವೆಂಥಾದ್ದು? ಪಾತ್ರೆ ಚಿನ್ನದ್ದಿರಲಿ, ಅದು ನವರತ್ನಖಚಿತವಾಗಿರಲಿ; ಅದರೊಳಗಿರುವುದೇನು—ಹಾಲೆ, ತುಪ್ಪವೆ, ನೀರೆ? ಕವಿ ನುಡಿದಿರುವುದು ಕಿವಿಗಾಗಿಯೆ, ಜೀವಕ್ಕಾಗಿಯೆ? ಅವನು ಅಂತರಾತ್ಮಕ್ಕೆ ಏನನ್ನಾದರೂ ಒದ ಗಿಸಿದ್ದಾನೆಯೆ? ಅದರ ಗುಣವೇನು? ಅದರ ಬೆಲೆಯೆಷ್ಟರದು?—ಇವು ವಿಮರ್ಶ ಕನು ಕೇಳಬೇಕಾದ ಪ್ರಶ್ನೆಗಳು. ಈ ಜೀವೋದ್ಧಾರಕ್ರಿಯೆಗೆ ಸಾಧನಭೂತ ಗಳಾದವು ಪದಶಯ್ಯೆ, ವಾಕ್ಯಚಮತ್ಕೃತಿಗಳು.

ಒಳ್ಳೆಯ ಪದ್ಯದ, ಅಥವಾ ಪದ್ಯಾಂಶದ, ಒಂದು ಸ್ಥೂಲಲಕ್ಷಣವೇನೆಂ

ದರೆ,—ಅದರ ಪದಗಳು ಓದಿದವನ ನೆನಪಿಗೆ ಮತ್ತೆ ಮತ್ತೆ ಹಿಂದಿರುಗಿ ಬರುತ್ತಿರುವುದು. ಪುಸ್ತಕವನ್ನೋದಿ ಬಹುದಿನಗಳಾದ ಮೇಲೂ, ಅದರ ಮಿಕ್ಕೆಲ್ಲ ಸಂಗತಿಗಳೂ ಮರೆತುಹೋದ ಮೇಲೂ, ಯಾವುದೋ ಒಂದು ಪಂಕ್ತಿ,—ಒಂದು ತುಂಡು,—ನಮ್ಮ ಜ್ಞಾಪಕದಿಂದ ಅಳಿಸಿಹೋಗದೆ, ಮನಸ್ಸಿಗೆ ಬಿಡುವಾದಾಗಲೆಲ್ಲ, ಅಥವಾ ತಕ್ಕ ಸಂದರ್ಭ ಬಂದಾಗಲೆಲ್ಲ, ನಮ್ಮ ನಾಲಗೆಯ ಮೇಲಕ್ಕೆ ಬರುತ್ತದೆ. ಹಾಗೆ ಪದೇ ಪದೇ ನಮ್ಮ ಸ್ಮರಣೆಗೆ ಮರಳಿ ಬರುವ ವಾಕ್ಯವೇ ಕೃತಾರ್ಥವಾದ ಕಾವ್ಯ.

## ನಿತ್ಯದ ಕೊರತೆ

ಲೋಕದಲ್ಲಿ ಇಬ್ಬರ ಹಣೆಯ ಬರಹ ಪ್ರತಿನಿತ್ಯದ ಕೊರಗಾಟ: (೧)ಕಲಾಕರ್ಮಿಯದು, (೨) ರಾಜ್ಯಕರ್ಮಿಯದು ; ಏಕೆಂದರೆ ಅವರಿಬ್ಬರ ವ್ಯಾಪಾರವೂ ಲೋಕದ ಮನೋಭಾವವನ್ನು ಅವಲಂಬಿಸಿಕೊಂಡಿರಬೇಕಾದದ್ದು. ಸಾಮಗ್ರಿಯ ಗುಣ, ಪಾಕದ ಹದ—ಈ ಎರಡೂ ಹೊಂದಿಕೊಂಡಲ್ಲದೆ ಅವರ ಪ್ರಯತ್ನಕ್ಕೆ ಕೀರ್ತಿಯಿಲ್ಲ.

ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ.
ಭೂವಿಗದನೆಟುಕಿಸುವೆನೆಂಬಿಸಕ ರಾಜ್ಯಕತೆ.

ಮನೋನಯನವು ಕಂಡ ಲೋಕಹಿತಕಲ್ಪನೆಗೆ ಬಾಹ್ಯರೂಪವನ್ನು ಕೊಡಲು ಸನ್ನಿವೇಶಾನುಕೂಲತೆಯೂ ಮಾನುಷಸಾಧನಗಳೂ ಸಂಪೂರ್ಣವಾಗಿ ಒದಗಿ ಬಂದವೆಂಬ ಸಂತೃಪ್ತಿಯು ರಾಜ್ಯಮಂತ್ರಿಗೆ ದುರ್ಲಭ. ಮನೋಗುಹೆಯಲ್ಲಿಯ ಜೀವನಸೌಂದರ್ಯದರ್ಶನಕ್ಕೆ ಬಾಹ್ಯರೂಪ ಕೊಡಲು ಶಬ್ದಸಾಮಗ್ರಿಯೂ ಪಾಕಸಂಧಾನಗಳೂ ಯಥೇಷ್ಟವಾಗಿ ಬಂದವೆಂಬ ಸಂತೋಷ ಕವಿಗೆ ದುರ್ಲಭ. ಇಬ್ಬರಿಗೂ ಒಳಗಿನದು ಸವುರು, ಹೊರಗಿನದು ಒರಟು. ಒಳಗಿನದು ಸ್ವಾಧೀನ, ಹೊರಗಿನದು ಪರಾಧೀನ. ಎರಡೂ ಒಂದಕ್ಕೊಂದು ಅನುವಾಗಿ ಹೊಂದಿಕೊಳ್ಳುವುದು ಕಷ್ಟ. ಅವರು ಅಂತರಂಗದಲ್ಲಿ ಆತ್ಮಪರೀಕ್ಷೆಯುಳ್ಳವರಾದರೆ ಅವರಿಗೆ ಆ ಅಸಂತೃಪ್ತಿ ತಪ್ಪಿದ್ದಲ್ಲ. ಆದರೆ ಅದು ಪವಿತ್ರವಾದ ಅಸಂತೃಪ್ತಿ. ಅದಿಲ್ಲದ್ದು ಗುಣಚಿಹ್ನೆಯಲ್ಲ,

## ವಿಶ್ವ ಸ್ವಾರಸ್ಯ

(೧) ವಿಶ್ವಸಂಬೋಧನೆಯೇ ಕಾವ್ಯದ ಮಹತ್ತ್ವ.
(೨) ವಿಶ್ವಸಹೃದಯತೆಯೇ ವಾಚಕನ ಉತ್ತಮ ಯೋಗ್ಯತೆ.

ಒಂದು ಕಾವ್ಯವು ತನ್ನ ದೇಶದ ಮತ್ತು ತನ್ನ ಕಾಲದ ಅವಧಿಗಳನ್ನು ದಾಟಿ ಎಷ್ಟೆಷ್ಟು ದೂರ ಹರಡಿ ವಿಶ್ವಜನಕ್ಕೆ ಬೇಕಾದ ಒಂದು ಸಂದೇಶವನ್ನು —ಒಂದು ಸ್ಫೂರ್ತಿಯನ್ನು—ಒಂದು ಸಂತೋಷವನ್ನು—ಕೊಡಬಲ್ಲದ್ದಾಗುತ್ತದೆಯೋ ಅದರ ಘನತೆ ಅಷ್ಟಷ್ಟು ದೊಡ್ಡದಾಗುತ್ತದೆ. ಯಾವುದೋ ಒಂದು ಕಾಲದ ವಾಚಕಗೋಷ್ಠಿಗೆ ಮಾತ್ರ ಉಪಯುಕ್ತವಾದ ಗ್ರಂಥದ ಬೆಲೆ ವಿಶ್ವಮಾನವದೃಷ್ಟಿಯಿಂದ ದೊಡ್ಡದೆನಿಸದು. ತನ್ನ ಊರು, ತನ್ನ ಕುಲ, ತನ್ನ ಮತ, ತನ್ನ ಸಮಾಜ, ತನ್ನ ದಿವಸದ ಲೋಕಪರಿಸ್ಥಿತಿ—ಇವುಗಳ ಪ್ರಭಾವಕ್ಕೆ ಎಷ್ಟು ಮಾತ್ರವೂ ಒಳಗಾಗದೆ,—ಯಾವ ಉಪಾಧಿಭೇದಕ್ಕೂ ಸಿಕ್ಕದೆ,–ಕಾಲದೇಶಾತೀತ ದೃಷ್ಟಿಯಿಂದ ಕಾವ್ಯರಚನೆ ಮಾಡಬಲ್ಲ ಕವಿ ಬಹುಶಃ ಸೃಷ್ಟಿಯಲ್ಲಿ ಇರಲಾರ. ಕವಿಗೆ ಕಾರ್ಯಪ್ರೇರಣೆ ಬರುವುದು ಅವನ ಸುತ್ತಮುತ್ತಣ ಸಂದರ್ಭದ ಉತ್ಕಟತೆ ವಿಷಮತೆಗಳಿಂದ. ಲೋಕಾತೀತ ವಿಷಯವನ್ನು ಹೇಳ ಹೊರಟ ವೇದ ಸಹ ತನ್ನ ಮಹರ್ಷಿಗಳ ಕಾಲದ ಮತ್ತು ಅವರಿದ್ದ ದೇಶದ ಪರಿಸರಸ್ಪರ್ಶವನ್ನು ಸಂಪೂರ್ಣವಾಗಿ ತಪ್ಪಿಸಿಕೊಂಡಿಲ್ಲ. ಪರಿಸರಪ್ರಭಾವವು ಕವಿಯ ಜೀವಿತಸಾಮಗ್ರಿಯ ಒಂದು ಅನಿವಾರ್ಯ ಭಾಗವೆಂಬುದನ್ನು ನೋಡಿದ್ದೇವೆ. ಅದೇ ಅವನ ಸ್ಫೂರ್ತಿಗೆ ಮೂಲಸ್ಥಾನ. ಹಾಗಿದ್ದರೂ ಅವನ ಆ ದೇಶಸಮಯಾದ್ಯುಪಾಧಿಗಳಿಂದ ಎಷ್ಟೆಷ್ಟು ಮೇಲಕ್ಕೇಳುತ್ತಾನೋ ಅಷ್ಟಷ್ಟು ವಿಶದವಾಗುತ್ತದೆ ಅವನ ವಿಶ್ವಮಾನವ ದೃಷ್ಟಿ, ಮತ್ತು ಅಷ್ಟಷ್ಟು ವಿಸ್ತಾರವಾಗುತ್ತದೆ ಅವನ ವಿಶ್ವಸಂಬೋಧನ ಶಕ್ತಿ. ಅವನು ಸ್ವಮತ ಸ್ವಸಮಾಜಗಳ ಹಿಡಿತಗಳಿಂದ ಅತೀತನಾಗಿ ತನ್ನ ಹೃದಯವನ್ನು ಜಗಜ್ಜೀವನದಲ್ಲಿ ಐಕ್ಯಪಡಿಸಬೇಕು. ಆ ವಿಶ್ವಮನುಷ್ಯಸ್ವಭಾವಗ್ರಹಣದಿಂದ ಬರುತ್ತದೆ ಅವನ ಕಾವ್ಯಕ್ಕೆ ವಿಶ್ವಾದರಣೀಯವಾದ ಬೆಲೆ. ಅಂಥವು ಪ್ರಪಂಚದ ಉತ್ಕೃಷ್ಟ ಕಾವ್ಯಗಳು. ಗ್ರೀಕರ ರುದ್ರನಾಟಕಗಳನ್ನೂ ಬೈಬಲ್ ಪುರಾಣವನ್ನೂ ಷೇಕ್ಸ್‌ಪಿಯರನ ಅನೇಕ ನಾಟಕಗಳನ್ನೂ ಭಾರತೀಯರು ಕುತೂಹಲದಿಂದ ಓದುತ್ತಾರೆ. ಏತಕ್ಕೆ ? ಆ ವಿದೇಶೀಯ ಸಾಹಿತ್ಯಗಳಲ್ಲಿ ವಿಶ್ವಜನರಂಜಕವಾದ ಸಂಗತಿಗಳೂ ಸಂದೇಶಗಳೂ ತುಂಬಿವೆಯಾದ ಕಾರಣದಿಂದ. ಹಾಗೆಯೇ ನಮ್ಮ ರಾಮಾಯಣ ಭಾರತ ಶಾಕುಂತಲಾದಿಗಳನ್ನು ಪಾಶ್ಚಾತ್ಯರು ಓದುತ್ತಾರೆ. ಏತಕ್ಕೆ ? ಈ ಸಂಸ್ಕೃತಸಾಹಿತ್ಯದಲ್ಲಿ ಸರ್ವಲೋಕಮಾನ್ಯಗಳಾದ ಸ್ವಾರಸ್ಯ ಸಂದೇಶಗಳಿರುವುದರಿಂದ. ಮಹಾಕಾವ್ಯಕ್ಕೆ ಮತಕುಲಗಳ ತಡೆಗಟ್ಟಿರದು. ಕಾವ್ಯವನ್ನು ಯಾವ ಅನ್ಯಭಾಷೆಯಲ್ಲಿ ಅನುವಾದ ಮಾಡಿದರೂ ಆ ಅನ್ಯಭಾಷೆಯಲ್ಲಿ ಹುಟ್ಟಿದ ಜನರು ಆ ಅನುವಾದವನ್ನು ತಮ್ಮ ಸ್ವಂತ ಗ್ರಂಥವೆಂದೇ ಆದರಿಸುವಂತೆ

ಇದ್ದರೆ ಅದು ಮಹಾಕಾವ್ಯ. ಹೀಗೆ ಭಾಷಾಂತರಿತ ಕೃತಿ—(ಅದು ಸರಿಯಾಗಿ ನಡೆದಿದ್ದಲ್ಲಿ)—ಮೂಲಕಾವ್ಯದ ವಿಶ್ವಮಾನ್ಯತೆಗೆ ಒಂದು ಒರೆಗಲ್ಲಿನಂತಾಗುತ್ತದೆ. ವಿಶ್ವಜನಸಂಬೋಧನಯೋಗ್ಯತೆ ಎಲ್ಲ ಮಹಾಕಲಾನಿರ್ಮಿತಿಗೂ ಲಕ್ಷಣ. ದೊಡ್ಡ ಚಿತ್ರ, ದೊಡ್ಡ ಶಿಲ್ಪ, ದೊಡ್ಡ ಗಾನ, ದೊಡ್ಡ ಸಾಹಿತ್ಯ—ಇವು ಎಲ್ಲ ದೇಶಸೀಮೆಗಳನ್ನೂ ದಾಟಿ ವಿಶ್ವಪ್ರಿಯಗಳಾಗುತ್ತವೆ. ಸೂರ್ಯಚಂದ್ರರಿಗೆ ಹೇಗೆ ದೇಶಭೇದ ಕುಲಭೇದಗಳಿಲ್ಲವೋ, ಹಿಮವತ್ಪರ್ವತದ ಅದ್ಭುತಕ್ಕೆ ಹೇಗೆ ಮತಸಮಾಜಗಳ ಗಣನೆಯಿಲ್ಲವೋ, ಪ್ರಕೃತಿಯ ಪ್ರಭಾವವು ಹೇಗೆ ಸರ್ವಸಮಾನವ್ಯಾಪಕವೋ, ಮಹಾಕಾವ್ಯದ ಸ್ವಾರಸ್ಯ ಹಾಗೆ,—ಪ್ರಾದೇಶಿಕ ವ್ಯತ್ಯಾಸ ಜನವರ್ಗವ್ಯತ್ಯಾಸಗಳಿಗೆ ಅಧೀನವಾಗದೆ,—ಸರ್ವತ್ರ ವ್ಯಾಪಕವಾಗುತ್ತದೆ. ಎಲ್ಲ ಮತಗಳ, ಎಲ್ಲ ಕುಲಗಳ, ಎಲ್ಲ ದೇಶಭೇದಗಳ, ಎಲ್ಲ ಸಮಾಜಭೇದಗಳ ಹಿಂದುಗಡೆ—ಎಲ್ಲಕ್ಕೂ ಮೇಲುಗಡೆ—ಸರ್ವಮೂಲವಾಗಿ, ಸರ್ವವ್ಯಾಪಿಯಾಗಿ, ನಿಂತಿರುತ್ತದೆ ಒಂದು ಮಾನುಷ ಶಕ್ತಿ. ಅದು ಅನಾದಿ ; ಅದು ಅನಂತ. ಆ ವಿಶ್ವಮಾನುಷ್ಯದ ಸ್ವಭಾವಪ್ರಕೀರ್ತನೆಯೇ ಕಾವ್ಯ. ಈ ಮತ, ಆ ಮತ, ಈ ತತ್ತ್ವ, ಆ ತತ್ತ್ವಗಳು ಆ ವಿಶ್ವಮಾನುಷ್ಯಕ್ಕೆ ಮುಖ್ಯವಲ್ಲ. ವಿಶ್ವಮಾನುಷ ಸ್ವಭಾವವೇ ಮಹಾಕವಿಯ ವಿಷಯ.

## ಮತಾತೀತ ದೃಷ್ಟಿ

ಕವಿಯಲ್ಲಿ ಯಾವ ವಿಶ್ವವಿಶಾಲದೃಷ್ಟಿಯು ಮಹತ್ತ್ವದ ಲಕ್ಷಣವಾಗುತ್ತದೆಯೋ ಅದೇ ದೃಷ್ಟಿವೈಶಾಲ್ಯ ವಾಚಕನಲ್ಲಿ ಮಹತ್ತ್ವಸಂದರ್ಶನಕ್ಕೆ ಯೋಗ್ಯತೆಯಾಗುತ್ತದೆ. ವಾಚಕನೂ ಸಾರ್ವತ್ರಿಕ ಮಾನವತೆಗೆ ಮೊದಲನೆಯ ಗೌರವವನ್ನು ಸಲ್ಲಿಸಬೇಕು. ಈ ಮಾತನ್ನು ನಮ್ಮ ದೇಶದಲ್ಲಿ ಕೊಂಚ ಒತ್ತಿ ಹೇಳಬೇಕಾಗಿದೆ. ಪ್ರಕೃತಕಾಲದಲ್ಲಿ ಅದಕ್ಕೆ ಹೆಚ್ಚು ಕಾರಣವಿದೆ. ನಮ್ಮ ಸಾಹಿತ್ಯದಲ್ಲಿ ಬಹು ದೊಡ್ಡ ಭಾಗ ಮತಧರ್ಮದಿಂದ ಉತ್ಪನ್ನವಾದದ್ದು. ಮತ ಸಂಪ್ರದಾಯ ಕುಲಾಚಾರಗಳ ಸಂಪೃಕ್ತಿಯಿಲ್ಲದ ಕಾವ್ಯಪ್ರಬಂಧ ನಮ್ಮಲ್ಲಿ ತೀರಾ ಅಪೂರ್ವ; ಮತ್ತು ಎಲ್ಲ ಪ್ರಬಂಧಗಳನ್ನೂ ಮತಾಚಾರ ದೃಷ್ಟಿಯಿಂದ ನೋಡುವುದು ನಮಗೆ ಬಹುಕಾಲದ ಅಭ್ಯಾಸ. ರಾಮಾಯಣ ಭಾರತಗಳನ್ನು ಹಿಂದೂ ಜನ 'ಪಾರಾಯಣ' ಮಾಡುತ್ತಾರೆ — ಅವು ಪವಿತ್ರಗ್ರಂಥಗಳೆಂದು ; ಅವು ಸಾಹಿತ್ಯವೆಂದು ಮಾತ್ರವಲ್ಲ. ಹಾಗೆಯೇ ಜೈನರು 'ಪಾರಾಯಣ' ಮಾಡುತ್ತಾರೆ ತೀರ್ಥಂಕರರ ಚರಿತ್ರೆಗಳನ್ನು— ಕಾವ್ಯವೆಂದಲ್ಲ. ವೀರಶೈವರಿಗೆ 'ರಾಜಶೇಖರವಿಲಾಸ' ಕಾವ್ಯವಲ್ಲ,—ಶಿವ

'ಪುರಾಣ'. ಗದುಗಿನ ಭಾರತ ವಿಷ್ಣುಭಕ್ತರಿಗೆ ಕಾವ್ಯವಲ್ಲ—ಕೃಷ್ಣ 'ಮಾಹಾತ್ಮ್ಯ'. ನಮಗೆ ಕಾವ್ಯಗಳ ಮಾನುಷಾಂಶಗಳ ಮೇಲೆ ಗಮನವಿರುವುದಕ್ಕಿಂತ ದೈವಿಕಾಂಶಗಳ ಮೇಲೆ ಹೆಚ್ಚು ಗಮನವಿರುತ್ತದೆ. ಮನುಷ್ಯಸ್ವಭಾವಕ್ಕಿಂತ ಮತಪ್ರಕ್ರಿಯೆ ನಮಗೆ ಮುಖ್ಯವಾಗುತ್ತದೆ ಕಾವ್ಯೇತಿಹಾಸಗಳ ವ್ಯಾಸಂಗದಲ್ಲಿ. ಆದರೆ ಮತಾಚಾರ ಸಂಬಂಧವಿರುವ ಕಾವ್ಯಪ್ರಬಂಧಗಳನ್ನು ನಾವು ಸಾಹಿತ್ಯಕ್ಷೇತ್ರದಿಂದ ತಳ್ಳಿಬಿಡೋಣವೆಂದರೆ ಆಮೇಲೆ ಅಲ್ಲಿ ಉಳಿಯುವುದೇನು? ರಾಮ ಕೃಷ್ಣ ಶಿವ ಜಿನಮುನಿಗಳನ್ನು ಬಿಟ್ಟರೆ ಯಾವ ಮಹಾವಸ್ತುವಿತ್ತು ನಮ್ಮ ಪೂರ್ವಕವಿಗಳಿಗೆ? ಅಷ್ಟೇ ಅಲ್ಲ. ಇನ್ನು ಮುಂದೆಯೂ ಕೂಡ ಯಾವ ಮತಪ್ರಸಕ್ತಿಯೂ ಇಲ್ಲದ ಕಾವ್ಯ ಹೇಗೆ ಹುಟ್ಟೀತು? ಒಂದು ಬಗೆಯಲ್ಲಿ ಎಲ್ಲ ಕಾವ್ಯವೂ ಮತವೇ. ಮತವೆಂದರೆ ಅಭಿಪ್ರಾಯ, ತಿಳಿವಳಿಕೆ, ನಂಬಿಕೆ. ಮತದ ಹೃದಯಾಂಗವು ಜೀವನತತ್ತ್ವಸಮೀಕ್ಷೆ,—ಜೀವಧರ್ಮಾನ್ವೇಷಣೆ. ಅದು ಯಾರಿಗೆ ಬೇಡ? ಅದಿಲ್ಲದೆ ಎಂಥ ಕಾವ್ಯ? ಮಹಾಕವಿಗಿರುವ ಮುಖ್ಯ ಪ್ರೇರಣೆಯೇ ಅದರಿಂದ. ಲೋಕನೀತಿಯಲ್ಲಿ ಒಂದು ಹೊಸ ನೋಟ ಅವನ ಕಣ್ಣಿಗೆ ಕಾಣದಿದ್ದರೆ,—ಒಂದು ಹೊಸ ನಂಬಿಕೆ ಅವನ ಮನಸ್ಸಿನಲ್ಲಿ ಮೂಡದಿದ್ದರೆ,—ಅವನು ಹೊಸ ಕಾವ್ಯವನ್ನೇಕೆ ಹೆಣೆಯಬೇಕು? ಅಂಥವನ ಕಾವ್ಯ ಬರಿಯ 'ಅಹ್ಹಹ್ಹಾ!' 'ಉಹ್ಹುಹ್ಹೂ!!' ಉದ್ಗಾರಗಳಲ್ಲದೆ ಅದಕ್ಕಿಂತ ಮೇಲ್ಮಟ್ಟದ್ದಾಗದು. ಹೀಗೆ ಎಂಥಾದ್ದೋ ಒಂದು ಮತವು ಕವಿಗೆ ಅನಿವಾರ್ಯವೇ ಸರಿ. ಮತ ಬೇಡವೆಂಬುದು ಕೂಡ ಮತವೇ. ಆದದ್ದರಿಂದ ಕಾವ್ಯೋಪಾಸಿಗೆ ಬೇಡವಾದದ್ದು ಮತವೆಲ್ಲವೂ ಅಲ್ಲ, ಮತದ ಒಂದಾನೊಂದು ಸಂಕುಚಿತಸ್ವರೂಪ ಮಾತ್ರ. ಮತದ ಸರ್ವಗ್ರಾಹ್ಯಾಂಶ ಅದರ ಅಂತರಂಗ—ಅವನಿಗೆ ಬೇಕು; ಅದರ ಏಕದೇಶೀಯಾಂಶ—ಅದರ ಬಹಿರಂಗ—ಅವನಿಗೆ ಬೇಡ. ಅದರ ಮನುಷ್ಯ—ದೈವಸಂಬಂಧದ ವಿಚಾರ ಅವನಿಗೆ ಕುತೂಹಲಕಾರಿಯಾದದ್ದು; ಅದರ ತುಲಸೀ ಬಿಲ್ವಗಳ, ವಿಭೂತಿ ತಿರುಚೂರ್ಣಗಳ ಮಾಹಾತ್ಮ್ಯ ಅವನಿಗೆ ಅಪ್ರಸಕ್ತವಾದದ್ದು. ಕವಿಯ ಮತದೃಷ್ಟಿಯಲ್ಲಿ ಸಕಲ ಸಾರ್ವತ್ರಿಕ ಮಾನವಸ್ವಭಾವಕ್ಕೂ ಅನ್ವಯಿಸುವ ಭಾಗ ಎಷ್ಟುಂಟೋ ಅದಷ್ಟೂ ಸಾಹಿತಿಗೆ ಇಷ್ಟವಾದದ್ದೇ.

## ಮಾನುಷ್ಯರಂಗ

ವಿಶ್ವಮಾನವಸಾಮಾನ್ಯವಾದಷ್ಟು ಮತಧರ್ಮ,—ಅಷ್ಟು ಮಾತ್ರ,—ಸಾಹಿತ್ಯದ ಸಹಜಾಂಶ. ಮಾನವೀಯತೆಯೇ ಸಾಹಿತ್ಯ. ದೈವವೂ ಸ್ವರ್ಗವೂ

ವ್ರತವೂ ಪೂಜೆಯೂ ಅವುಗಳ ಮಾನವೀಯತೆಯ ದೃಷ್ಟಿಯಿಂದ ಸಾಹಿತ್ಯಕ್ಕೆ ಸಾಮಗ್ರಿ. ಕಾವ್ಯದಲ್ಲಿ ಕಥಾನಾಯಕನೂ ಮನುಷ್ಯ,—ವಿಶ್ವಸಾಮಾನ್ಯವಾದ ಮನುಷ್ಯ. ದೇವಾಧಿದೇವರುಗಳು ಕಾವ್ಯರಂಗದಲ್ಲಿ ಉಪಪಾತ್ರಗಳು,—ಪ್ರಸಂಗವಶವಾಗಿ ಬರತಕ್ಕವರು. ಮನುಷ್ಯನಿಗೆ ಅವರಿಂದ ಏನೇನಾಗ ಬಹುದೆಂಬುದು ಒಂದು ಸ್ವಾರಸ್ಯಕೇಂದ್ರ. ಆದರೆ ಮನುಷ್ಯಭಾಗವೇ ರಸಾಧಿಷ್ಠಾನ. ಮನುಷ್ಯನ ಆಗುಹೋಗುಗಳು ನಮಗೆ ಬೇಕಾದದ್ದು; ದೈವವಲ್ಲ. ಈ ಪೌರುಷೇಯಕಥಾಪ್ರಾಧಾನ್ಯವೇ ಸಾಹಿತ್ಯವಾಙ್ಮಯದ ಮುಖ್ಯ ಲಕ್ಷಣ. ಶುದ್ಧಸಾಹಿತಿಯು ಕಾವ್ಯವೆನಿಸಿಕೊಂಡ ಎಲ್ಲ ಪುರಾಣ ಪುಣ್ಯಕಥೆಗಳನ್ನೂ ಪೌರುಷ್ಯಪರಿಣಾಮದ ದೃಷ್ಟಿಯಿಂದ—(ಹ್ಯೂಮನಿಸಮ್) ಮಾನವೋತ್ಕರ್ಷದ ದೃಷ್ಟಿಯಿಂದ—ಓದತಕ್ಕವನು. ಅವನ ವೈಯಕ್ತಿಕವಾದ ಮತಧರ್ಮಕುಲಾಚಾರಗಳ ಪ್ರಸಕ್ತಿ ಅವನ ಕಾವ್ಯವ್ಯಾಸಂಗದಲ್ಲಿ ತಲೆಯೆತ್ತ ಬಾರದು. ಅವನು ಹಿಂದುವಾಗಿರಬಹುದು, ಬೈಬಲನ್ನು ಓದುವ ಕಾಲದಲ್ಲಿ ಅವನ ಹಿಂದುತ್ವ ಮರೆತುಹೋಗಿರುತ್ತದೆ; ಅವನು ಅದನ್ನು ಸಾಹಿತ್ಯಗ್ರಂಥ ವೆಂದು ಓದುತ್ತಾನೆ, ಪವಿತ್ರಗ್ರಂಥವೆಂದಲ್ಲ. ಅಯ್‌ಸ್ಕಿಲಸ್ಸಿನ (ಗ್ರೀಕ್) ನಾಟಕವನ್ನೋ, ಷೇಕ್ಸ್‌ಪಿಯರನ ನಾಟಕವನ್ನೋ, ಗಿಬ್ಬನ್ನನ ರೋಮ್ ಚಕ್ರಾಧಿಪತ್ಯದ ಚರಿತ್ರೆಯನ್ನೋ, ಡಿಕೆನ್ಸಿನ ಒಂದು ಕಥೆಯನ್ನೋ, ಬಾಣನ (ಸಂಸ್ಕೃತ) ಕಾದಂಬರಿಯನ್ನೋ ಓದುವಾಗ ಹಿಂದೂಧರ್ಮಿಯ ಮನೋ ಭಾವ ಹೇಗಿರುತ್ತದೋ ರಾಮಾಯಣ ಭಾರತಗಳನ್ನು ಓದುವಾಗಲೂ ಹಾಗೆಯೇ ಅವನ ಮನಸ್ಸು ಮತದ ಸ್ಪೃಕ್ಕಿಲ್ಲದ್ದಾಗಿರಬೇಕು. ಈ ಸ್ವಮತಾಭಿಮಾನದ ತಾತ್ಕಾಲಿಕ ವರ್ಜನೆಯು ಕೊರಾನ್ ಬೈಬಲು ಗಳನ್ನೋದುವ ಹಿಂದುಗಳಿಗೆ ಹೇಗೋ ಹಿಂದೂಕಾವ್ಯಗಳನ್ನೋದುವ ಮುಸಲ್ಮಾನರಿಗೂ ಕ್ರಿಸ್ತರಿಗೂ ಹಾಗೆಯೇ ತಕ್ಕ ನೀತಿ.

ಈ ಕೇವಲ ಮನುಷ್ಯ-ವಿಚಾರ-ಮುಖ್ಯತೆಯ ನೀತಿಯು ಸಾಹಿತ್ಯಕ್ಕೆ ನ್ಯಾಯ ಸಲ್ಲಿಸುವ ಉದ್ದೇಶಕ್ಕಾಗಿ ಮಾತ್ರವಲ್ಲದೆ ನಮ್ಮ ರಾಷ್ಟ್ರಕ್ಷೇಮದ ಉದ್ದೇಶಕ್ಕಾಗಿಯೂ ಅವಶ್ಯವಾದದ್ದು. ಭಾರತರಾಷ್ಟ್ರವು ಈಗ ಕೇವಲ ಲೌಕಿಕ ರಾಜ್ಯವಾಗಿದೆ. ಇದರಲ್ಲಿ ಹಿಂದೂ ಜೈನ ಮುಸಲ್ಮಾನ ಸಿಖ ಕ್ರೈಸ್ತ ಜೊರೋಷ್ಟ್ರ ಮೊದಲಾದ ಹತ್ತೆಂಟು ಮತಗಳ ಜನರಿದ್ದಾರೆ. ಆದರೂ ಈ ರಾಜ್ಯವು ಆ ಯಾವ ಒಂದು ಮತಕ್ಕೂ ಸೇರಿದ್ದಲ್ಲ. ಅದು ಯಾವ ಒಂದು ಮತವನ್ನೂ ಅನಿತರವಾಗಿ ತನ್ನದೆಂದು ಅಂಗೀಕರಿಸತಕ್ಕದ್ದಲ್ಲ. ಈ ರಾಜ್ಯದ

ಕ್ಷೇಮಕ್ಕೆ ಇರುವ ಪ್ರಥಮಾಧಾರ ಅದರ ಪ್ರಜೆಯ ಐಕಮತ್ಯ. ಆ ಐಕಮತ್ಯಕ್ಕೆ ಬೇಕಾದ ಪ್ರಥಮ ಅನುಕೂಲತೆ ನಮ್ಮ ನಾನಾಮತಸ್ಥರ ಪರಸ್ಪರ ಸ್ನೇಹ ಸಹಾನುಭೂತಿಗಳು. ಈ ಸ್ನೇಹ ಸಹಾನುಭೂತಿಗೆ ಆವಶ್ಯಕವಾದ ಪೀಠಿಕೆ ಅವರ ಅನ್ಯೋನ್ಯ ಸಾಹಿತ್ಯವ್ಯಾಸಂಗದಲ್ಲಿ ಮತತಾಟಸ್ಥ್ಯ; ಅವರ ಅನ್ಯೋನ್ಯ ಚಾರಿತ್ರಿಕ ಪ್ರಸಂಗಗಳಲ್ಲಿಯೂ ಮತವಿಚಾರೋಪೇಕ್ಷೆಯು ಅದೇ ರೀತಿಯಾಗಿ ನಮ್ಮ ದೇಶಪ್ರೀತಿಯ ಕರ್ತವ್ಯವಾಗುತ್ತದೆ. ನಾವು ಕಟ್ಟುಕಥೆ ನಾಟಕಗಳನ್ನೋದುವಾಗ ಅವುಗಳ ಸಂಗತಿಗಳಲ್ಲಿ ಯಾವುದಾದರೂ ಅಸಂಭಾವ್ಯವೆಂದು ನಮ್ಮ ಮನಸ್ಸಿಗೆ ಶಂಕೆ ಬಂದರೆ, ಆಗ ಆ ಸಂದೇಹವನ್ನು ತಾತ್ಕಾಲಿಕವಾಗಿ ಬದಿಗಿರಿಸಿ, ನಂಬಿಕೆಯಿಂದ ಕಥಾಸರಣಿಯನ್ನು ಅನುಸರಿಸುವುದೇ ಯುಕ್ತ—ಎಂಬ ಕೋಲ್‌ರಿಜ್ (Coleridge) ಕವಿಯ ಉಪದೇಶವು ಪ್ರಸಿದ್ಧವಾಗಿದೆ. ಕೋಲ್‌ರಿಜ್ಜನ ಪರಿಚಯವಿಲ್ಲದ ಹುಡುಗ ಹುಡುಗಿಯರೂ ಜಗದಾದಿಯಿಂದ ನಡಸಿಕೊಂಡು ಬಂದಿರುವ ನೀತಿ ಅದೇ. ಹತ್ತು ತಲೆ ಯಾರಿಗಾದರೂ ಇರುವುದುಂಟೆ? ಯಾರಾದರೂ ಬಂಡಿ ಅನ್ನ ತಿಂದಾರೆ? ಕೋತಿ ಕಡಲು ದಾಟೀತೆ? ಚಿನ್ನದ ಜಿಂಕೆ ಎಲ್ಲಾದರೂ ಇದ್ದೀತೆ? ಇಂಥಾ ಪ್ರಶ್ನೆಗಳನ್ನು ಕೇಳುವುದಕ್ಕಾಗಿ ಮಕ್ಕಳು ಕಥೆಯ ಸ್ವಾರಸ್ಯವನ್ನು ಪಕ್ಕಕ್ಕಿರಿಸಿ ನಿಲ್ಲುವುದಿಲ್ಲ. ಅವರಿಗೆ ಸಂಶಯವೇನಾದರೂ ಬಂದರೂ ಉತ್ತರಕ್ಷಣದಲ್ಲಿಯೇ ಅದು ಮರೆತುಹೋಗಿ, ಕಥೆ ಕೇಳುವ ಕುತೂಹಲವೇ ಅವರಲ್ಲಿ ಎದ್ದು ನಿಲ್ಲುತ್ತದೆ. ಮಹಾಕವಿಯ ಮುಂದೆ ನಾವು ಅಂಥಾ ಮಕ್ಕಳು. ನಾವು ಅನ್ಯಮತೀಯರ ಕಾವ್ಯಗಳನ್ನೋದುವಾಗ ಅದೇ ರೀತಿ ನಮ್ಮ ಮತಭೇದಗಳನ್ನು ಮರೆತು ಕಾವ್ಯದ ಮಾನುಷರಸತರಂಗದಲ್ಲಿ ಮನಸ್ಸನ್ನು ನಿಲ್ಲಿಸಬೇಕು. ತಾತ್ಕಾಲಿಕವಾಗಿ ಸಕಲಮತಸ್ಮರಣೆಯನ್ನೂ ಬಿಟ್ಟರೂ ಸರಿ, ಅಥವಾ ಪ್ರಸಕ್ತವಾದ ಅನ್ಯಮತವನ್ನು ಅಂಗೀಕರಿಸಿದರೂ ಸರಿ, ಪರಿಣಾಮಫಲದಲ್ಲಿ ಎರಡೂ ಒಂದೇ. ಜೈನಕಾವ್ಯವನ್ನು ಓದುವಾಗ ಮನಸ್ಸಿನಲ್ಲಿ ಜೈನನಾಗು; ಶೈವಕಾವ್ಯ ಹಿಡಿದಾಗ ಶೈವನಾಗು; ಬ್ರಾಹ್ಮಣಕಾವ್ಯಪಾಠದಲ್ಲಿ ಬ್ರಾಹ್ಮಣನಾಗು; ಮುಸಲ್ಮಾನ್ ಕಾವ್ಯ ಕೈಯಲ್ಲಿದ್ದಾಗ ಮುಸ್ಲಿಮನಾಗು; ಕ್ರೈಸ್ತಕಾವ್ಯಕ್ಕೆ ಕ್ರಿಸ್ತನಾಗು; ನಾಸ್ತಿಕಕಾವ್ಯದ ಪಾಲಿಗೆ ನಾಸ್ತಿಕನಾಗು. ಆಗ ಆಯಾ ಕಾವ್ಯದ ಅರ್ಥ ಮನಸ್ಸಿಗೆ ಇನ್ನೂ ವಿಶದವಾಗಿ ಹಿಡಿಯುತ್ತದೆ; ಆ ಅನ್ಯಮತದ ಗುಣಾಂಶವೂ ಆಗ ಚೆನ್ನಾಗಿ ಮನಮುಟ್ಟುತ್ತದೆ. ಅಂತೂ ಇಂತೂ ಸ್ವಮತಸ್ಮೃತಿಯನ್ನು ಬಿಟ್ಟಿರಬೇಕಾದದ್ದು ಕಾವ್ಯವಾಚನಸಮಯದಲ್ಲಿ ನಮಗೆ ಧರ್ಮ.

## ಚರಿತ್ರೆಯು ನ್ಯಾಯ

ಇನ್ನೂ ಒಂದು ಧರ್ಮಸೂಕ್ಷ್ಮವುಂಟು. ಪೂರ್ವಕಾಲದ ಅಭಿಪ್ರಾಯ ಸಂಪ್ರದಾಯಗಳನ್ನು ನಮ್ಮ ಕಾಲದ ತಿಳಿವಳಿಕೆಯ ಸುಲೋಚನದ ಮೂಲಕ ನೋಡಿ ಗುಣದೋಷ ನಿಷ್ಕರ್ಷೆ ಮಾಡುವುದು ನ್ಯಾಯವಾಗದು. ವ್ಯಾಸರು ವೇದವನ್ನು ಗ್ರಾಮಾಫೋನ್ ಹಲಗೆಗಳಲ್ಲಿ ಬರಸಿಡದೆ ಅದರ ಬಹುಭಾಗ ವನ್ನು ಕಳೆದುಬಿಟ್ಟರೆಂಬ ಆಕ್ಷೇಪಣೆ ಎಷ್ಟು ಯುಕ್ತವೋ,—ವಿಜಯನಗರದ ರಾಜರು ರೈಲು ಹಾಕಿಸಿರಲಿಲ್ಲವೆಂಬ ಆಕ್ಷೇಪಣೆ ಎಷ್ಟು ಉಚಿತವೋ,— ರಾಮಾಯಣ ಭಾರತಗಳಲ್ಲಿ ಕಾಣಬರುವ ವರ್ಣಾಶ್ರಮವ್ಯವಸ್ಥೆಯನ್ನೂ ಸ್ತ್ರೀಸ್ಥಾನನಿಷ್ಕರ್ಷೆಯನ್ನೂ ನಾವು ಆಕ್ಷೇಪಿಸುವುದು ಅಷ್ಟು ಸಾಧುವಾಗಿರು ತ್ತದೆ. ನೀತಿಭಾವನೆಗಳು ಎಲ್ಲ ದೇಶಗಳಲ್ಲಿಯೂ ಕಾಲಕ್ರಮದಲ್ಲಿ ಪಾರಂಪರ್ಯ ಸರಣಿಯಲ್ಲಿ (ಎವೊಲ್ಯೂಷನ್) ಬೆಳೆದು ಪರಿಷ್ಕೃತವಾದವು. ಯಾವ ಜನದಲ್ಲಿಯೂ ಅವು ಒಂದೇ ಸಲ ಸಮಗ್ರವಾಗಿ ಸಾರ್ವಕಾಲಿಕರೂಪದಲ್ಲಿ ಹುಟ್ಟಿರುವುದಿಲ್ಲ. ನೀತಿಯು ಲೋಕಾನ್ವಯರೂಪ ಎಲ್ಲೆಲ್ಲಿಯೂ ಲೋಕಾನು ಭವದ ಫಲಿತಾಂಶ. ೧೮೫೦ ನೆಯ ಇಸ್ವಿಯಲ್ಲಿ ಮೋಟರುಬಂಡಿಗಳೂ ಏರೋಪ್ಲೇನುಗಳೂ ನಿರ್ಮಿತವಾಗದ್ದಕ್ಕೆ ಯಾರು ಜವಾಬ್ದಾರರೋ, ಅದೇ ಇಸ್ವಿಯಲ್ಲಿ ಹರಿಜನೋದ್ಧಾರದ ಚಳವಳಿ ನಡೆಯದ್ದಕ್ಕೂ ಅವರೇ ಜವಾಬು ಕೊಡಬೇಕಾದವರು. ಇಂದಿನ ಪರಿಸ್ಥಿತಿಯ ಅಳತೆಕೋಲಿನಿಂದ ಹಿಂದಿನ ಪರಿಸ್ಥಿತಿಯ ನ್ಯಾಯಾನ್ಯಾಯಗಳನ್ನು ಅಳೆಯಹೊರಡುವುದು ಅಸಂಗತ. ನಮಗಿರುವ ವಸ್ತುಜ್ಞಾನವೆಲ್ಲ ಪೂರ್ವಿಕರಿಗೆ ಇರಲಿಲ್ಲವೆಂದು ಯಾರಾದರೂ ಹೇಳುವುದಾದರೆ ಅದಕ್ಕೆ ಎದುರು ಹೇಳುವುದು ಕಷ್ಟ. ಆದರೆ ಪೂರ್ವಿಕರ ಉದ್ದೇಶ ಕೆಟ್ಟದ್ದು, ನಮ್ಮದರಷ್ಟು ಒಳ್ಳೆಯದಲ್ಲ ಎಂದು ನೀವು ಹೇಳುವು ದಾದರೆ ಅದನ್ನೊಪ್ಪಿಕೊಳ್ಳುವುದು ಕಷ್ಟ. ರೇಡಿಯೋವಿನ ಕಲ್ಪನೆ ಅವರಿಗಿರ ಲಿಲ್ಲವೆಂಬುದು ವಾಸ್ತವದ ಸಂಗತಿ. ಆದರೆ ಭೂತದಯೆ ಅವರಿಗಿರಲಿಲ್ಲವೆಂದರೆ ಅದು ನಮ್ಮ ಸ್ವಾಭಿಮಾನದ ಕಲ್ಪನೆಯೇ ಆದೀತು. ವಾಸ್ತವಾಂಶವೇನೆಂದರೆ ಮಾನವಪ್ರಗತಿ ಒಂದು ಬೆಳವಣಿಗೆ. ಅದು ಒಂದು ಸಂದರ್ಭಸಂಯೋಗ ವನ್ನಪೇಕ್ಷಿಸುತ್ತದೆ. ಅದು ಶೂನ್ಯಾವರಣದಲ್ಲಿ (ವ್ಯಾಕ್ಯೂಮ್‌ನಲ್ಲಿ) ಆಗ ತಕ್ಕದ್ದಲ್ಲ. ಅದಕ್ಕೆ ಬಾಹ್ಯಪ್ರಚೋದನೆ ಇರಬೇಕು. ಅದಿದ್ದರೆ ಪ್ರಗತಿ ಅದಕ್ಕೆ ಪ್ರತ್ಯುತ್ತರವಾಗಿ ಸಂಭವಿಸುತ್ತದೆ. ಚೋದನೆ (ಸ್ಟಿಮ್ಯುಲಸ್) ಪ್ರತಿವರ್ತನೆಗಳ (ರೆಸ್ಪಾನ್ಸ್) ಸರಪಣಿಯೇ ಪ್ರಗತಿ. ಅದಕ್ಕೆ ಕಾಲ ಬೇಕು

—ಎಲ್ಲ ಬೆಳವಣಿಗೆಗೂ ಬೇಕಾದಂತೆ. ಲೋಕದ ವಿಜ್ಞಾನಾಭಿವೃದ್ಧಿಯಲ್ಲಿ ಕಾಲಪುರುಷನ ಭಾಗ ಒಂದಷ್ಟು ಹೇಗೋ, ನೀತಿವಿವೇಕಾಭಿವೃದ್ಧಿಯಲ್ಲಿಯೂ ಅದು ಹಾಗೆ ಇರುತ್ತದೆ. ಆದದ್ದರಿಂದ ನಾವು ಓದುವ ಕಾವ್ಯ ಯಾವ ಸಮಾಜದ್ದೋ, ಯಾವ ಕಾಲದ್ದೋ, ಆ ಸಮಾಜದ ಮತ್ತು ಆ ಕಾಲದ ನೀತಿಭಾವನೆಗಳನ್ನೂ ತತ್ತ್ವವಿಕಾಸಗಳನ್ನೂ—ಆ ಕಾಲದವರಿಗಿದ್ದ ಪೂರ್ವಾಚಾರಶ್ರದ್ಧೆಗಳನ್ನೂ ಮೂಢಭಕ್ತಿಗಳನ್ನೂ ಕೂಡ—ನಾವು ಆ ಕಾವ್ಯದ ಬಗೆಗೆ ಅಂಗೀಕರಿಸಿಕೊಳ್ಳಬೇಕು. ಈ ಚಾರಿತ್ರಿಕ ನ್ಯಾಯದ (ಹಿಸ್ಟಾರಿಕಲ್ ಜಸ್ಟಿಸ್) ದೃಷ್ಟಿಯಿಂದ ಸಹ ಕಾವ್ಯವಾಚಕನು ತಾತ್ಕಾಲಿಕವಾಗಿ ತನ್ನನ್ನು ತಾನೇ ಸಮಯಾಂತರಕ್ಕೂ ಮತಾಂತರಕ್ಕೂ ಮನಸಾ ವರ್ಗಾಯಿಸಿಕೊಳ್ಳುವುದು ಯುಕ್ತವಾಗುತ್ತದೆ. ಆ ಮನಸ್ಸಿನ ಉದಾರತೆಯೂ ನ್ಯಾಯಸೂಕ್ಷ್ಮವೇದಿತೆಯೂ ಕಾವ್ಯಭಕ್ತಿಯು ನಮ್ಮಿಂದ ಅಪೇಕ್ಷಿಸುವ ಆತ್ಮಸಂಯಮದ ಅಂಶಗಳು.

## ವಾಚಕನ ಯೋಗ್ಯತೆ

ಕಾವ್ಯವ್ಯಾಸಂಗ ಅಗ್ಗದ ವ್ಯಾಪಾರವಲ್ಲ. ಅದೂ ಒಂದು ತಪಸ್ಸು; ಏಕೆಂದರೆ ಕವಿ ತಪಸ್ವಿ. ಈ ಪ್ರಾಚೀನ ವಚನಗಳನ್ನು ಆಲೋಚಿಸಿರಿ :—

> ವಾಲ್ಮೀಕಿರ್ಭಗವಾನ್ ಋಷಿಃ ||
> ವ್ಯಾಸಂ........ತಪೋನಿಧಿಂ || ಭಗವಾನ್ ಬಾದರಾಯಣಃ ||

ತಪಸ್ಸೆಂಬುದು ಭಕ್ತಿ ಶ್ರದ್ಧೆಗಳಿಂದೊಡಗೂಡಿದ ಪರಿಶ್ರಮ. ವಾಚಕನ ತಪಸ್ಸು ತನ್ನ ಕವಿಯೊಡನೆ ಸಮಾನಧರ್ಮಿತೆಯನ್ನು ಸಂಪಾದಿಸಿಕೊಳ್ಳುವುದರಲ್ಲಿರಬೇಕು. ಆ ಸಂಪಾದ್ಯದ ಮುಖ್ಯಾಂಶಗಳಲ್ಲಿ ಕೆಲವನ್ನೀಗ ನೋಡೋಣ :—

(೧) **ಭಾಷಾಜ್ಞಾನ**—ವಿಶೇಷವಾಗಿ ಪದಗಳ ಅರ್ಥಧ್ವನಿಯ, ಅಥವಾ ಅರ್ಥವಾಸನೆಯ, ವಿಷಯದಲ್ಲಿ ಸೂಕ್ಷ್ಮಗ್ರಹಣಶಕ್ತಿ.

(೨) **ಶ್ರೋತ್ರಶಿಕ್ಷೆ**—ಅಕ್ಷರಮೈತ್ರಿ ಪ್ರಾಸಯುಕ್ತಿ ನಾದನರ್ತನಗಳ ಸುಖವನ್ನನುಭವಿಸುವ ಶಕ್ತಿ. ಇದು ಪದ್ಯ ಹಾಡುಗಳನ್ನು ತಾನೇ ಹಾಡಿ ಹಾಡಿ, ಇತರರು ಹಾಡಿದ್ದನ್ನು ಕೇಳಿ ಕೇಳಿ, ಕಲಿಯಬಹುದಾದದ್ದು.

(೩) **ಊಹನ ಪ್ರತಿಭೆ**—ಇದು ಲೋಕಾನುಭವಜ್ಞಾನದ ಉದ್ಗಮನ ಅಥವಾ ಮುನ್‌ಚಾಚು (ಪ್ರೊಜೆಕ್‌ಷನ್). ಹಿಂದೆ ಆಗಿಹೋದದ್ದರ ಅನುಭವವು ಇನ್ನು ಮುಂದೆ ಆಗಬಹುದಾದದ್ದನ್ನು ಮುಂಚಿತವಾಗಿ ಕಟ್ಟಿ ತೋರಿಸುವುದೇ ಊಹೆ; ನಿನ್ನಿನದು ನಾಳಿನದನ್ನು ಈ ಹೊತ್ತೇ ಸೂಚಿಸುವುದು ಊಹೆ. ಹೀಗೆ ಜೀವನಾನುಭವಜನ್ಯವಾದ ಊಹಾ ಪ್ರಸಾರವೇ ಕಾವ್ಯಮರ್ಮದರ್ಶನಕ್ಕೆ ಬೇಕಾದ ಕಣ್ಣು. ಗುಲಾಬಿ ಕಾಣ ದವನು "ಕೋಮಲಾರುಣ"ವೆಂದರೆ ಏನು ತಿಳಿದಾನು? ಮಲ್ಲಿಗೆಮೊಗ್ಗನ್ನೂ ಮಾವಿನ ಕೆಂಚಿಗುರನ್ನೂ ಕಾಣದವನು—

ಕುಂದ ಸುಂದರ ಮಂದಹಾಸ ವಿರಾಜಿತಾಧರ ಪಲ್ಲವಾಂ

ಎಂದರೆ ಆ ಕೆಂಬಿಳಿಯ ಮೆದುಹೊಳಪನ್ನು ಹೇಗೆ ಬಗೆದಾನು? ಇದಕ್ಕಿಂತ ಬಹು ಆಳವಾದ ಸೂಕ್ಷ್ಮಗಳು ಕಾವ್ಯದಲ್ಲಿರತಕ್ಕವು. ಅವುಗಳ ಸಂದರ್ಶನವು ವಾಚಕನಿಗೆ ಅವನು ಮೊದಲೇ ಸಂಪಾದಿಸಿಕೊಂಡಿರುವ ಲೋಕಸೂಕ್ಷ್ಮಾನು ಭವಕ್ಕೆ ತಕ್ಕಂತೆ ಆಗುತ್ತದೆ. ಇಲ್ಲಿ ನಮಗೆ ಮುಖ್ಯವಾದದ್ದು ಅನುಭವದ ಸ್ಥಾನವಿಸ್ತಾರ ಕಾಲದೀರ್ಘತೆಗಳಲ್ಲ, ಅನುಭವದ 'ಪರಿಪಕ್ವತೆ' ಮುಖ್ಯ ವಾದದ್ದು. ಲೋಕಸಹವಾಸದಿಂದ ಅನುಭವದ ಉದ್ಗಮನಶಕ್ತಿಯು ತೀಕ್ಷ್ಣ ವಾಗಿರಬೇಕು.

(೪) **ಪೂರ್ವಭೂಮಿಕೆಯ ಪರಿಚಯ**—ಇದು ಪುರಾಣೇತಿಹಾಸ ದೇಶಚರಿತ್ರೆಗಳಿಂದ ದೊರೆಯತಕ್ಕದ್ದು. ಕಾವ್ಯವಸ್ತುವಿನ ಹಿನ್ನೆಲೆ ತಿಳಿದಿದ್ದ ಹೊರತು ಅದರ ಸ್ವಾರಸ್ಯ ಪೂರ್ತಿಯಾಗಿ ಮನಸ್ಸಿಗೆ ಬರಲಾರದು.

(೫) **ತಾರತಮ್ಯ ವಿವೇಕ**—ಜಗತ್ತಿನ ನಾನಾ ವಸ್ತು ವಿಷಯ ಗಳಲ್ಲಿ, ಸುಖಸುಖಾಭಾಸಗಳಲ್ಲಿ, ಹಿತಹಿತಾಭಾಸಗಳಲ್ಲಿ, ಉತ್ತಮಾಧಮ ಮಧ್ಯಮಗಳುಂಟು. ಅವುಗಳ ನಿರ್ಣಯ ಹೇಗೆ? ಮನುಷ್ಯನಿಗೆ ನಿಜವಾಗಿ ಶ್ರೇಯಸ್ಸೆಂಬುದೊಂದು ಉಂಟೆ? ಅದರ ಸ್ವಭಾವವೆಂಥಾದ್ದು? ಇಂಥ ಮಹಾಲಕ್ಷ್ಯಕುತೂಹಲವಿಲ್ಲದಿದ್ದಲ್ಲಿ ವಾಚಕನು ಕವಿಕೃತಿಯ ಜೀವಸಂಸ್ಕಾರ ಯೋಗ್ಯತೆಯನ್ನು ಗೊತ್ತುಮಾಡಿಕೊಳ್ಳಲಾರ.

(೬) **ಮಾನುಷ್ಯಾಸಕ್ತಿ**—ಮನುಷ್ಯನ ಅಂತರಂಗಚರ್ಯೆ, ಮನುಷ್ಯ ಸ್ವಭಾವದ ಮೇಲೆ ಜಗತ್ಪ್ರಕೃತಿಯ ಪ್ರಭಾವ, ಮನುಷ್ಯಗತಿಯ ಮೇಲೆ ಅದೃಷ್ಟದ

ಪರಿಣಾಮ, ಮನುಷ್ಯನ ಪೌರುಷ ಮಹಿಮೆ, ಮನುಷ್ಯನ ಹಿತಪ್ರಗತಿ—ಹೀಗೆ ಮನುಷ್ಯವಿಚಾರದಲ್ಲಿ-ದೇವತಾವತಾರ ಲೋಕಾಂತರಜನ್ಮಾಂತರಾದಿ ವಿಚಾರಗಳಲ್ಲಿರುವುದಕ್ಕಿಂತ—ಹೆಚ್ಚಿನ ಕುತೂಹಲ. ಮಹರ್ಷಿಗಳೇ ವೇದದಲ್ಲಿ ಅದಕ್ಕೆ ನಿದರ್ಶನವಾಗಿ ಪ್ರಾರ್ಥನೆ ಮಾಡಿದ್ದಾರೆ—

ದೈವೀಃ ಸ್ವಸ್ತಿರಸ್ತು ನಃ |
ಸ್ವಸ್ತಿರ್ಮಾನುಷೇಭ್ಯಃ ||

ದೇವತಾವಿಚಾರವೆಲ್ಲ ಮನುಷ್ಯಕಲ್ಯಾಣಕ್ಕೋಸ್ಕರ.

(೭) **ಮತತಾಟಸ್ಥ್ಯ**—ಕ್ವಚಿಜ್ಜನ ಮತಾಚಾರ ಕುಲಾಚಾರಗಳ ಮೇಲಣ ಅಭಿಮಾನ ಅಸಮಾಧಾನಗಳೆರಡನ್ನೂ ತಾತ್ಕಾಲಿಕವಾಗಿ ಬದಿಗಿರಿಸಿ ಕವಿಯು ಉಪಪಾದಿಸುವ ಮತವಿಷಯದಲ್ಲಿ ತಾನೂ ಅದೇ ಮತದವನಾಗಿದ್ದಿದ್ದರೆ ಹೇಗೋ ಹಾಗೆ ಮನೋಭಾವವನ್ನಿರಿಸಿಕೊಂಡು ಕಥಾಭಾಗವನ್ನು ನೋಡುವುದು; ಮತ್ತು ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಧರ್ಮಾಂಶವನ್ನು ಅಂಥಾದ್ದಲ್ಲದ ಸಂಕುಚಿತ ಧರ್ಮಾಂಶದಿಂದ ಪ್ರತ್ಯೇಕ ಮಾಡಿ ಗ್ರಹಿಸುವುದು.

(೮) **ವಿಶ್ವ ವಿಸ್ತಾರ ದೃಷ್ಟಿ**—ಇದು ದೇಶದ, ಕುಲದ, ಜಾತಿಯ, ಸಮಾಜದ,—ಮನುಷ್ಯರನ್ನು ಮನುಷ್ಯರಿಂದ ಬೇರ್ಪಡಿಸುವ ಎಲ್ಲ ತೆರದ ವರ್ಗ ಅಂತಸ್ತುಗಳ,—ಭೇದಗಳನ್ನು ಮೀರಿ

**ತ್ವಯಿ ಮಯಿ ಸರ್ವತ್ರೈಕೋ ವಿಷ್ಣುಃ ||**

ಎಂಬಂತೆ—ಮತ್ತು ಅದಕ್ಕೆ ಪೀಠಿಕಾಪ್ರಾಯವಾಗಿ—'ತ್ವಯಿ ಮಯಿ ಸರ್ವತ್ರೈಕೋ ಪುರುಷಃ' ('ನಿನ್ನಲ್ಲಿ, ನನ್ನಲ್ಲಿ, ಎಲ್ಲರಲ್ಲಿಯೂ ಇರುವವನು ಒಬ್ಬನೇ ಪುರುಷ'—ಎಂದರೆ ಮನುಷ್ಯತ್ವವು ಸರ್ವಜನಸಾಮಾನ್ಯವಾದದ್ದು) ಎಂಬ ತತ್ತ್ವದ ಸಂತತಾಭ್ಯಾಸ. ಇದೇ ಲೋಕಕಾರುಣ್ಯದ ವಿಸ್ತಾರ. ಇದೇ ಅನುಭವವೇದಾಂತದ ಪ್ರಥಮಾಭ್ಯಾಸ. ಮಹಾಕಾವ್ಯವು ಇದಕ್ಕೆ ದಾರಿ ಮಾಡಿಕೊಡುತ್ತದೆಯೆಂಬ ಕಾರಣದಿಂದಲೇ ಅದಕ್ಕೆ ಆತ್ಮಸಂಸ್ಕಾರಸಾಧನವೆಂಬ ಮನ್ನಣೆ.

## ಸಹೃದಯತೆ

ಕವಿ ಮಾಡಿದ ಕೆಲಸ ಸಾರ್ಥಕವಾಗುವುದು ಸಮಾನಧರ್ಮಿಯಾದ ವಾಚಕನು ದೊರೆತಾಗ. ಅದು ದೈವಯೋಗ. ಏಕೆಂದರೆ ಕವನಕಲೆಯು

ಜೀವಾಳವನ್ನು ಹೇಳಿಕೊಡಬಲ್ಲ ಗ್ರಂಥವಾಗಲಿ ಉಪಾಧ್ಯಾಯರಾಗಲಿ ಹೇಗೆ ಇಲ್ಲವೋ ಹಾಗೆಯೇ ರಸಾನುಭವಕ್ಕೆ ಬೇಕಾದ ಅಂತರ್ಬೋಧೆಯನ್ನು ಹೊರಗಡೆಯಿಂದ ವಾಚಕನೊಳಕ್ಕೆ ತುರುಕಬಲ್ಲ ಪಂಡಿತರು ಎಲ್ಲಿಯೂ ಸಿಕ್ಕಲಾರರು. ಆ ಅಂತರ್ಬೋಧೆಯು ಪೂರ್ವಸಂಸ್ಕಾರದ ಫಲ. ದೀರ್ಘಕಾಲದ ಮತ್ತು ಬಹುವಿಧದ ಜೀವಸಂಸ್ಕೃತಿಯಿಂದ ತೀವ್ರವೂ ಪ್ರಸನ್ನವೂ ಆದ ಅಂತರ್ಬೋಧೆ. ಪಾಕಶಾಸ್ತ್ರ ಪುಸ್ತಕವು ಧಾನ್ಯಶಾಕೋಪಸ್ಕರ ವಿಧಾನವನ್ನು ತಿಳಿಸೀತು; ಪಾಚನದ ಹದವನ್ನು ತಿಳಿಸಲಾರದು; ಹದವು ಮಾತುಗಳಿಂದ ವಿವರಿಸಲಾಗತಕ್ಕ ಗುಣವಲ್ಲ. ಆ ಪುಸ್ತಕವು ಭೋಜನ ವಿಧಾನವನ್ನು ವರ್ಣಿಸೀತು; ರುಚಿಯನ್ನು ಕಲಿಸಲಾರದು; ರುಚಿಲಕ್ಷಣವನ್ನು ಮನಗಾಣಿಸಬಲ್ಲ ಮಾತುಗಳಿಲ್ಲ. ರಸೋತ್ಪಾದನೆಗೆ ಹೇಗೋ ರಸಾಸ್ವಾದನೆಗೂ ಹಾಗೆಯೇ ಒಂದು ಊಹನಸ್ಫೂರ್ತಿ ಆವಶ್ಯಕ. ವಾಚಕನೂ ಕವಿಯಂತೆ ಒಂದು ಭಾವ ನಿರ್ಮಾಣಪ್ರತಿಭೆ (ಇಮ್ಯಾಜಿನೇಷನ್) ಉಂಟಾದವನಾಗಿರಬೇಕು.

ಅವನು ಕಾವ್ಯವನ್ನು ಕೈಗೆ ತೆಗೆದುಕೊಂಡ ಘಳಿಗೆಯಲ್ಲಿ ಅವನ ಮನಸ್ಸಿಗೆ ಬೇಕಾದದ್ದೇನೋ! ಆ ಕಾವ್ಯದಲ್ಲಿರುವುದೇನೋ!! ಒಂದು ದಿನ ಅವನ ಅಭಿರುಚಿಗೆ ಒಪ್ಪಿದ್ದು ಇನ್ನೊಂದು ದಿನ ಸಪ್ಪೆಯೆನಿಸಬಹುದು. ಒಂದು ಕ್ಷಣ ಅವನಿಗಿದ್ದ ಮನಃಪ್ರಸನ್ನತೆ ಇನ್ನೊಂದು ಕ್ಷಣ ಹಾರಿಹೋಗಿರಬಹುದು.

ಕವಿಯ ಸಾಮರ್ಥ್ಯ ಅಸಾಮರ್ಥ್ಯಗಳ ಮಾತು ಹಾಗಿರಲಿ; ವಾಚಕನ ಚಿತ್ತದ ಅವ್ಯವಸ್ಥೆಯೇ ಕಾವ್ಯಕ್ಕೆ ತಕ್ಕ ಬೆಲೆ ದೊರೆಯದಂತೆ ಮಾಡಬಹುದು. ಇತ್ತ ಭಟ್ಟಿಯಿಳಿಸುವವನಿಗೆ ಹದ ಸರಿಯಾಗಿದೆಯೆಂಬ ಭರವಸೆ ಹೇಗಿಲ್ಲವೋ ಅತ್ತ ಸಾರ ಸವಿಯುವವನಿಗೆ ನಾಲಗೆ ತಿಳಿಯಾಗಿದೆಯೆಂಬ ಭರವಸೆ ಹಾಗೆ ಇಲ್ಲ. ಕವಿ ನೀಡಿದ್ದೂ ವಾಚಕ ಬೇಡಿದ್ದೂ ಸರಿಹೊಂದಿದರೆ ಅದು ದೈವಘಟನೆ.

ವೇದದ—ಎಲ್ಲ ಶ್ರೇಷ್ಠವಾಙ್ಮಯದ—ಅರ್ಥಸ್ಫುರಣೆ ಹೇಗೆ ಆಗುತ್ತದೆಂಬುದನ್ನು ವೇದವೇ ಹೀಗೆ ತಿಳಿಸಿದೆ—

ಉತ ತ್ವಃ ಪಶ್ಯನ್ನ ದದರ್ಶ ವಾಚಮ್
ಉತ ತ್ವಃ ಶೃಣ್ವನ್ನ ಶೃಣೋತ್ಯೇನಾಮ್ ।
ಉತೋತ್ವಸ್ಮೈ ತನ್ವಂ ವಿಸಸ್ರೇ
ಜಾಯೇವ ಪತ್ಯ ಉಶತೀ ಸುವಾಸಾಃ ॥ (ಋ. ೮-೭೧-೪)

(ಒಬ್ಬನು ವಾಕ್ಕನ್ನು ಕಂಡರೂ ಕಾಣನು; ಒಬ್ಬನು ಅದನ್ನು ಕೇಳಿದ್ದರೂ ಕೇಳಿಲ್ಲ; ಇನ್ನೊಬ್ಬನಿಗೆ ಅದು—ಸುಖಾಸಕ್ತಳೂ ಸುವಸ್ತ್ರಾಲಂಕೃತಳೂ ಆದ ಭಾರ್ಯೆ ಪತಿಗೆ ಸ್ವೇಷ್ಟದಿಂದ ನಿಜರೂಪವನ್ನು ಪ್ರಕಾಶಪಡಿಸುವಂತೆ,—ತನ್ನ ಅಂತರ್ಯವನ್ನು ತಾನೇ ತೋರಿಸಿಕೊಳ್ಳುತ್ತದೆ.)

ಹಾಗಾದರೆ ವಾಗ್ದೇವತೆಗೆ ಪಕ್ಷಪಾತವುಂಟೇನು? ಆಕೆ ಒಲಿಯಲಿಕ್ಕೆ ನಿಯಮ ನಿಷ್ಕರ್ಷೆಯೊಂದೂ ಇಲ್ಲವೇನು? ಆಕೆ ಪಕ್ಷಪಾತಮಾಡುವವಳಲ್ಲ, ನ್ಯಾಯವನ್ನೇ ನಡಸತಕ್ಕವಳು. ಉಪಾಸಕನ ಅಂತರ್ದೃಷ್ಟಿಗೆ ತಕ್ಕಂತೆ ಆಕೆ ಅನುಗ್ರಹ ತೋರುತ್ತಾಳೆ. ಆಕೆಗೆ ಬೇಕಾದದ್ದು ಕೇವಲ ಬಾಹ್ಯಸಿದ್ಧತೆಯಲ್ಲ. ವಾಚಕನು ಅಕ್ಷರವನ್ನು ಬಾಯಿಂದ ನುಡಿದರೆ ಸಾಲದು; ಪದಕ್ಕೆ ನಿಘಂಟು ಸಿದ್ಧಪಡಿಸಿದ ಸ್ಥೂಲಾರ್ಥವನ್ನು ಗ್ರಹಿಸಿದರೂ ಸಾಲದು; ವಾಕ್ಯದ ಅಂತಸ್ಸೂಕ್ಷ್ಮವನ್ನು ಹುಡುಕುವ ಸತ್ಯಾತುರತೆ ಇರಬೇಕು ಉಪಾಸಕನಿಗೆ. ಅದೇ ಭಕ್ತಿ. ಭಕ್ತಿಯಂತೆ ವರ. ಇದು ವೇದವಾಕ್ಕಿನ ನಿಯಮ:—

ಯಮೇವ ವಿದ್ಯಾಃ ಶುಚಿಮಪ್ರಮತ್ತಮ್  
ಮೇಧಾವಿನಂ ಬ್ರಹ್ಮಚರ್ಯೋಪಪನ್ನಮ್ |  
ಯಸ್ತೇ ನ ದ್ರುಹ್ಯೇತ್ ಕತಮಚ್ಚ ನಾಹ  
ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ ||

(ಎಲೈ ವೇದೋಪಾಧ್ಯಾಯನೆ, ನಿನ್ನ ವಿದ್ಯಾರ್ಥಿಗಳಲ್ಲಿ ಯಾರು ಶುಚಿ ಭೂತನೆಂದೂ, ಜಾಗರೂಕನೆಂದೂ, ಮೇಧಾಶಕ್ತಿವಂತನೆಂದೂ ಮತ್ತು ಬ್ರಹ್ಮಚರ್ಯಾದಿ ನಿಯಮನಿಷ್ಠನೆಂದೂ ನಿನಗೆ ತಿಳಿದಿದೆಯೋ, ಮತ್ತು ಯಾರು ನಿನಗೆ ದ್ರೋಹ ಮಾಡುವವನಲ್ಲವೋ, ಮತ್ತು ಯಾರು ನಿನ್ನ ಸರ್ವ ಸಂಪತ್ತಾದ ನನ್ನನ್ನು ಕಾಪಾಡತಕ್ಕವನೋ ಅಂಥವನಿಗೆ ನೀನು ನನ್ನನ್ನು ದಾನ ಮಾಡು.)

ಈ ವಾಕ್ಯದಲ್ಲಡಗಿದೆ ಕಾವ್ಯೋಪಾಸಕನು ಸಂಪಾದಿಸಿಕೊಳ್ಳಬೇಕಾದ ಅಧಿಕಾರಯೋಗ್ಯತೆಯ ವಿವರಣೆ. ಆ ಎಲ್ಲ ಗುಣಗಳಿಗೂ ಬೆಲೆ ತರತಕ್ಕ ಮಹಾಗುಣ ಸಹೃದಯತೆ.

ಸ ಯಥಾ ಸರ್ವಾಸಾಮಪಾಂ ಸಮುದ್ರ ಏಕಾಯತನಮ್ |  
ಏವಂ ಸರ್ವೇಷಾಂ ವಿದ್ಯಾನಾಂ ಹೃದಯಮೇಕಾಯತನಮ್ ||

—ಬೃಹದಾರಣ್ಯಕ

(ಎಲ್ಲ ನೀರುಗಳಿಗೂ ಸಮುದ್ರ ಹೇಗೆ ಒಂದು ನೆಲೆಮನೆಯೋ ಎಲ್ಲ ವಿದ್ಯೆಗಳಿಗೂ ಹೃದಯ ಹಾಗೆ ಒಂದು ನೆಲೆಮನೆ.)

ಸ ಏಷೋಽನ್ತರ್ಹೃದಯ ಆಕಾಶಃ |
ತಸ್ಮಿನ್ನಯಂ ಪುರುಷೋ ಮನೋಮಯಃ || —ತೈತ್ತಿರೀಯೋಪನಿಷತ್ತು

ಮನುಷ್ಯತೆಯ ಜೀವಾಳ ಮನಸ್ಸು; ಸಕಲಾನುಭವಗಳಿಗೂ ಅಧಿಷ್ಠಾನವಾದ ಆ ಮನಸ್ಸಿರುವುದು ಹೃದಯದಲ್ಲಿ. ಹೃದಯದಲ್ಲಿ, ಆರ್ದ್ರತೆ—ಒದ್ದೆ—ಇರಬೇಕು. ಹೃದಯ ಕಲ್ಲಾಗಿರಬಾರದು, ಕಟ್ಟಿಗೆಯಾಗಿರಬಾರದು. ಚುಚ್ಚಿದರೆ, ಚಿವುಟಿದರೆ, ಅದರಿಂದ ಒಂದು ಕಿರಿಚು ಕೂಗು, ಒಂದು ತೇವದ ಹನಿ ಹೊರಡುವಂತಿರಬೇಕು. ಅದೇ ಸಜೀವ ವಸ್ತುವಿನ ಲಕ್ಷಣ. ಪ್ರತಿವರ್ತನೆಯಿಲ್ಲದ ಹೃದಯಕ್ಕೆ ಒಪ್ಪಿಸಿದ ಕಾವ್ಯವು ಕಿವುಡನ ಬಳಿ ಹಾಡಿದ ರಾಗ; ಕುರುಡನ ಮುಂದೆ ತೋರಿದ ನರ್ತನ. ಯಾರಲ್ಲಿ ಹೃದಯ ಸತ್ತುಹೋಗಿದೆಯೋ ಅವನಲ್ಲಿ ಬೇರೆ ಏನು ಬದುಕಿದ್ದರೆ ಏನು?

ಸರಸ್ವತ್ಯಾಸ್ತತ್ತ್ವಂ ಕವಿಸಹೃದಯಾಖ್ಯಂ ವಿಜಯತಾತ್ || —ಅಭಿನವಗುಪ್ತ

ಕವಿಯುಂ ಸಹೃದಯನುಂ ಶಿವ |
ಶಿವೆಯರ ಪೋಲ್ತೈಕ್ಯಮೊಂದೆ ದೈವಿಕಯೋಗಂ ||
ಭುವನೈಕಭವ್ಯಮಾ ವಾ |
ಕ್ಸವನಂ ಜಯಿಸುಗೆ ಸರಸ್ವತೀ ಪ್ರೀತಿಕರಂ ||

ಶ್ರೀಃ

# ಮುಖ್ಯ ಪದಾನುಕ್ರಮಣಿಕೆ

## ಹ





